ವರುಷ ೩ ಕುಸುಮ ೧೪



# ಮೊದ್ದುಮಗು

(ಕಾದಂಬರಿ)



ನವಗಿರಿನಂದ

*

ವಿ ವೇ ಕ ಸಾ ಹಿ ತ್ಯ ಮಾ ಲೆ
ಮಂಗಳೂರು - 3.

ಸಪ್ಟಂಬರ ೧೯೫೪.



ಮುಖಚಿತ್ರ: ಮುರಲೀಧರ್, ಮಂಗಳೂರು.

ಪಡಿಯಚ್ಚು: ಶಾರದಾ ಛಾಪಖಾನೆ ಮಂಗಳೂರು.



ಬೆಲೆ ೦—೧೨—೦

ಅಧಿಕೃತ ಮಾರಾಟಗಾರರು:

ಶ್ರೀ ಕೆ. ವಿ. ಸುದರ್ಶನ್, ತುಲಸಿತೋಟಂ, ಬೆಂಗಳೂರು.
ಶ್ರೀ ಎ. ಎಚ್. ರಾಮಸ್ವಾಮಿ, ಪುಸ್ತಕವ್ಯಾಪಾರಿಗಳು, ಚಿಕ್ಕಮಗಳೂರು.
M/s. ಜಿ. ನನುಮಲ್ & ಸನ್ಸ್, ಮೈಸೂರು.
M/s. ನ್ಯೂಸ್‌ಪೇಪರ್ ಹೌಸ್, ಮೈಸೂರು.
ಶ್ರೀ ಜಿ. ಎಮ್. ಬಸವಯ್ಯ. ಜೀವನ ಸಾಹಿತ್ಯ ಪುಸ್ತಕಾಲಯ ಮಂಡ್ಯ.
M/s. ಜೋಯಿಸ್ ಎಂಡ್ ಕಂಪೆನಿ, ತಿಪಟೂರು.

ಮುದ್ರಕರು:
ವಿಜಯ ಮುದ್ರಣಾಲಯ
ಮಂಗಳೂರು–1.

ಸಂಪಾದಕ
ರಾಮ ಮೊಳೆಯಾರ ವಿದ್ವಾನ್
ಮಂಗಳೂರು–3.

## ಎರಡು ಮಾತು.



"ಮೊದ್ದು ಮಗು" ಕಾದಂಬರಿಯನ್ನಿದೀಗ ವಾಚಕರ ಮುಂದಿಡುತ್ತಿರುವೆವು. ಸಂಶೋಧನೆ ನಾಟಕ ಅಚ್ಚಾಗಿದ್ದರೂ ಇದೇ ಮೊದಲಾಗಿ ಬಯಂಡಾದುದರಿಂದ ಮೊದಲಾಗಿ ಮೊದ್ದು ಮಗು ಕೈ ಸುತ್ತಿದೆ. ಕೆಲವೇ ದಿನಗಳಲ್ಲಿ ಸಂಶೋಧನೆ ಹೊರಬೀಳುವುದು.

ಹೊಸ ಮಾದರಿಯ ಕಾದಂಬರಿ ನವಗಿರಿನಂದರ ಈ ಮೊದ್ದು ಮಗು. ಬಡತನದಿಂದ ಮಗು ಎಂತು ಮೊದ್ದು ಆಗ ಬೇಕಾಯಿತು ಎಂಬುದನ್ನು ಈ ಕಾದಂಬರಿಯಲ್ಲಿ ಚಿತ್ರಿಸಲಾಗಿದೆ. ಮುದ್ದು ಮಗು ಮೊದ್ದಾಗಿ ಪರಿಣಮಿಸಿದ ಈ ಅಮೂಲ್ಯ ಕೃತಿಯನ್ನಿತ್ತು ನೆರವಾದ ಶ್ರೀ ನವಗಿರಿನಂದರಿಗೆ ಹಾರ್ದಿಕ ವಂದನೆಗಳು.

ಅಂದವಾದ ಪಡಿಯಚ್ಚು ಒದಗಿಸಿಕೊಟ್ಟ ಶಾರದಾ ಛಾಪಖಾನೆಯವರಿಗೂ ಚಿತ್ರಗಾರರಾದ ಶ್ರೀ ಮುರಲೀಧರರಿಗೂ ಶೀಘ್ರದಲ್ಲೇ ಮುದ್ರಿಸಿ ಕೊಟ್ಟ ವಿಜಯ ಮುದ್ರಣಾಲಯದವರಿಗೂ ಸಾದರ ವಂದನೆಗಳನ್ನರ್ಪಿಸುವೆವು.

ನಮ್ಮ ನೆಚ್ಚಿನ ವಾಚಕ ವೃಂದಕ್ಕೆ ಋಣಿಗಳಾಗಿರುವೆವು.

ಸಂಪಾದಕ.



## ವಿವೇಕ ಸಾಹಿತ್ಯಮಾಲೆ, ಮಂಗಳೂರು—೩.

# ನಮ್ಮ ಪ್ರಕಟಣೆಗಳು



| | | | | | | |
|---|---|---|---|---|---|---|
| 1. | ವಿಶ್ವಪ್ರೇಮಿ | ರಾ. ಮೊ. ವಿಶ್ವಾಮಿತ್ರ | (ದ್ವಿತೀಯ ಮುದ್ರಣ) | 1—8—0 | ಪುಟ | 148 |
| *2. | ಕುಟ್ಟಿದೊಣ್ಣೆ | ಎಮ್. ಸುಬ್ರಾಯನ್ | (ಕಥಾಸಂಕಲನ) | 0—8—0 | ,, | 66 |
| *3. | ಸ್ವರ್ಗಲೋಕ | ಎಮ್. ಕೆ. ಭಟ್ | (ನಾಟಕ) | 0—4—0 | ,, | 25 |
| *4. | ತಿಳಿವಿನಹಾದಿ | ರಾ. ಮೊ. ವಿಶ್ವಾಮಿತ್ರ | (ಕಾದಂಬರಿ) | 0-12—0 | ,, | 135 |
| *9. | ದೇವರದಾರಿ | ಸೇವ ನಮಿರಾಜ ಮಲ್ಲ | (ಕಾದಂಬರಿ) | 1—4—0 | ,, | 176 |
| 6. | ಮಣ್ಣ ನಂಜು | ಎಮ್. ಎನ್. ಭಟ್ | (ಕಾದಂಬರಿ) | 0-14—0 | ,, | 87 |
| 7. | ಬೇನೆಯುಬಾಳ್ವೆ | ರಾ. ಮೊ. ವಿಶ್ವಾಮಿತ್ರ | (ಕಾದಂಬರಿ) | 1—8—0 | ,, | 340 |
| 8. | ಪುರಸ್ಕಾರ | ಗಣಪತಿ ಮೊಳೆಯಾರ | (ಕಾದಂಬರಿ) | 0—8—0 | ,, | 89 |
| 9. | ಭ್ರಾಂತಿಯ ಸುಳಿಯಲ್ಲಿ | ಎಮ್. ಎನ್. ಭಟ್ | (ಕಾದಂಬರಿ) | 0-12—0 | ,, | 138 |
| 10. | ಬೆಂದಜೀವಿ | ಪಂ. ಮೂ. ರುದ್ರಮುನಿಸ್ವಾಮಿ | (ಕಾದಂಬರಿ) | 0-12—0 | ,, | 164 |
| 11. | ಸಮಾಜದರ್ಶನ | ಇಂದಿರಾತನಯ | (ಕಾದಂಬರಿ) | 0—8—0 | ,, | 112 |
| 12. | ಹೃದಯ ವೀಣೆ | ಮ. ವಿ. ನಾಯಕ್ | (ಕಥಾಸಂಕಲನ) | 1—0—0 | ,, | 125 |
| 13. | ತ್ಯಾಗಮಯಿ | ರಾ. ಮೊ. ವಿ. | (ಕಾದಂಬರಿ) | 1—4—0 | ,, | 218 |
| 14. | ಮೊದ್ದು ಮಗು | ನವಗಿರಿನಂದ | (ಕಾದಂಬರಿ) | 0-12—0 | ,, | 151 |
| 15. | ಸಂಶೋಧನೆ | ಆನಂದರಾವ್ ಎಂ. ಎ. | (ನಾಟಕ) | 0—8—0 | ,, | 84 |

## ಮುಂದಿನ ಕುಸುಮಗಳು

16. ಹೋರಾಟ (ಕಾದಂಬರಿ) ರಾ. ಮೊ. ವಿಶ್ವಾಮಿತ್ರ
17. ಕಾಳಿಗೆ ಕಾಣಿಕೆ (ಕಥಾಸಂಕಲನ) ಕೈಂತಜೆ ಗೋವಿಂದ ಭಟ್

ಸಾಹಿತ್ಯ ಮಾಲೆಯ ವಾರ್ಷಿಕ ಚಂದಾ ಅಂಚೆವೆಚ್ಚ ಸಹಿತ ರೂಪ್ಯಾ 6 ಮಾತ್ರ. ಪುಸ್ತಕದ ಮುಖಬೆಲೆ M. O. ದ್ವಾರಾ ಕಳುಹಿದವರಿಗೆ ನಮ್ಮ ವೆಚ್ಚದಲ್ಲಿ ಪೋಸ್ಟಲ್ ಸರ್ಟಿಫಿಕೇಟ್ ಪಡೆದು ಕಳುಹಿಸಿ ಕೊಡುವೆವು. ರಿಜಿಸ್ಟರ್‌ದ್ವಾರಾ ಅಪೇಕ್ಷಿಸುವವರು ಆರಾಣೆ ಅಧಿಕ ಕಳುಹಿಕೊಡಬೇಕು.

---

* ಪ್ರತಿಗಳು ತೀರಿವೆ.

# ಮೊದ್ದು ಮಗು

೧

ತಿಮ್ಮ ಎಂಬುದು ಅವನ ರಿಜಿಸ್ಟರ್ ಹೆಸರಲ್ಲ; ಹೆತ್ತವರಿಟ್ಟ ಹೆಸರೂ ಅಲ್ಲ. ಹೆತ್ತವರ ಮನಸ್ಸಿನಲ್ಲಿ ಅವನು ವೆಂಕಟೇಶ ಎಂದು ಪ್ರಸಿದ್ಧನಾಗ ಬೇಕೆಂದಿತ್ತು. ಏಕೆಂದರೆ ಅವನು ಗರ್ಭದಲ್ಲಿದ್ದಾಗ ಅವನ ತಾಯ್ತಂದೆಗಳು ತಿರುಪತಿಯಾತ್ರೆ ಮಾಡಿಬಂದು ಹುಟ್ಟಲಿರುವ ಚೊಚ್ಚಲ ಮಗುವಿಗೆ ಗಂಡಾ ದರೆ ತಿರುಪತೀಶನ ಹೆಸರನ್ನೇ ಇಡುವೆವೆಂದು ಹರಕೆಹೊತ್ತರು. ಅಂತೆಯೇ ಹುಟ್ಟಿದ ಮಗುವಿಗೆ ವೆಂಕಟೇಶ ಎಂದು ನಾಮಕರಣ ಮಾಡಿ ಹಾಗೆಯೇ ಕರೆಯುತ್ತಲೂ ಬಂದರು. ಅದೂ ಅಲ್ಲದೆ ರಾಮಪ್ಪ ಎಂದು ಅವನ ಮುತ್ತಜ್ಜನ ಹೆಸರನ್ನೂ, ಮುದ್ದಣ್ಣ ಎಂದು ಅಜ್ಜನ ಹೆಸರನ್ನೂ ಇಟ್ಟರು. ಆ ರಾಮಪ್ಪಯ್ಯ ಈಗ ಮುತ್ತಜ್ಜಂದಿರ ಸ್ಥಾನದಲ್ಲಿ ಅಡಗಿಹೋಗಿದ್ದರೂ, ಅವನ 'ಬಡಿಗೆಯ ಭೀಮ'ತ್ವದ ಬಿರುದಿನ ಹೆಸರು ಈಗಲೂ ಆ ಗ್ರಾಮದಲ್ಲಿ ಪ್ರಸಿದ್ಧವಾಗಿದೆ. ಆದುದರಿಂದ ಮೊತ್ತಮೊದಲು ಆ ಹಿರಿಯರ ಚರಿತ್ರೆಗೆ ಮನ್ನಣೆಯನ್ನು ಕೊಟ್ಟೇ ಮುಂದುವರಿಯುತ್ತೇನೆ.

ಇಲ್ಲೊಂದು ಸಣ್ಣ ಉಪಕತೆಯಿದೆ. 'ಪ್ರಾರಂಭದಲ್ಲಿಯೆ ಕವಲುಕತೆ ಹೊರಟಿತಲ್ಲಾ ಎಂದು ನೀವು ಆಶ್ಚರ್ಯ ಪಡುವುದಕ್ಕಿಂತ ಮೊದಲೇ ಇರುವ ವಿಷಯವನ್ನು ತಿಳಿಸುವೆ. ಇದು ತಿಮ್ಮಣ್ಣನದೊಂದೇ ಜೀವನ ಚರಿತ್ರೆಯೆಂದು ತಿಳಿಯಬೇಡಿರಿ. ಹಾಗೆ ಬರೆಯಲು ಅವನಲ್ಲಿ ಏನೂ ಮಹತ್ವವಿಲ್ಲ. ಅವನು ತಿರುಪತಿ ವೆಂಕಟೇಶನ ದಯೆಯಿಂದ ಹುಟ್ಟಿದವನೆಂಬುದನ್ನು ಕೇಳಿ, ಅವ ನೊಬ್ಬ ಅವತಾರಪುರುಷನೆಂದಾಗಲೀ, ಅವನು ಹುಟ್ಟಿದಾಗ ದೇವದುಂದುಭಿ ಗಳು ಮೊಳಗಿ, ಊರೊಳಗೆಲ್ಲಾ ಶುಭಶಕುನಗಳಾದುವೆಂದಾಗಲೀ ನೀವು ಕನಸಿನಲ್ಲಿ ಕೂಡ ನೆನೆಯಬಾರದು. ಪುನಃ ಕೇಳಿದರೆ "ಇದು ದಡ್ಡ ತಿಮ್ಮನ ಕತೆ ಸ್ವಾಮಿ" ಎಂದು ಈಗಲೇ ಬೇಕಾದರೆ ಗುಟ್ಟುರಟ್ಟು ಮಾಡಿಬಿಡುವೆನು. ಅವನದೊಂದೇ ಚರಿತ್ರೆಯನ್ನು ಬರೆಯೋಣವೆಂದರೆ ಅವನು ಸಾವಿರಾರು ಜನರಂತೆಯೇ ಹುಟ್ಟಿದ ಸಾಮಾನ್ಯ ವ್ಯಕ್ತಿ. 'ಹಾಗಿದ್ದರೆ ಅವನ ವಿಷಯದ

ಕುರಿತು ಬರೆಯಲಾರಂಭಿಸಿದ್ದೇಕೆ?' ಎಂದು ಕೇಳುವಿರೇನೊ? ಅದಕ್ಕೇ ಹೇಳಿದೆ ಅವನದೊಂದೇ ವಿಷಯವಲ್ಲವೆಂದು. ಅದೇನೋ ಪೂರ್ವಜನ್ಮ ಸಂಬಂಧದಿಂದಾಗಿ ಅವನು ನನ್ನ ಪರಮಾಪ್ತ ಮಿತ್ರ-ಅಷ್ಟೆ. ನನಗಾದರೋ 'ಗ್ರಂಥಕರ್ತ'ನಾಗಬೇಕೆಂದು ಬಹುದಿನಗಳ ಒಂದು ಆಸೆ. ಆದುದರಿಂದ ನನಗೆ ಚೆನ್ನಾಗಿ ತಿಳಿದ ನನ್ನ ಮಿತ್ರ ತಿಮ್ಮಣ್ಣನ ಆಧಾರವನ್ನೆ ಆಶ್ರಯಿಸಿ ಕೊಂಡು, ಅವನಿಗೆ ಸಂಬಂಧಪಟ್ಟ ಉಪಕಥೆಗಳನ್ನೆಲ್ಲ ಹೇಳುತ್ತ, ಅಂದರೆ ತಿಮ್ಮಣ್ಣನ ಹೆಸರಿನಿಂದ ಪ್ರಾರಂಭಮಾಡಿ, ಅವನೊಂದಿಗೆ ಹಾಸುಹೊಕ್ಕಾಗಿ ಇತರ ಸಂಗತಿ ಸಮಾಚಾರಗಳನ್ನು ಹೇಳುತ್ತ ಬಂದು 'ತಿಮ್ಮೋಪಾಖ್ಯಾನ' ವನ್ನು ಬರೆಯಲಾರಂಭಿಸಿದ್ದೇನೆ. 'ತಿಮ್ಮೋಪಾಖ್ಯಾನ'ವೆಂದೇ ಹೆಸರಿಟ್ಟರೆ, ಹಳೆಗಾಲದ ಪುರಾಣ ರೀತಿಯ ಆ ಹೆಸರನ್ನು, ಈಗಣ ಹೊಸಕಾಲದ ಮಂದಿ ಮೆಚ್ಚರೆಂದು, ಪುಣ್ಯಪುರಾಣಗಳಿಗೆ *ಗೇಲಿಕೆಯಾಗಬಾರದೆಂದು ಹಾಗಿಡದೆ "ಮೊದ್ದುಮಗು" ಎಂದು ಹೆಸರಿಟ್ಟೆನು. ಅಲ್ಲದೆ ನೀವು ಈ ಪುಸ್ತಕವನ್ನು ಮುಚ್ಚುವ ವರೆಗೂ ಅವ ನಿಮ್ಮೊಂದಿಗೇ ಇರುತ್ತಾನೆ, ಬಿಟ್ಟು ಹೋಗುವುದಿಲ್ಲ.

ಇಷ್ಟು ಹೇಳಿದುದರಿಂದ ಇದೊಂದು ಹರಟೆ ಎಂದು ನೀವು ಹೇಳಿಬಿಡ ಬಹುದು. ನಿಜ. "ತಿಮ್ಮನ ಹರಟೆ ಪುರಾಣ" ಎಂದರೂ ಈ ಪುಸ್ತಕಕ್ಕೆ ಚೆನ್ನಾಗಿ ಒಪ್ಪುವುದೆಂದು ನಾನೂ ಒಪ್ಪುವೆನು. 'ಹರಟೆ' ಅಂದರೆ ಇಚ್ಛಾನು ಸಾರವಾಗಿ ಹರಡಿಕೊಂಡು ಹೋಗುವ ಮಾತಲ್ಲವೇ? ಹಾಗೆಯೇ ಹರ ಟುತ್ತಾ ಹೋಗುತ್ತದೆ ಈ ಪುಸ್ತಕ. ಆದರೂ 'ಹರಟೆ' ಎನ್ನಲು ನನ ಗೊಂದು ಅಂಜಿಕೆ. ಹರಟೆಗೆ "ಗೊಡ್ಡುಮಾತು" "ಹುಚ್ಚುಚ್ಚಾರ" ಎಂಬ ಅರ್ಥವೇ ತಟ್ಟನೆ ತಲೆಗೆ ಹತ್ತಿ, ಸಂಭಾವಿತರು "ಛೀಕ್" ಎಂದು ಇದನ್ನೆತ್ತಿ ಅತ್ತ ಬಿಸುಟುಬಿಟ್ಟರೆ? ಅಲ್ಲದೆ ಇದು ಹುಚ್ಚು ಮಾತು—ಗೊಡ್ಡು ಮಾತು ಗಳೂ ಅಲ್ಲ. ವಾಸ್ತವವಾಗಿ ನಡೆಯುವ ಸಂಗತಿಗಳೇ ಸರಿ.

ಮೊದ್ದು ಮಗುವಿನ ಈ ಖಂಡದಲ್ಲಿರುವ ತುಂಡುಗಳ ರುಚಿಯನ್ನು ಸವಿಯುತ್ತಾ ಹೋದಂತೆ, ದುರ್ದೈವಿ ತಿಮ್ಮಣ್ಣನ ಭವಿಷ್ಯದ್ರಥವು ಕತ್ತಲೆ ಯಲ್ಲಿ ಮಗುಚಿಕೊಂಡಿತೆಂಬುದನ್ನು ಓದಿ, ನೀವು ಉದಾರ ಹೃದಯಿಗಳಾ ದರೆ ಒಂದು ದೀರ್ಘಶ್ವಾಸವನ್ನು ಬಿಟ್ಟು ಈ ಪುಸ್ತಕವನ್ನು ಮುಚ್ಚಬಹುದು. ಆದರೆ ತಿಮ್ಮಣ್ಣನು ಪುನಃ ನಿಮ್ಮಿಂದಲೇ ಬಿಡಿಸಿಕೊಳ್ಳಲ್ಪಟ್ಟು, ಅಂತಹುದೇ

*ಗೇಲಿಕೆ=ಪರಿಹಾಸ್ಯ.

ಶ್ವಾಸಗಳನ್ನು ಮತ್ತೂ ಹೊರಡಿಸಲೂ ಬಹುದು; ನಿಮ್ಮ ನಿಟ್ಟುಸಿರುಗಳ ಗಾಳಿಯಿಂದಲೇ ಅವನ ಭವಿಷ್ಯದ್ರಥವು ಎದ್ದು ನಡೆಯಲೂ ಬಹುದು. ಏಕೆಂದರೆ ನೀವು ಈ ಗ್ರಂಥವನ್ನು ಮುಚ್ಚಿದರೂ ತಿಮ್ಮನು ಬಾಲ್ಯಾವಸ್ಥೆಯಲ್ಲಿಯೇ ಇರುವನೆಂಬುದನ್ನು ಮರೆಯಬೇಡಿ! ಓಹೋ ಕತೆ ಬಿಟ್ಟು ಹೋಯಿತು.

ತರತರದ ಮರಗಳಿಂದ, ಬಗೆಬಗೆಯ ಹೂಗಳಿಂದ ವಿಧವಿಧದ ಫಲಗಳಿಂದ ಶೋಭಿಸುತ್ತಾ, ಸುಗಂಧಯುಕ್ತವೂ ಆಹ್ಲಾದದಾಯಕವೂ ಆದ ಗ್ರಂಥೋದ್ಯಾನವಾಗಬೇಕೆಂದು ಇದನ್ನು ರಚನೆಮಾಡಿದ್ದೇನೆ; ತಿರುಗುನೋಟದಿಂದ ತಿಮ್ಮಣ್ಣನ ಸುತ್ತೂ ತಿರುಗಾಡಬೇಕು ನೀವು. ಒಂದೊಂದೇ ಪುಟದ್ವಾರಗಳನ್ನು ತೆರೆಯುತ್ತಾ ಮುಂದುವರಿಯಿರಿ. ನಿಮಗೆ ಒಂದಿಷ್ಟಾದರೂ ಸಂತೋಷವುಂಟಾಯಿತೆಂದಾದರೆ, ಅದುವೇ ನನಗಷ್ಟು ಪ್ರೋತ್ಸಾಹವಿತ್ತಂತಾಗುವುದು.

ಪ್ರಾರಂಭದಲ್ಲಿ ಎತ್ತಿಕೊಂಡ ತಿಮ್ಮನ ಮುತ್ತಜ್ಜ ರಾಮಪ್ಪಯ್ಯನ ಕತೆ, ತಿಮ್ಮನ ಹೆಸರಿಗೆ ಮಾತ್ರ ಸಂಬಂಧ ಪಟ್ಟುದಲ್ಲ. ಅವನ ಮನೆತನಕ್ಕೂ ಗ್ರಾಮಕ್ಕೂ ಒಂದಕ್ಕಿಂತ ಒಂದು ಹೆಚ್ಚಾಗಿ ಸಂಬಂಧಿಸಿದೆ. ಆದುದರಿಂದ ಅದನ್ನೇ ಮೊದಲು ಹೇಳುವ.

ಗ್ರಾಮದ ಹೆಸರು ಬೈಲಗುಡ್ಡೆ. ಆ ಗ್ರಾಮವು ಪಡುಗಡೆಯಿಂದ ಮೂಡಲಿಗೆ ಏರುತ್ತಾ, ಸಣ್ಣಸಣ್ಣ ಗುಡ್ಡದ ಪದವುಗಳಿಂದಲೂ ನಡುನಡುವೆ ಬೈಲುಗದ್ದೆ-ಬೆಟ್ಟುಗದ್ದೆ†ಗಳಿಂದಲೂ ಅಲಂಕೃತವಾಗಿರುವುದನ್ನು ಹಕ್ಕಿಯ ನೋಟದಿಂದ ನೋಡಿದರೆ, ಹಾಯಾಗಿ ಮಲಗಲಿಕ್ಕಾಗಿ ದಿನ್ನೆಯ ದಿಂಬುಗಳನ್ನಿಟ್ಟು ಬಯಲ ಹಾಸಿಗೆಯನ್ನು ಹಾಸಿರುವರೋವೆಂಬಂತೆ ಕಾಣುವುದು. ಕಟ್ಟಿಬೆಟ್ಟಿನ ಬಡುವಲಕೋಡಿಯ ಗುಡ್ಡಗಳ ಎಡೆಯ ಒರತೆಯಿಂದ ಹುಟ್ಟಿದ ಒಂದು* ಆ ತೋಡು ಗ್ರಾಮವನ್ನು ನಡುವೆ ಸೀಳಿಕೊಂಡು ಉತ್ತರ ದಕ್ಷಿಣವಾಗಿ ಹಾವಿನಂತೆ ಸುತ್ತಿಕೊಂಡು ಹರಿಯುತ್ತಾ, ಬಳಿಕ ಗ್ರಾಮಕ್ಕೊಂದು ತೆಂಕಣ ಮೇರೆಯನ್ನುಂಟುಮಾಡಿಕೊಂಡು, ಕಲ್ಸಂಕವನ್ನು ದಾಟಿ ಪಡುವಣ ಬಯಲಿಗೆ ಸೇರುವುದು. ಈ ತೋಡು ಆ ಗ್ರಾಮಕ್ಕಾಗಿಯೇ ದೇವರು ಕೊಟ್ಟ ಒಂದು ಒಡ್ಯಾಣ. ಇದು ಕಟ್ಟಿಬೆಟ್ಟಿನ ಗುಡ್ಡದಲ್ಲಿಯೇ ಹುಟ್ಟು

---

† ಬೆಟ್ಟುಗದ್ದೆ = ಗುಡ್ಡಗಳಲ್ಲಿರುವ ಗದ್ದೆ.

* ತೋಡು = ಕಾಲುವೆ.

ವುದು. ಮುತ್ತಜ್ಜನ ಕಾಲದಲ್ಲಿ ಆ ತೋಡಿನ ತಡಿಯಲ್ಲಿ ಇತ್ತು ಕಟ್ಟೆಬೆಟ್ಟು. ದಾರಿಯ ಬದಿಯ ಅಶ್ವತ್ಥ ಕಟ್ಟೆಯಲ್ಲಿ ನೀರನ್ನು ಇಟ್ಟುಕೊಂಡಿದ್ದ ಕಾರಣವೇ ಅದಕ್ಕೆ 'ಕಟ್ಟೆಬೆಟ್ಟು' ಎಂದು ಹೆಸರು ಬಂತಂತೆ. ಮೂಡುಗಡೆಯ ತಾವಿ; ಕೂಜಾವರ, ಕೃಷ್ಣಾರಣ್ಯ ಮುಂತಾದ ಊರುಗಳಿಂದ ಕಡಲತಡಿಯ ಪುಣ್ಯಕ್ಷೇತ್ರಗಳಾದ ದೇವೀಪುರದ ಮಹಾದೇವಿಯ ದರ್ಶನಕ್ಕೂ ತಲೆಗಲ್ಲಿನ ಮಹಾದೇವನ ದರ್ಶನಕ್ಕೂ ಈ ಕಟ್ಟೆಬೆಟ್ಟಿನ ಮಾರ್ಗವಾಗಿಯೇ ಜನರು ಹೋಗಿಬರುತ್ತಿದ್ದರು.

ದೇವೀಪುರವು ಹೊಲತಿಯೊಬ್ಬಳಿಂದ ಕಂಡುಹಿಡಿಯಲ್ಪಟ್ಟ ಪವಿತ್ರ ಕ್ಷೇತ್ರ. ಸರ್ವಪ್ರಾಣಿಗಳ ತಂದೆಯಾದ ದೇವರಿಗೆ ಭಕ್ತಿಯ ವಿಷಯದಲ್ಲಿ ಉಚ್ಚನೀಚರೆಂಬ ಭೇದವಿಲ್ಲವೆಂಬುದನ್ನು, ಚಿದಂಬರದ ಪರಮಶಿವನಂತೆಯೂ, ಉಡುಪಿಯ ಶ್ರೀಕೃಷ್ಣನಂತೆಯೂ, ದೇವೀಪುರದ ದೇವಿಯೂ ತೋರಿಸಿರುತ್ತಾಳೆ. ಹಿಂದೆ ಆ ಪ್ರದೇಶವು ಹುಲ್ಲು-ಹೊದರುಗಳ ತಾಣ. ಭಕ್ತಳಾದ ಹೊಲತಿಯೊಬ್ಬಳು, ಅಲ್ಲೊಂದು ಕಲ್ಲಿನ ಮೇಲೆ ಕತ್ತಿಯನ್ನು ಮಸೆಯುವಾಗ, ಆ ಕಲ್ಲಿನಿಂದ ರಕ್ತವು ಕೋಡಿಗಟ್ಟಿ ಹರಿಯಲಾರಂಭಿಸಿತು! ಹೊಲತಿ ಆಶ್ಚರ್ಯದಿಂದಲೂ ಭಯದಿಂದಲೂ ಮೂರ್ಛೆಹೋಗಿ, ಮತ್ತೆ ಏಳದೆ ಹಾಗೆಯೇ ಆ ದೇವಿಯೊಂದಿಗೆ ವಿಲೀನೆಯಾದಳು. ಈ ಅದ್ಭುತವನ್ನು ಕಂಡು ಪ್ರಶ್ನೆ ಇಟ್ಟು ನೋಡುವಾಗ ಅದು ಒಂದು ಮಹಾಮಾಯೆಯ ಪುಣ್ಯಸ್ಥಳವೆಂದು ಕಂಡುಬಂದಿತು. ಸರಿ. ಗ್ರಾಮಸ್ತರು ಕೂಡಿ ವಂತಿಗೆ ಹಾಕಿ ಆ ಹೊಲತಿಯ ನಿರ್ಯಾಣಸ್ಥಾನದಲ್ಲಿಯೇ ದೇವಾಲಯವನ್ನು ಕಟ್ಟಿಸಿದರು. ಅದುವೆ ದೇವೀಪುರವೆಂದು ಪ್ರಸಿದ್ಧವಾಯಿತು.

ದೇವೀಪುರಕ್ಕೆ ನೇರಾಗಿ ಮೂರುಮೈಲು ಉತ್ತರಕ್ಕೆ ಅದೇ ಕಡಲ ತೀರದಲ್ಲಿ, ತಲೆಗಲ್ಲು ಎಂದು ಸಾರ್ಥಕನಾಮದಿಂದ ನೆಟ್ಟಗೆ ನಿಂತಿರುವ ಬಂಡೆಗಲ್ಲ ಗುಡ್ಡದ ಮೇಲೆ ಕಿರೀಟದಂತೆ ಕಾಣುತ್ತಿರುವ ಮಹಾದೇವನ ದೇವಾಲಯವೂ ಪ್ರಸಿದ್ಧವಾದುದೆ. ದೇವಾಲಯದ ಹೊರ ಅಂಗಣದ ಪಡುಬದಿಯಲ್ಲಿ ನಿಂತು ನೋಡಿದರೆ ಎಂತಹ ಸೌಂದರ್ಯ! ನೆಟ್ಟಗೆ ಕೆಳಗೆ ತೆಂಗಿನ ಮರದಷ್ಟು ಅಡಿಯಲ್ಲಿ ಅಗಾಧವಾದ ಅಪಾರವಾದ ಸಮುದ್ರ. ಸಮುದ್ರದ ತೆರೆಗಳ ಮಧ್ಯ—ಮಧ್ಯದಲ್ಲಿ, ತೆರೆಗಳೊಂದಿಗೆ ಗುದ್ದಾಡಿಕೊಂಡು ಆಟವಾಡುತ್ತಿರುವ ಮದ್ದಾನೆಗಳ ಹಾಗೆ ಕಾಣುವ ಕರಿಕರಿಯಾದ ಹಿರಿಹಿರಿ ಬಂಡೆಗಳು. ಕಡಲಿನ ದೊಡ್ಡ ದೊಡ್ಡ ತೆರೆಗಳು ಅಗಲಗಲವಾಗಿ—ದಪ್ಪದಪ್ಪವಾಗಿ,

ಬಕಾಸುರನ ಬಾಯಿಯಂತೆ ಆಯೆಂದು ತೆರೆದೆದ್ದು ಬರುತ್ತಾ, ಚಾಪೆಯ ಸುರುಳಿಯಂತೆ ಸುತ್ತಿಕೊಂಡು, ಎತ್ತರವಾದ ಮಡಿಕೆಯ ಮೇಲೇರಿ ಧೊಪ್ಪನೆ ರಭಸದಿಂದ ಕೆಳಗೆ ಬಿದ್ದು, ನೀರ್ಮುತ್ತುಗಳನ್ನು ಬಾನಂಗಳದ ಮೇಲೆ ಚೆಲ್ಲ ಗೊಟ್ಟು, ಬಂಡೆಗಳ ಮೇಲೆ ಝೋರೆಂದು ಅಪ್ಪಳಿಸಿಕೊಂಡು, ಹಾರಿ ಭೋರ್ಗರೆಯುತ್ತಾ, ಉಕ್ಕಿಸೊಕ್ಕಿ ಸರಸರನೆ ಮುಂಬಂದು, ಬೆಳ್ನೊರೆಯ ಕೈ ಗಳಿಂದ, ಮಳಲಿನ ದಂಡೆಯ ಸಮೇತವಾಗಿ ಆ ಮಹಾದೇವನ ಕೋಡು ಗಲ್ಲಿನ ಅಡಿಯನ್ನು ತೊಳೆ ತೊಳೆದುಕೊಂಡು, ಗುಳಗುಳನೆ ಹಿಂದಿರುಗಿ, ಮತ್ತೆ ಹಾಗೆಯೇ ಮುಂದುವರಿಯುವ ಆ ಸಮುದ್ರರಾಜನ ಉಲ್ಲಾಸವೇನು? ಸೌಂದರ್ಯವೇನು! ಸಂತೋಷವೇನು! ಸಂಭ್ರಮವೇನು! ವೈಭವವೇನು! ಇವೆಲ್ಲವರಲ್ಲಿಯೂ ಜಡಿತವಾಗುತ್ತಿರುವ ಆ ಗಾಂಭೀರ್ಯವೇನು! ಇದನ್ನು ನೋಡುತ್ತಿದ್ದರೆ ಆ ಕಡಲರಸನ ಕೈಗಳಿಗೆ ಹೇಗೆ ಶ್ರಮವೂ ವಿರಾಮವೂ, ತೃಪ್ತಿಯೂ ಇಲ್ಲವೋ ಹಾಗೆಯೇ ನಮಗೂ ಉಂಟಾಗುವುದಲ್ಲವೆ? ಇಂತಹ ಸೌಂದರ್ಯ ವಿಶೇಷವು ಮದರಾಸಿನ ಬೀಚುಲ್ಯಾಟ್ ಹೌಸ್‌ಗಳಲ್ಲಿಯೂ ನಿಮಗೆ ಸಿಕ್ಕದು. ಇಲ್ಲಿ ಸಂಜೆ—ಮುಂಜೆ, ಹಗಲು—ರಾತ್ರಿಗಳಲ್ಲಿಯೂ ಒಂದೊಂದು ಸಜೀವ—ವಿಶೇಷ ಸೌಂದರ್ಯವನ್ನು ಕಾಣಬಹುದಾಗಿದೆ. ಇಲ್ಲಿಯ ಅದ್ಭುತವಾದ ಪ್ರಕೃತಿ ಸೌಂದರ್ಯ ವಿಶೇಷವನ್ನು ಇನ್ನೂ ಹೆಚ್ಚಾಗಿ ಬಣ್ಣಿಸುವ ಕೆಲಸ ನಿಮ್ಮ ಊಹನೆಗೇ ಬಿಟ್ಟಿರುತ್ತೇನೆ.

ಈ ಎರಡು ಪವಿತ್ರ ದೇವೀ—ದೇವರ ದರ್ಶನಕ್ಕಾಗಿ ಕಟ್ಟಿಬೆಟ್ಟಿನ ಮಾರ್ಗವಾಗಿ ಜನರ ಹೋಗಿಬರೋಣವು ಹೆಚ್ಚಾದುದರಿಂದ, ದೇವೀಪುರದ ಮಾರ್ಗದಲ್ಲಿ ಜೊನ್ನೆಕಟ್ಟೆ ತಲೆಗಲ್ಲಿನ ದಾರಿಯಲ್ಲಿ ಇಡಿಯಾಳ ಕಟ್ಟೆ, ಹೀಗೆ ಇನ್ನೂ ಅಲ್ಲಲ್ಲಿ ಕೆಲವು ನೀರುಗಟ್ಟೆಗಳು ಇದ್ದುವು. ಈ ಎರಡು ದಾರಿಗಳಿಗೂ ಕಟ್ಟಿಬೆಟ್ಟಿನ ನೀರುಗಟ್ಟೆಯೇ ಸಂಧಿಸ್ಥಾನವಾಗಿತ್ತು.

ತೊಂಭತ್ತು ವರ್ಷ ಬದುಕಿ ಎಂಟು ವರ್ಷಗಳ ಹಿಂದೆ ಕಾಲವಾಗಿ ಹೋದ ತಿಮ್ಮಣ್ಣನ ಅಜ್ಜಿ, ಕಟ್ಟಿಬೆಟ್ಟಿನಲ್ಲಿ ನೀರೀವ ಕಾರ್ಯವನ್ನು ಬಹಳ ಶ್ರದ್ಧೆಯಿಂದ ಮಾಡುತ್ತಿದ್ದಳು. ಆ ಅಜ್ಜಿ ಏನಾದರೂ ಮಾತು ಬಂದರೆ, ಅದೊಂದು ವಿಧವಾದ ರಾಗದಿಂದ,—"ನಡೆದು ಬಳಲಿ ಬೆಂಡಾಗಿ ಬಾಯಾರಿ ಬಂದವರಿಗೆ ನೀರುಕೊಟ್ಟು, ಅವರಿಗೆ ಸುಖವಾಗಿ ದೇವದರ್ಶನ ಮಾಡಿಸಿದ

ಪುಣ್ಯದಿಂದ ನಿಮ್ಮನ್ನೂ ನಿಮ್ಮ ಈ ಹೊಸ ಕಾಲವನ್ನೂ ನೋಡುವ ಭಾಗ್ಯವು ನನಗೆ ಸಿಕ್ಕಿತು" ಎನ್ನುವಳು.

"ಇದು ಹೊಸ ಕಾಲವು ಹೇಗೆ ಅಜ್ಜಿ ?" ಎಂದು ನಮ್ಮಂತವರು ಕೇಳಿದರೆ, ಅಜ್ಜಿ ಒಂದು ಉದ್ದದ ಪುರಾಣಕ್ಕೇ ಪ್ರಾರಂಭಮಾಡಿ ಬಿಡುತ್ತಾರೆ— ನೋಡೋ ಮಗು, ಈಗ ಬಸ್ಸು-ಗಿಸ್ಸು ಓಡಾಡುವ ಹಾಗೆ ಆಗ ಬಸ್ಸು-ಗಿಸ್ಸು ಇರಲೇ ಇಲ್ಲಪ್ಪ. ಬಸ್ಸು ಬರಲಿಕ್ಕೊಂದು ಬೀದಿಯಾದರೂ ಬೇಕಷ್ಟೆ? ಈಗಿರುವ ಈ ದೊಡ್ಡ ಉಡುಪಿ ಬೀದಿ, ಆ ಕಲ್ಸಂಕ, ಈ ಪಡು ಬಯಲು, ಅದರಾಚೆಗೆ ಆ ಚಬುಕಿನ ಸಾಲು, ಇವೆಲ್ಲಾ ಆ ಕಾಲದಲ್ಲಿ ಇರಲೇ ಇಲ್ಲ. ಈಗ ಇರುವ ಹಾಗೆ ಆಗ ಪೋಲೀಸಿನವರು ಕೂಡಾ ಇರಲಿಲ್ಲ. ಆ ತೆಂಕುಕೋಡಿಯ ಕಡಲಬದಿಯಲ್ಲಿರುವ ದೇವೀಪುರದ ಮಾಮಾಯೆಯೂ ಬಡಗುಕೋಡಿಯ ಕಡಲಬದಿಯಲ್ಲಿರುವ ತಲೆಗಲ್ಲು ಮಾದೇವನೂ ನಮ್ಮನ್ನೂ ನಮ್ಮೂರನ್ನೂ ಕಾಪಾಡುತ್ತಿದ್ದರು. ಆಗ ಎಲ್ಲರೂ ಗುಡಿಸಲೋ ಕೊಟ್ಟಿಗೆಯೋ ಕಟ್ಟಿಕೊಂಡು ವಾಸವಾಗಿರುತ್ತಿದ್ದರು. ದೊಡ್ಡ ಮನೆತನಗಳೆಂದರೆ ಆಗ ನಮ್ಮೂರಲ್ಲಿ ಎರಡೇ ಎರಡು; ಒಂದು ಬಿಸುಗಲ್ಲಯ್ಯನವರದು, ಇನ್ನೊಂದು ಕುಲಮೂಲ ಮೊಕ್ತೇಸರ್ರು ಛಪ್ಪಾರ್ರ ಮನೆ. ಇವರೇ ದೊಡ್ಡವರು. ಉಳಿದವರೆಲ್ಲಾ ಬಡವರೇ. ಕಷ್ಟಮಾಡಿಯೇ ಹೊಟ್ಟೆ ತುಂಬಿಸಬೇಕು. ಮುಂಜಾನೆ ಗಂಜಿ ಕುಡಿದು ಬುತ್ತೀ ಕಟ್ಟಿಕೊಂಡು ಮಣ್ಣಿನ ಕೆಲಸಕ್ಕೆ ಹೊರಟರೆ ಮತ್ತೆ ಸಂಜೆಗೇ ಮನೆಗೆ ಮರುಳುವುದು......

ಗೂನುಪೂರಾ ಬಾಗಿಹೋಗಿದ್ದ ಆ ಅಜ್ಜಿಯೂ ಆ ಕಾಲದಲ್ಲಿ ಮರ ಏರುತ್ತಿದ್ದಳಂತೆ. ನಮ್ಮ ತಿಮ್ಮನ ತಾಯಿ ಜಲಜಮ್ಮ ಬಾದಾಮಿ, ಆಲ ಮೊದಲಾದ ಮರದ ಎಲೆಗಳನ್ನು ಮುರಿಯಲಿಕ್ಕೂ ಮಾವು-ಹಲಸು-ಗೇರು ಹಣ್ಣುಗಳನ್ನು ಕೊಯ್ಯಲಿಕ್ಕೂ, ಹುಣಸೆ ಕೋಡುಗಳನ್ನು ಉದುರಿಸಲಿಕ್ಕೂ ಬಲು ಸುಲಭವಾಗಿ, ನಿರ್ಭಯವಾಗಿ, ನಿರಾತಂಕವಾಗಿ ಮರವೇರುವುದನ್ನು ನಾನು ನೋಡಿದ್ದೇನೆ! ಅಂದಮೇಲೆ ಅಜ್ಜಿ ಮರ ಹತ್ತಿದುದು ಏನಾಶ್ಚರ್ಯ?

ಹೀಗೆ ಆ ಅಜ್ಜಿ ಹೇಳಿದ ಹಾಗೆ ಕಾಡುಗಳು ನಾಡಾಗಿ, ಬೆಟ್ಟಗಳು ಗದ್ದೆಗಳಾಗಿ ಪರಿಣಮಿಸಿದ ಕಾರಣವೇ ಆ ಗ್ರಾಮಕ್ಕೆ ಬೈಲಗುಡ್ಡೆ ಎಂಬ ಹೆಸರು ಬಂತಂತೆ. ಗುಡ್ಡಗಳನ್ನು ಕಡಿದು ಬಯಲಾಗಿ ಮಾರ್ಪಡಿಸಿದವರಲ್ಲಿ ಕಟ್ಟೆ ಬೆಟ್ಟು ಕರಿರಾಮಪ್ಪಯ್ಯನೇ ಪ್ರಾಮುಖ್ಯ ವ್ಯಕ್ತಿಯೆಂದು ಅಜ್ಜಿಯ ಹೇಳಿಕೆ.

೨

ಅಜ್ಜಿ ಹುಡುಗಿಯಾಗಿದ್ದಾಗ ಕರಿರಾಮಪ್ಪಯ್ಯನ ಮೂಗನ್ನು ನೋಡ ಬೇಕಾದರೆ, ತೆಂಗಿನ ಮರದ ತುದಿ ನೋಡುವಂತೆ ತಲೆಯೆತ್ತಿ ನೋಡಬೇಕಿತ್ತಂತೆ. ಅಷ್ಟು ಎತ್ತರವಾದ ದೇಹ. ಹಾಗೆಯೇ ದಪ್ಪವಾದ ವ್ಯಕ್ತಿ.

ಅಜ್ಜಿ ಅವರ ಕತೆ ಹೇಳಿದುದು ಹೇಗೆಂದರೆ,—ಅವರ ಕೈಕಾಲುಗಳು ಕಬ್ಬಿಣದ ತುಂಡುಗಳ ಹಾಗಿದ್ದುವಂತೆ! ಕಣ್ಣುಗಳು ಕೆಂಡದಂತೆ, ನೀಲವಾದ ಮೂಗು; ದಪ್ಪವಾದ ಜನಿವಾರವನ್ನು ಒಂದು ಸುತ್ತು ಕೊರಳಿಗೆ ಸುತ್ತಿ, ಉಳಿದುದನ್ನು ಎದೆಯ ಮೇಲೆ ಬಿಡುತ್ತಿದ್ದರಂತೆ. ನಡುವಿನಲ್ಲಿ ಮೋಟುಪಂಚೆಯ ಲಂಗೋಟಿ, ಅಷ್ಟೇ ಅವರ ಬಟ್ಟೆ. ಎಲ್ಲಿಗಾದರೂ ದೂರ ಪ್ರಯಾಣ ಮಾಡಬೇಕಾಗಿ ಬಂದರೆ ಮಾತ್ರ ಇನ್ನೊಂದು ಬೈರಾಸನ್ನು ಹೆಗಲ ಮೇಲೆ ಹಾಕಿಕೊಳ್ಳುವರಂತೆ. ಅವರು ಮಾತಾಡುವಾಗ ಗುಡುಗಿನಂತೆ ಕೇಳಿಸುತ್ತಿತ್ತು. ಅವರ ಸರ್ವಾಂಗವೂ ಒಂದೇ ಬಣ್ಣ—ತೊಳೆದ ಕೆಂಡದಂತೆ. ನಮ್ಮೆದುರಿಗೆ ಈಗ ಪ್ರತ್ಯಕ್ಷರಾಗಿ ಬಂದು ನಿಂತರಾದರೆ, ನಾವು ಭೂತವೆಂದು ಹೆದರಿಕೊಳ್ಳುವಂತಹ ಕಾಳಮೂರ್ತಿ!

ಇವರು ಎಷ್ಟು ಕಪ್ಪೋ ಅಷ್ಟೇ ಬಿಳಿಯವರಾಗಿ, ಅಥವಾ ಪ್ರಸ್ಥಳೀಯ ಬಣ್ಣದವರಾಗಿ, ಅಂದರೆ ಆಂಗ್ಲೇಯರಂತೆ ಕೆಂಪಾಗಿ ಊರಿಗೇ ಅಪೂರ್ವವಾದ ಮೈಬಣ್ಣವುಳ್ಳ ಇನ್ನೊಬ್ಬರು ರಾಮಪ್ಪಯ್ಯ ಬೆಳ್ಮಣದಲ್ಲಿದ್ದರು. ಅವರು ಬಿಳಿರಾಮಪ್ಪಯ್ಯ ಎಂದು ಪ್ರಸಿದ್ಧರಾದುದರಿಂದ ಕರಿರಾಮಪ್ಪಯ್ಯನ ವ್ಯಕ್ತಿತ್ವವು ಇಮ್ಮಡಿಸಿತ್ತು!

ಆ ಮುತ್ತಜ್ಜನ ಆಹಾರವಾದರೋ 'ಅಗೋಳಿ ಮಂಜಣ'ನ ಅವತಾರವೇ ಸರಿ! ಹೊತ್ತಿಗೆ ಎರಡು ಸೇರಕ್ಕಿಯ ಅನ್ನ ಅವರಿಗೊಬ್ಬರಿಗೆ ಬೇಕು. ಹಾಗೆಯೇ ಕುತ್ತಿ ಎಣ್ಣೆಯೂ, ತುಪ್ಪವೂ ಬೇಕಂತೆ! ಆದರೆ ಇಂತಹ ಸಂತೃಪ್ತಿಯ ಊಟವು ಅವರಿಗೆ ಸಿಕ್ಕುವುದು ಎಂದೋ ಏನೋ. ಮದುವೆಯಲ್ಲಿಯೋ ಮುಂಜಿಯಲ್ಲೋ! ಅವರ ಸ್ವಂತ ಕಟ್ಟಿಬೆಟ್ಟಿನ ಕೊಟ್ಟಿಗೆಯಲ್ಲಿ ಸರ್ವದಾ ಬಡತನವೇ ಧಿಮಿ ಧಿಮಿ ಕುಣಿಯುತ್ತಿತ್ತು. ಹೊತ್ತಿಗೆ ಎರಡು ಮೂರು ಕುತ್ತಿ ಗಂಜಿಕುಡಿದರೆಂದರೆ ಆಯಿತು ಅವರ ಊಟ!

ತೆಂಗಿನೆಣ್ಣೆ ಕುಡಿಯುವುದರಲ್ಲಿ ತುಂಬಾ ಇಷ್ಟವುಳ್ಳವರಾದ ಕರಿ ರಾಮಪ್ಪಯ್ಯನು, ಯಾರೊಬ್ಬರ ಮನೆಗೆ ಹೋದರೂ, ಜಗಲಿಯಲ್ಲಿ ಕುಳಿತು, "ಯಾರೇ ಅಕ್ಕ! ಒಂದು ತಟಕು ಎಣ್ಣೆ ಕೊಡೆ, ಕಾಲಿಗೆ ಪಸೆ ಮಾಡಲಿಕ್ಕೆ" ಎಂದು ಕೇಳುತ್ತಾರೆ. ಮನೆಯವರು ಅವರ ಗುಟ್ಟು ತಿಳಿಯದೆಯೋ, ದಾಕ್ಷಿಣ್ಯಕ್ಕೊಳಗಾಗಿಯೋ, ಉಪಕಾರಕ್ಕಾಗಿಯೋ ಎಣ್ಣೆಯ ಕಂಚನ್ನೆ ಅವರಿದಿರಿನಲ್ಲಿಟ್ಟು ಒಳಗೆ ಹೋದರೆ ತೀರಿತು, ಎಣ್ಣೆಯ ಕಂಚನ್ನೆ ಎತ್ತಿ ಗಳಗಳನೆ ಕುಡಿದು ತೀರಿಸಿಬಿಡುವರು. ಮುಂದೆ ಮುಂದೆ ಅವರ ಈ ಬಗೆಯ ಕಣ್ಣುಮುಚ್ಚಾಟದ ಎಣ್ಣೆಗಳ್ಳತನವು ಬಯಲಿಗೆ ಬಿದ್ದಮೇಲೆ ಯಾರ ಮನೆಯಲ್ಲಿಯೂ ಅವರಿಗೆ ಎಣ್ಣೆಯ ತಟಕೂ ದೊರೆಯದೆ ಹೋಯಿತು. ಹೆಂಡ ಕುಡುಕನಿಗೆ ಅದು ದೊರೆಯದೆ ಹೋದರೆ ಅವನು ಹೇಗಾಗುವನೋ ಹಾಗೆ ಕರಿ ರಾಮಪ್ಪಯ್ಯರ ಸ್ಥಿತಿಯಾಯಿತು. ದಿನ ಹೋದಂತೆ ಅವರ ಎಣ್ಣೆಯ ದಾಹವು ಮಿತಿಮೀರಿತು. ತಡೆಯಲಾರದೆ ಒಂದು ದಿನ ನೆಟ್ಟಗೆ ಗಾಣಿಗ ರುಕ್ಕನ ಮನೆಗೆ ಹೋಗಿ, ಅವನು ನೋಡು ನೋಡುತ್ತಿದ್ದ ಹಾಗೆಯೇ ತುಂಬಿಟ್ಟಿದ್ದ ಎರಡು ಕೊಡ,—ಹೌದು ಎರಡು ಕೊಡವೆಂದೇ ಅಜ್ಜಿ ಹೇಳಿದ ಲೆಕ್ಕ, ಅವನ್ನೆತ್ತಿ ಗಳಗಳನೆ ಕುಡಿದುಬಿಟ್ಟರಂತೆ!

ಪಾಪ! ಅವರಂತೆಯೇ ರುಕ್ಕನೂ ಕಡು ಬಡವ! ಅವನು ರಾಮಪ್ಪಯ್ಯನೊಡನೆ ಎಣ್ಣೆಯ ನಷ್ಟವನ್ನು ಕೇಳದೆ ಹೇಗೆ ಸುಮ್ಮನಿದ್ದಾನು? ಅದಕ್ಕಾಗಿ ರಾಮಪ್ಪಯ್ಯ ರುಕ್ಕನ ಮನೆಯ ಪಕ್ಕದ ಗುಡ್ಡವನ್ನು ಅಗೆದು, ಬೆಟ್ಟುಗದ್ದೆಗಳಾಗಿ ಮಾರ್ಪಡಿಸಿ, ಅಲ್ಲಿ ಒಂದು ಬಾವಿಯನ್ನೂ ತೋಡಿ ಕೊಟ್ಟನಂತೆ! ಈ ಮಹೋಪಕಾರಕ್ಕಾಗಿ ಗಾಣಿಗರುಕ್ಕನು, ರಾಮಪ್ಪಯ್ಯನಿಗೆ ಬೇಕಾದಷ್ಟು ಎಣ್ಣೆಯನ್ನು ಒದಗಿಸಿಕೊಡುವ ಭಾರವನ್ನೆ ತಾನು ಹೊತ್ತನಂತೆ!

ಆಗಿನ ಸರಕಾರವು ಬಲವಾಗಿರಲಿಲ್ಲವೆಂದು ಅಜ್ಜಿ ಹೇಳುತ್ತಿದ್ದಳು. ಕಾಕ—ಪೋಕರು ಸೇರಿಕೊಂಡು ಆಗಾಗ ಹಳ್ಳಿಗಳಿಗೆ ನುಗ್ಗಿ ಬಹಳ ಲೂಟಿ ಮಾಡುತ್ತಿದ್ದರಂತೆ. ಒಮ್ಮೆ ಭಪ್ಪಾರೀ ಮೋಕ್ತೇಸರ್ರ ಮನೆಗೆ ಹತ್ತಿಪ್ಪತ್ತು ಮಂದಿ ತುಂಟರು ನುಗ್ಗಿದರು. ಆ ಗಲಭೆ ಗುಡ್ಡದಲ್ಲಿ ಮಣ್ಣಗೆಯುತ್ತಿದ್ದ ರಾಮಪ್ಪಯ್ಯನ ಕಿವಿಗೆ ಬಿತ್ತು. ಕೂಡಲೇ ಅವರು ಬಿರುಗಾಳಿಯೋಟದಿಂದ ಬಂದು, ಭಪ್ಪಾರೀ ಮಾಳಿಗೆಯ ಮೇಲೆ ಹತ್ತಿ ಅಲ್ಲಿದ್ದ ಪೋಕರಿಗಳಲ್ಲಿ ಕೆಲವರನ್ನು ದಂಟೆಯಿಂದ ಬಡೆದು ಕೊಂದರು; ಕೆಲವರನ್ನು ಅಂಗಳದಲ್ಲಿ ಒಟ್ಟ

ಲ್ಪಟ್ಟಿದ್ದ ಬೈಹುಲ್ಲ ರಾಸಿಯೊಳಗೆ ತುರುಕಿಸಿ, ಉಸಿರಾಡಲಾಗದಂತೆ ಮಾಡಿದ ರಂತೆ. ಮತ್ತೊಮ್ಮೆ ಕೆಲವು ಪುಂಡರ ತಂಡವನ್ನು ಕೈಕಾಲು ಕಟ್ಟಿ, ಮಟ್ಟ ಮಟ ಮಧ್ಯಾಹ್ನದ ಉರಿಮಳಲಿನಲ್ಲಿ ಹೊರಳಿಸಿ ಹುರಿದಿರುವರಂತೆ.

ಒಮ್ಮೆ ಬೈಲಕರೆ ಅಪ್ಪಯ್ಯನು ಏನೋ ಹಳೆ ಸಿಟ್ಟಿನಿಂದ ಬಿಸುಗಲ್ಲಿನ್ನ ಅಯ್ಯನವರ ಚಿನ್ನದ ಪೆಟ್ಟಿಗೆಯನ್ನು ಕಳವು ಮಾಡಿಸಿ ತಮ್ಮ ಮನೆಯಲ್ಲಿ ಅಡಗಿಸಿಟ್ಟುಕೊಂಡರು. ಬಿಸುಗಲ್ಲಯ್ಯನವರಿಗೂ, ರಾಮಪ್ಪಯ್ಯನಿಗೂ ಒಳ್ಳೆಯ ಅಚ್ಚುಮೆಚ್ಚು. ಅಂತೆಯೇ ಈ ಕಳವನ್ನು ಕುರಿತು ಬಿಸುಗಲ್ಲ ಯ್ಯ ರಾಮಪ್ಪಯ್ಯನೊಡನೆ ದೂರಿಕೊಂಡು ಮೊರೆಯಿಟ್ಟನು. ಕೇಳ ಬೇಕೇ? ಬೈಲಕರೆ ಅಪ್ಪಯ್ಯನು ದೇವರ ಪೂಜೆ ಮಾಡುತ್ತಿದ್ದಾಗ, ನುಗ್ಗಿ ದನು ಕರಿ ರಾಮಪ್ಪಯ್ಯ! ಒಳ್ಳೆಯ ಮಾತು ಪ್ರಯೋಜನಕ್ಕೆ ಬರಲಿಲ್ಲ; ರಾಮಪ್ಪಯ್ಯನದೊಂದೇ ಪೆಟ್ಟು—ಅಪ್ಪಯ್ಯನ ಹತ್ಯೆ! ಬಳಿಕ ಅವರ ಹೆಂಡತಿಯನ್ನು ಚಿತ್ರಹಿಂಸೆಪಡಿಸಿ ಕಾಡಿದ ಮೇಲೆ, ಆ ಚಿನ್ನದ ಪೆಟ್ಟಿಗೆ ರಾಮಪ್ಪಯ್ಯನ ಕೈಗೆ ಸಿಕ್ಕಿತು.

ರಾಮಪ್ಪಯ್ಯ ಅನೇಕ ಕೂಲಿಗಳು ಮಾಡುವ ಕೆಲಸವನ್ನು ತಾವು ಒಬ್ಬರೇ ಮಾಡಿಮುಗಿಸುತ್ತಿದ್ದುದರಿಂದ, ಹಲವು ಜನಕೂಲಿಗಳ ಕೋಪಕ್ಕೆ ಪಾತ್ರರಾಗಿದ್ದರು. ಪಡುರಾಯರು ಒಮ್ಮೆ ಪಡುಬಯಲಿನ ಕೆಲಸವನ್ನು ತೊಡಗಿಸಿದಾಗ, ರಾಮಪ್ಪಯ್ಯನನ್ನು ಕೆಲಸಕ್ಕೆ ಸೇರಿಸಿಕೊಳ್ಳಕೂಡದೆಂದು ಆ ಕೂಲಿಗಳ ಕರಾರು. ಪಡುರಾಯರಿಗೂ ರಾಮಪ್ಪಯ್ಯನ ಮೇಲೆ ಒಳ್ಳೆಯ ಅಭಿಪ್ರಾಯವಿರಲಿಲ್ಲ; "ರಾಕ್ಷಸ, ಹೊಟ್ಟೆಬಾಕ, ತಿಂಡೀಗೂಳಿ" ಎಂದು ರಾಮಪ್ಪಯ್ಯನನ್ನು ಅವರು ಗೇಲಿ ಮಾಡುತ್ತಿದ್ದರು. ಹೀಗಾಗಿ ರಾಮಪ್ಪ ಯ್ಯನಿಗೆ ಆ ಬಯಲಿನ ಕೆಲಸವು ದೊರೆಯಲಿಲ್ಲ.

ಆ ಬಯಲಲ್ಲಿಯ ಒಂದು ಬಾವಿಗೆ ಒಂದು *ಹಣೆಗುತ್ತಿಯನ್ನು ತಂದು ನೆಡಬೇಕಾದ ಪ್ರಸಂಗ ಬಂತು. ಸುಮಾರು ಅರ್ಧ ಮೈಲು ದೂರದಲ್ಲಿರುವ ಉಡುಪ ಬೆಟ್ಟದಲ್ಲಿತ್ತು ಆ ಹೆಮ್ಮರ. ಆ ಪ್ರಚಂಡವಾದ ಗುತ್ತೀ ಹೆಮ್ಮರ ವನ್ನು ಕಿತ್ತು ಹೊರಲು ನಾಲ್ವತ್ತು ಜನರು ಪರಿಪರಿಯಿಂದ ಪ್ರಯತ್ನಪಡು ತ್ತಿದ್ದರಂತೆ. ಗುತ್ತಿ ಮಾತ್ರ ಅಲುಗಲಿಲ್ಲ. ಆಗ ಆ ದಾರಿಯಾಗಿ ಎಲ್ಲಿಗೋ ಹೋಗುತ್ತಿದ್ದ ಕರಿ ರಾಮಪ್ಪಯ್ಯನನ್ನು ಕಂಡು ಪಡುರಾಯರು—"ಓಯ್ ರಾಮಪ್ಪಯ್ಯ, ಸ್ವಲ್ಪ ಈ ಹಣೆಗುತ್ತಿಗೆ ಕೈಕೊಡು ನೋಡುವಾ" ಎಂದರು.

* ಹಣೆಗುತ್ತಿ = ಏತಕ್ಕಾಗಿ ಭೂಮಿಯಲ್ಲಿ ನೆಡುವ ಹೆಮ್ಮರದ ಕಾಂಡ.

ರಾಮುಪ್ಪಯ್ಯ ಅಲ್ಲಿಗೆ ಬಂದು—"ಆಗಬಹುದು. ಆದರೆ ಬೇರೆ ಯಾರೂ ಮುಟ್ಟಕೂಡದು. ನಾನೊಬ್ಬನೇ ಹೊತ್ತುಕೊಂಡು ಹೋಗಿ ನಿಮ್ಮ ಬಯಲಲ್ಲಿ ನೆಡುವೆನು. ಏನು ಕೊಡುತ್ತೀರಿ ಹೇಳಿ" ಎಂದು ಸವಾಲು ಬಿಟ್ಟನು.

"ನೀವೇನು ಕೇಳುವಿರೋ ಕೇಳಿಬಿಡಿ" ಎಂದರಂತೆ ಪಡುರಾಯರು.

"ಸರಿ. ಒಂದು ಅರ್ಧ ಮುಡಿ ಅವಲಕ್ಕಿ, ಇಪ್ಪತ್ತು *ಬನ್ನಂಗಾಯಿ ನೂರು ಬಾಳೇಹಣ್ಣು ಇವಿಷ್ಟು ತಯಾರಾಗಲಿ! ಹಾಗೂ ಇನ್ನುಳಿದ ಬಯಲ ಕೆಲಸವೆಲ್ಲಾ ನನ್ನ ಪಾಲಿಗೇ ಬಿಟ್ಟುಬಿಡಬೇಕು" ಎಂದು ಉತ್ತರವಿತ್ತನು.

ಈ ಕರಾರಿಗೆ ರಾಯರು ಒಪ್ಪಿದರು. ಅಪ್ಪಣೆ ಹೋಯಿತು ಕೂಲಿಗಳೆಲ್ಲರೂ ಗುತ್ತಿಯನ್ನು ಬಿಟ್ಟು ದೂರ ಸರಿದರು. ಗಡುತರಗಾತ್ರದ ರಾಮುಪ್ಪಯ್ಯನು ಲಂಗೋಟಿಯನ್ನು ಸುತ್ತಿ ಕಟ್ಟಿಕೊಂಡು, ಎರಡು ಕೈಗಳಿಂದಲೂ ಆ ಗುತ್ತಿಯನ್ನು ಹಿಡಿದು ಕುಲುಕಿ ಕಿತ್ತು, ಹೆಗಲು ಕೊಟ್ಟು ಹೊತ್ತು, ಲೀಲಾಮಾತ್ರದಂತೆ ಅದನ್ನೊಯ್ದು ಪಡುಬಯಲಿನಲ್ಲಿ ನೆಟ್ಟನು. ಹೇಳಿದಷ್ಟು ತಿಂಡಿ ಹೊಟ್ಟೆಯನ್ನು ಸೇರಿತು.

ಇಂತಹ ವಿಲಕ್ಷಣ ಶಕ್ತಿಮಾನ್ ರಾಮುಪ್ಪಯ್ಯನು ಶಿಲಾರೂಪವನ್ನು ಹೊಂದಿ ಕಾಣಿಸುವನೋ ಎಂಬಂತೆ, ಈಗಲೂ ಆ ಗ್ರಾಮದ ತೋಡಿನ ಮೇಲೆ, ಒಂದು ಕಗ್ಗಲ್ಲಿನ ಸಂಕವಿದೆ. ಇದನ್ನು ರಾಮುಪ್ಪಯ್ಯ ನಾಲ್ಕು ಮೈಲು ದೂರವಿರುವ ಕೃಷ್ಣಾರಣ್ಯದ ಗುಡ್ಡದಿಂದ ಹೊತ್ತು ತಂದು ಅಲ್ಲಿ ಹಾಕಿದನಂತೆ. ಹಾಗೆ ಹೊತ್ತುಕೊಂಡು ಬರುವಾಗ ಒಂದು ಸೊಕ್ಕಿದ ಕೋಣವು ಅವನನ್ನು ಅಟ್ಟಿಸಿಕೊಂಡು ಬರಲು ಒಂದು ಹೆಗಲಿನಲ್ಲಿ ಆ ಕಲ್ಲನ್ನೂ ಇನ್ನೊಂದು ಕೈಯಲ್ಲಿ ಆ ಕೋಣದ ಮೂಗನ್ನೂ ಹಿಡಿದು ಅದನ್ನು ಭಂಗಿಸಿ ಹೆದರಿಸಿ ಓಡಿಸಿಬಿಟ್ಟನಂತೆ. ಈ ಅವಾಂತರದಲ್ಲಿ ಅವನ ಉಡಿದಾರವು ತುಂಡಾಗಿ ಎಲ್ಲಿಯೋ ಪೊದರಿನೊಳಗೆ ಕಾಣೆಯಾಗಿ ಹೋಯಿತಂತೆ. ಹೋದರೆ ಹೋಗಲಿ. ಆ ಕಲ್ಲು ಮಾತ್ರ ಇಂದಿಗೂ ಅಲ್ಲಿಯೇ ಇದೆಯಲ್ಲ!

ಈ ಬಗೆಯ ಅವನ ಸಾಹಸ ಕಾರ್ಯಗಳನ್ನು ಜ್ಞಾಪಕಕ್ಕೆ ತರುವ ಬಾವಿಗಳೂ ಕೆರೆಗಳೂ ಗದ್ದೆಗಳೂ ಬೈಲುಗುಡ್ಡೆ ಗ್ರಾಮದಲ್ಲಿ ಈಗಲೂ ಹಲವಿವೆ. ಕಾಲಗತಿಯಿಂದ ಗುಡ್ಡದ ಕೆಲವು ಬಾವಿಗಳು ನೀರಿಲ್ಲದೆ ಹೋಗಿವೆ.

---

* ಬನ್ನಂಗಾಯಿ= ಅರೆಬಲಿತ ತೆಂಗಿನಕಾಯಿ.

ಹಲವು ವ್ಯವಸಾಯಕ್ಕೆ ಯೋಗ್ಯವಾಗಿವೆ. ಗ್ರಾಮಸ್ಥರ ಆಸ್ತಿಯಲ್ಲಿರುವ ಬೆಟ್ಟುಗದ್ದೆಗಳೆಲ್ಲವೂ ಅನೇಕವಾಗಿ ಆ ಕರಿ ರಾಮಪ್ಪಯ್ಯನ ಅಮಾನುಷವಾದ ಶಕ್ತಿಯ ಫಲವೆಂದೇ ಹೇಳಬಹುದು. ಅವನ ಅನಂತರ ಅದು ಬೈಲಗುಡ್ಡೆ ಗ್ರಾಮ ಎಂದು ಹೆಸರಾಂತಿತು.

೪

ತಿರುಪತೀಶನ ನೆನಪಿಗಾಗಿ, ಇಟ್ಟ ವೆಂಕಟೇಶ, ಮುತ್ತಜ್ಜ ಕರಿ ರಾಮಪ್ಪಯ್ಯನ, ಸ್ಮಾರಕಕ್ಕಾಗಿ ರಾಮಪ್ಪ ಎಂಬ ಈ ಹೆಸರೆಲ್ಲಾ ಹೋಗಿ ತಿಮ್ಮನು 'ತಿಮ್ಮ'ನಾದುದು ಅವನ ಅತ್ತೆ ಲಚಿಮತ್ತೆಯಿಂದ, ಲಚಿಮತ್ತೆ ತಿಮ್ಮನ ತಂದೆಯ ಸೋದರಕ್ಕ. ಅವರು ತಿಮ್ಮನಿಗೆ ಮಾತ್ರ ಅತ್ತೆಯಲ್ಲ; ಆ ಗ್ರಾಮಕ್ಕೆ, ಆ ಊರಿಗೇ, ಆ ನಗರಕ್ಕೇ, ಆ ಇಡಿಯ ಜಿಲ್ಲೆಗೇ ಅತ್ತೆ— ಲಚಿಮತ್ತೆ! ಬಲು ಮಾತಿನವರು. ಮಾತೆಂದರೆ ಬರೇ ಚಿರಿಪಿರಿಯ ಮಾತಲ್ಲ. ಯಾರ ಹಂಗೂ ಇಲ್ಲದೆ ಆಡುವ ಒಳ್ಳೇ ರಂಗಿನ ಮಾತು. ಗಂಡುಸರೊಡನಾಗಲೀ ಹೆಂಗಸರ ಹತ್ತಿರವಾಗಲೀ, ಎಂತೆಂತಹರ ಹತ್ತಿರ ಹೇಗೆ ಹೇಗೆ ಮಾತಾಡಬೇಕೆಂಬುದನ್ನು ತಾವೇ ಬಲ್ಲವರೆಂಬಂತೆ ಅವರ ಮಾತಿನ ಶೈಲಿ. ಆ ಧ್ವನಿಯೋ—ಒಂದು ಚೂರು ಒಡೆದು ಹೋದ ಜಗನ್ನಾಥ ಗಂಟೆಗೆ ಬಡೆದರೆ ಯಾವ ಶಬ್ದವು ಹೊರಡುವುದೋ ಅಂತಹ ಛಿದ್ರ ಘಂಟಾನಿನಾದ. ಮೆಲ್ಲಗೆ ಮಾತನಾಡಿದರೇ ಊರೆಲ್ಲಾ ಕೇಳಿಸುತ್ತದೆ. ಎಲ್ಲಿಯೋ ಒಂದು ಮನೆಯಲ್ಲಿ ಅವರು ಮಾತಾಡುತಿದ್ದರೆ ಸಾಕು, "ಓ! ನಮ್ಮ ಲಚಿಮತ್ತೆ ಊರಿಗೆ ಬಂದರು" ಎಂದು ಊರೆಲ್ಲಾ ಬಾಯಿ ತೆರೆಯುತ್ತದೆ. ಊರಿಗೆ ಬಂದರು ಎಂದರೆ, ಅವರು ಒಂದು ಎಡೆಯಲ್ಲಿ, ಒಂದು ಊರಲ್ಲಿ ಸ್ಥಿರವಾಗಿ ಇರುವವರಲ್ಲವೆಂದೇ ಅರ್ಥ. ಯಾವಾಗಲೂ ಉಡುಪಿಯಲ್ಲಿಯೋ, ಕಾರ್ಕಳದಲ್ಲಿಯೋ, ಮಂಗಳೂರಿನಲ್ಲಿಯೋ, ತಿರುಗಾಡುತ್ತಿರುವರು. ಆ ಜಿಲ್ಲೆಯೊಳಗೆ ಹರಡಿಕೊಂಡಿದ್ದ ಹನುಮನ ಬಾಲದಂತಹ ಥಪ್ಪಾರೀಕುಲದ ದೊಡ್ಡ ದೊಡ್ಡ ಧನಿಕರೆಲ್ಲರೂ ಅವರ ವಾಗ್ವೈಖರಿಗೆ ಸೋತು, ಊರಲ್ಲೆಲ್ಲಾ ದೂರಿ ಬರುವರೆಂದು ಅಂಜಿ ಅವರನ್ನು ಆದರಿಸುತ್ತಿದ್ದರು.

ಲಚಿಮತ್ತೆಯಲ್ಲಿರುವುದು ಅದೊಂದು ಜನವಶೀಕರಣ ಶಕ್ತಿಯೋ ಯುಕ್ತಿಯೋ ಮಂತ್ರವೋ, ಮಾಯೆಯೋ! ತಿಳಿಯದು. ಅವರು ಒಂದು ಮನೆಗೆ ಹೋದರೆ ನಮ್ಮ ನಿಮ್ಮ ಹಾಗೆ ವರ್ತಿಸುವುದಲ್ಲ. ನಾವು ನಮಗೆ

ಪರಿಚಿತರೊಬ್ಬರ ಮನೆಗೆ ಹೋದರೆ ಅಲ್ಲಿಯ ಜನರನ್ನು ಕಂಡ ಮೇಲೆ, ನಗುವೋ ಮಾತೋ ಪ್ರಾರಂಭಿಸುತ್ತೇವಲ್ಲವೆ? ಲಚಿಮತ್ತೆ ಹಾಗಲ್ಲ; ಮನೆಗೆ ಸಮೀಪಿಸಿ ಬರುವಾಗಲೇ ಮನೆಯವರು ಕಣ್ಣಿಗೆ ಬೀಳಲಿ, ಬೀಳದಿರಲಿ, ಗಟ್ಟಿಯಾಗಿ ಅವರ ಹೆಸರನ್ನು ಹೇಳಿ ಕರೆಯುತ್ತಾ ನಗುನಗುತ್ತಾ ಬರುವರು. ಆದುದರಿಂದ ಅವರು ಅಂಗಳಕ್ಕೆ ಬರುವುದರೊಳಗೆ ಲಚಿಮತ್ತೆ ಲಚಿಮತ್ತೆ ಎಂದು ಮನೆಯಲ್ಲಿದ್ದವರೆಲ್ಲ ಹೊರಗೆ ಬಂದು ಅವರನ್ನು ಆದರೋಪಚಾರಗಳಿಂದ ಬರಮಾಡಿಸಿಕೊಳ್ಳುವ ಹಾಗೆ ಆಗುತ್ತದೆ. ಅವರ ಗದ್ದಲವನ್ನು ಕೇಳಿ ನೆರೆಮನೆಯ ಗೃಹಿಣಿಯೂ ಹೊರಗೆ ಬಂದು—"ಯಾವಾಗ ಬಂದಿರಿ ಲಚಿಮತ್ತೇ? ಎಂದು ಅಲ್ಲಿಂದಲೇ ಕೂಗಿ ಕೇಳುತ್ತಾಳೆ. ಅವರು ಇಲ್ಲಿಂದಲೇ ಕೂಗಿ ಉತ್ತರಕೊಡುತ್ತಾರೆ. ನಾಲ್ಕಾರು ಮಾತುಗಳು ಹೀಗೆ ಅತ್ತ ಇತ್ತ ಮನೆಗಳಿಗೆ ಹಾರಾಡುತ್ತಿರುವಾಗ, ಲಚಿಮತ್ತೆ ಬಂದ ಮನೆಯಲ್ಲಿ ಅರ್ಧಂಬರ್ಧ ಕುಳಿತೂ ಕೂಡದೆ, "ಸ್ವಲ್ಪ ನೆರೆಮನೆಯವಳನ್ನ ಮಾತಾಡಿಸಿ ಈಗ ಬಂದೆ" ಎಂದಂದು ತುರುತುರನೆ ಅಲ್ಲಿಗೇ ಹೋಗಿಬಿಡುವರು. ಅಲ್ಲಿಂದ ಹಾಗೆಯೇ ಇನ್ನೊಂದು ಮನೆಗೆ ಹೋಗಿಬಿಡುವುದೂ ಉಂಟು.

ಹೀಗೆ ಮಾತಿಗೆ ಮೊದಲುಮಾಡಿಕೊಂಡೇ ಬರುವ ಲಚಿಮತ್ತೆ—"ಓ ಹೊ! ಜಲಜಾ! ಇದ್ದೀಯಾ ಮನೆಯಲ್ಲೇ? ಹುಲ್ಲು ಹರಿಯಲಿಕ್ಕೆ ಬಯಲಿಗೆ ಹೋಗಿದ್ದಿಯಾ? ಅಂತ ಮಾಡಿದೆ......"

"ಓ! ಅದಕ್ಕೆ ಬಯಲಿಗೆ ಕೇಳುವಷ್ಟು ಗಟ್ಟಿಯಾಗಿ ಕರೆದದ್ದೊ?" ಎಂದು ಯಾರಾದರೂ ಚೋದ್ಯವಾಗಿ ಕೇಳುವುದೂ ಉಂಟು.

"ಎಲ್ಲಿಂದ ಬರುವುದು ಲಚಿಮತ್ತೆ?" ಎಂದು ಗೃಹಿಣಿ ಜಲಜಾ ಕೇಳುತ್ತಾಳೆಂದು ತಿಳಿಯಿರಿ.

ಅದಕ್ಕೆ ಲಚಿಮತ್ತೆ—"ನಾನೊ? ಆಗಲೇ ಬೆಳಿಗ್ಗೆ ಗಂಟೆ ಎಂಟಕ್ಕೇ ಮಂಗಳೂರಿನಿಂದ ಬಸ್ಸು ಇಳಿದು ಬಂದುಬಿಟ್ಟಿದ್ದೆ ಕಾಣೇ. ನಮ್ಮ ಸರಸೂನ ಗಂಡ ಸುಬ್ರಾಯರ ಹೆಂಡ್ತಿಗೆ ಕಾಯಿಲೇ ಅಂತಲ್ಲಾ? ಹ್ಯಾಗುಂಟೋ ಏನೋ ಅಂತ ಮೊದಲು ಅಲ್ಲಿಗೇ ಹೊಕ್ಕೆ......"

"ಸರಸೂನ ಗಂಡ ಸುಬ್ರಾಯ್ರ ಹೆಂಡ್ತೀಂದ್ರೆ......?"

"ಅವಳೇ ಕಾಣೇ ಸರಸೂ!"

"ಓ! ಏನವಳಿಗೆ? ಹ್ಯಾಗುಂಟು?"

ಷ್ರೆ! ಒಂದೂ ಇಲ್ಲ! ಧಾಡಿ ಅವಳಿಗೆ! ಗಂಡನ *ಕೊಂಡಾಟ ಹೆಚ್ಚಾಗಿ ಬಿದ್ದುಕೊಂಡಿದ್ದಾಳೆ ಮಾರಾಯಿತ್ತಾ ಹಾಗೆ. ಸುಮ್ಮಸುಮ್ಮನೇ ಜನಾ ಸೂ ಅಂದರೆ ಸೂಂಟೇ ಅನ್ನುತ್ತೆ. ನನ್ನ ಹತ್ತಿರ ಅವಳು ಭಲೇ ಚಂದಾಗಿ ಬಾಯಿ ಬಾಯಿ ಕೊಟ್ಟು ಮಾತಾಡಿದಳು. ಕೂತುಕೊಳ್ಳಿ ಲಚಿಮತ್ತೆ, ಮಧ್ಯಾಹ್ನ ಇಲ್ಲಿಯೇ ಉಂಡುಹೋಗಿ ಅಂತ ಭಾರೀ ಒತ್ತಾಯ ಅವಳದು. ಆಯ್ತು ಸರಸೂ, ನಮ್ಮ ಜಲಜನ್ನ ಸ್ವಲ್ಪ ಮಾತಾಡಿಸಿ ಬಂದುಬಿಡುತ್ತೇನೆ— ಅಂತ ಹೇಳಿ ಇಲ್ಲಿಗೆ ಬಂದುಬಿಟ್ಟೆ, ಹೊಃ! ಮರೆತೇಹೋಯ್ತು; ನಗರ ನರ್ಸಮ್ಮ ಆ ಸರಸೂಗಾಗಿ ಒಂದು ಜತೆ ರವಕೇಕಣ ಕೊಟ್ಟು ಕಳಿಸಿದ್ದಾಳೆ ನನ್ನ ಹತ್ತಿರ—"

"ಅದೆಂಥಾ ರವಕೆ? ಯಾವ ಬಣ್ಣ?—" ಎಂದು ಜಲಜಾ ನಡುವೆ ಬಾಯಿಹಾಕಿ ಕುತೂಹಲದಿಂದ ಕೇಳದೆ ಹೇಗೆ ಬಿಟ್ಟಾಳು?

ಅದಕ್ಕೆ ಲಚಿಮತ್ತೆ—"ಅದೇನೋ ಹೇಳ್ತಾರಲ್ಲಾ ಸಿಲ್ಕಾ ಥಲ್ಕಾ ಪುಲ್ಕಾ ಅಂತ, ಅದೇ ಒಂದು ಜಾತಿ!" ಎಂದು ಆ ರವಕೆಯ ಕಣವನ್ನು ಬಿಡಿಸಿ ತೋರಿಸುತ್ತಾ "ಕೆಂಪೂ ಅಲ್ಲ—ಗಿಂಪೂ ಅಲ್ಲ, ಅಂಥಾದ್ದೊಂದು ಹೆಸರಿಲ್ಲದ ಬಣ್ಣ. ಅವಳ ಮನೆಯಲ್ಲಿ ಬಿಡಾರ ಇರುವ ಆ ಅಯ್ಯರ್ರ ಹುಡುಗಿ ಹಾಕಿಕೊಂಡ ಚೆಂದ ನೋಡಿ ಮರುಳಾಗಿ ತನ್ನ ಸ್ನೇಹಿತೆಗೇ ಅಂತ ತಕ್ಕೊಂಡು ಕೊಟ್ಟು ಕಳಿಸಿದ್ದಾಳೆ. ಹುಚ್ಚು! ಮತ್ತೆ ನೋಡೆ ಜಲಜಾ, ಆ ಅಯ್ಯರ್ರ ಷೋಕಿಗೆ ಮರುಳಾಗಿ ಅವರ ಹುಡುಗಿನೇ ತನ್ನ ಮಗನಿಗೆ ಮದುವೆ ಮಾಡುವುದು ಅಂತ ಇದ್ದಾರೆ"—ಹೀಗೆಂದು ಮುಖವನ್ನು ಫಕ್ಕನೆ ಜಲಜಮ್ಮನ ಕಿವಿಯ ಬಳಿಗೊಯ್ದು ಗುಸುಗುಸನೆ— "ಆ ಹುಡುಗಿ ಕೂಡಾ ನನಗೆ ಅವನೇ ಗಂಡ ಆಗಬೇಕೂ ಅಂತ ಹಟ ಹಿಡಿದಿದಂತೆ! ವಿ-ಚಿ-ತ್ರ! ನನಗೆ ಗೊತ್ತೇ ಇಲ್ಲಮ್ಮ ಈ ಧಿಮಿಕಾಟ! ನಾನಂತೂ ನನ್ನ ಗಂಡನ್ನ ನೋಡಲಿಕ್ಕೆ ಕೂಡಾ ನಾಚಿಕೆಪಟ್ಟುಕೊಂಡಿದ್ದೆ! ಹುಂ, ಅದೇ ನನಗೆ ಈ ಗತಿ ತಂತಮ್ಮ!..." ಹೀಗೆನ್ನುವಾಗ ಏಕೋ ಲಚಿಮತ್ತೆಯ ಕಣ್ಣಿನಲ್ಲಿ ಹನಿದುಂಬಿ ಗಂಟಲು ಕಟ್ಟಿಕೊಳ್ಳುತ್ತದೆ. ಆದರೆ ಯಾರಾದರೂ ಆ ದುಃಖದ ಕಾರಣ ವಿವರಗಳನ್ನು ಕೇಳಿದರೆ ಅವರು ಹೇಳುವುದಿಲ್ಲ. ಫಕ್ಕನೆ ಮಾತನ್ನು ತಿರುಗಿಸಿ ಬೇರೆ ಬೇರೆ ವಿಷಯಕ್ಕೆ ಹಾರಿಸಿ ಬಿಡುತ್ತಾರೆ.

---

* ಕೊಂಡಾಟ = ಪ್ರೀತಿಯ ಸಲಿಗೆ

ಅವರು ತಂದಿದ್ದ ಆ ಅಪೂರ್ವ ವಸ್ತುವನ್ನು ನೋಡಲಿಕ್ಕೆ ಅವರ ಸುತ್ತು ಒಂದು ಚಿಕ್ಕ ಗುಂಪೇ ಕೂಡಿಬಿಡುತ್ತದೆ. ಅವರ ಮಾತೂ ಒಂದರಿಂದೊಂದಕ್ಕೆ ಚಿಗಿದುಕೊಂಡೇ ಹೋಗಲಾರಂಭಿಸುತ್ತದೆ. ಮಧ್ಯೆ ಮಧ್ಯೆ "ಅಪ್ಪ ಎಲ್ಲಿ?" "ಅಡಿಗೆಯೇನು?" "ದನ ಕರೆಸುತ್ತದೊ?" "ಹಾಲು ಮಜ್ಜಿಗೆ ಉಂಟೊ?" "ತರಕಾರಿ ಬೆಳೆಸಿದ್ದಿಯಾ?" ಇತ್ಯಾದಿ ಪುಟ್ಟ ಪುಟ್ಟ ಪ್ರಶ್ನೆಗಳೂ ಬಳುಕಿಬಳುಕಿ ಬರುವುವು. ಇವುಗಳ ಉತ್ತರ ಪ್ರತ್ಯುತ್ತರಗಳಾದ ಮೇಲೆ, ಮೊದಲು ಎತ್ತಿದ ದೊಡ್ಡ ಮಾತನ್ನೆ ಮುಂದುವರಿಸಿಕೊಂಡು ನಡೆಯುವುದೂ ಉಂಟು; ನಡುಮಾತೇ ಸ್ವಲ್ಪ ದೊಡ್ಡದಾಗಿ ಬಿಟ್ಟರೆ, ಮೊದಲೆತ್ತಿ ಬಿಟ್ಟ ಮಾತು ಮರಿತು ಬೇರೊಂದು ಅಡ್ಡ ಮಾತಿನ ಮೇಲೆ ಹಾರಿಬಿಡುವುದೂ ಉಂಟು. ಕಣ್ಣು-ಕೈ-ಬಾಯಿಗಳ ವಿಚಿತ್ರವಾದ ಅಭಿನಯಗಳಿಂದ "ಹೌದು ಮತ್ತೆ!" "ಹಾಗೇಸರಿ!" "ಅಲ್ಲದೆ ಉಂಟೇ?" "ಅಡ್ಡಿಯೇನು?" ಇತ್ಯಾದಿ ಒತ್ತು ಮಾತುಗಳನ್ನು ಒತ್ತೊತ್ತಿ ನುಡಿಯುವಾಗ, ಪೋಸ್ಟಾಫೀಸಿನ ನೌಕರನು ಮುದ್ರೆಹೊಡೆಯುವಂತೆ ಮಾತಿಗೊಂದೊಂದು ಮುದ್ರೆ ಬಿದ್ದಂತಾಗುತ್ತದೆ.

ಹೀಗೆ ಮಾತಾಡುವಾಗ ಅವರು ಕೂತಲ್ಲೇ ಕುಳಿತಿರುವರೆಂಬಿರಾ? ಇಲ್ಲಯಿಲ್ಲ! ತಮ್ಮ ಸ್ವಂತ ಮನೆಯಂತೆ ಒಳಗೆಲ್ಲಾ ತಿರುಗಾಡುವರು. ನೀರು ತರುವುದೋ ಮನೆ ಸಾರಿಸುವುದೋ, ಮೇಲೋಗರ ಹಚ್ಚುವುದೋ ಮೊದಲಾದ ಮನೆಯವರು ಮಾಡುವ ಕೆಲಸಗಳನ್ನು ಅವರ ಕೈಯಿಂದ ಕಿತ್ತುಕೊಂಡು ತಾವೇ ಮಾಡಲಾರಂಭಿಸುವರು. ಆದರೆ ಸಂಪೂರ್ಣ ಮಾಡಿ ಮುಗಿಸಲಾರರು. ಅರ್ಧದಲ್ಲಿ ಇನ್ನೊಂದಕ್ಕೆ ತೊಡಗುವರು. ಒಮ್ಮೊಮ್ಮೆ ಅವರ ಸುತ್ತುಮುತ್ತು ತುಂಟ ಹೆಣ್ಣು ಗಂಡುಗಳು ಸೇರಿ ಕೂಗಿ ಗಲಾಟೆ ಮಾಡಲಾರಂಭಿಸಿದರೆ "ಛೀ! ಕಾಗೆಗಳಾ! ಮುಚ್ಚಿರಾ ಬಾಯಿ!" ಎಂದು ಮನೆಯದುರುವಂತೆ ತಮ್ಮ ಛಿದ್ರ ಘಂಟಾನಿನಾದದಿಂದ ಗದರಿಸಿ, ಎಲ್ಲರನ್ನೂ ಹೆದರಿಸುವರು. ಅದು ಸಾಧಿಸದಿದ್ದರೆ—"ಇಲ್ಲಾ! ನಾನಿನ್ನು ಇಲ್ಲಿ ಇರುವುದೇ ಇಲ್ಲಾ! ಸಾಕೋ ಸಾಕು!" ಎಂದೊಂದು ಬೊಬ್ಬೆ ಹೊಡೆದು ನಿಜವಾಗಿಯೂ ಓಡಿಯೇ ಹೋಗಿಬಿಡುವರು. ಎಲ್ಲರೂ ಕೂಡಿ ಸಮಾಧಾನ ಮಾಡಿ ಕರೆದರೆ ಮತ್ತೆ ಬರುವುದೂ ಉಂಟು, ಬಾರದಿರುವುದೂ ಉಂಟು.

ಯಾರಾದರೂ ಹುಡುಗಿಯರು ಸೋಮಾರಿತನದಿಂದ, ಕುಳಿತುಕೊಂಡು ನಿಧಾನವಾಗಿ ಮುಸುರೆ ತಿಕ್ಕುವುದೋ, ಮನೆವರೆಸುವುದೋ, ಹೊಸ್ತಿಲು ಬರೆಯುವುದೋ, ಸೆಗಣಿ ಸಾರಿಸುವುದೋ, ಬೆರಣಿ ತಟ್ಟುವುದೋ

ಕಂಡರೆ ಅವರಿಗೆ ಎಲ್ಲಿಲ್ಲದ ಕೋಪ ಬಂದುಬಿಡುತ್ತದೆ. ಲಚಿಮತ್ತೆಗೆ ಸೋಮಾರಿತನವೆಂದರೇ ಆಗದು. "ಹೂಂ! ಪ್ರಾಯದ ಹುಡುಗಿಯರು ಮುದುಕಿಯರ ಹಾಗೆ ಕೂತುಕೊಂಡು ಮೈಯೆಳೆಯುತ್ತಾ ಕೆಲಸ ಮಾಡುವುದುಂಟೆ? ಛೀ! ಬಾಗಿಕೊಂಡು ಮಾಡಲಿಕ್ಕೇನು ಧಾಡಿ!" ಎಂದು ಚುಚ್ಚುವ ಹಾಗೆ ಮಾತಾಡಿ, ತಾನೇ ಅವರ ಕೈಯಿಂದ ಆ ಕೆಲಸವನ್ನು ಕಿತ್ತುಕೊಂಡು ತುರತುರನೆ ಮಾಡಿಯೇ ತೋರಿಸಿ, ಅವರಲ್ಲಿ ಲಜ್ಜೆಯನ್ನೂ ಹುರುಪನ್ನೂ ಹುಟ್ಟಿಸಿಯೇ ಬಿಡುವರು. ಹಾಗೆಂದು ಯಾರಿಗೂ ಅವರ ಮೇಲೆ ಕೋಪ ಬರುವುದಿಲ್ಲ. ಬದಲಾಗಿ ಆದರವೆ. "ಈ ದಿನ ಇಲ್ಲೇ ಊಟ ಮಾಡಿ ಹೋಗಿ ಲಚಿಮತ್ತೆ." ಎಂದು ಪ್ರತಿಮನೆಯೂ ಅವರನ್ನು ಆದರಿಸುತ್ತಿತ್ತು. ಒಮ್ಮೊಮ್ಮೆ ಅವರು ಅನೇಕ ಮನೆಗಳಲ್ಲಿ ಬರುವೆ ಬರುವೆನೆಂದು ಹೇಳಿ ಕೊನೆಗೆ ಯಾವುದಾದರೊಂದು ಮನೆಯಲ್ಲಿ ಊಟಮಾಡುವರು. ಆದರೂ ಅವರ ಮೇಲೆ ಯಾರೂ ರೇಗದೆ "ಆ ಪಿರಿಕಿ ಲಚಿಮತ್ತೆಯನ್ನು ನಂಬುವುದುಂಟೆ? ಯಾರ ಮನೆಯ ಸ್ಪೆಷಲ್ ಅನ್ನಕ್ಕೆ ಅವರ ಅದೃಷ್ಟವೋ ಏನೊ!" ಎಂದುಕೊಂಡು ತಮ್ಮೊಳಗೆ ತಾವೇ ನಗುತ್ತಿದ್ದರು. ಸ್ಪೆಷಲ್ ಅನ್ನವೆಂದರೆ, ಆ ಊರಿನವರೆಲ್ಲರೂ ಕುಚ್ಚಲನ್ನವನ್ನೇ ಉಣ್ಣುವುದು ವಾಡಿಕೆ. ಲಚಿಮತ್ತೆ ನೇಮನಿಷ್ಠೆಯ ಮಡಿ ಹೆಂಗುಸಾದುದರಿಂದ ಬೆಳ್ತಿಗನ್ನವನ್ನೆ ಉಣ್ಣುವರು.

ಯಾರ ಮನೆಗೆ ಹೋಗುವಾಗಲೂ ಲಚಿಮತ್ತೆ ಬರೀ ಕೈಯಿಂದ ಹೋಗುವುದಿಲ್ಲ. ಅಂದರೆ, ಮಕ್ಕಳಿಗೇನಾದರೂ ತಿಂಡಿ-ಗಿಂಡಿ ಒಯ್ಯುವರೆಂದಲ್ಲ; ತಿರುಗಿ ಕೇಳಿದರೆ ಮಕ್ಕಳಿಗೆ ತಿಂಡಿಯ ಮಾತೇ ಅವರ ಬಳಿಯಲಿಲ್ಲ. ಆ ಮಾತು ಬಂದರೆ ಅವರು ನಿರ್ದಾಕ್ಷಿಣ್ಯದಿಂದ—"ಮಕ್ಕಳಿಗೆಲ್ಲ ತಿಂಡಿ-ಗಿಂಡಿ ಖಂಡಿತಾ ಕೊಡಕೂಡದು. ಕೆಟ್ಟೇ ಹೋಗುತ್ತಾರೆ. ಅದು ಹೊಟ್ಟೆಗೂ ಕೇಡು. ಸುಖವಾದ ಬಿಸಿ ಬಿಸಿ ಸಾರನ್ನ-ಮೊಸರನ್ನ ಇದರಷ್ಟು ಸೌಖ್ಯ ಬೇರೊಂದಿಲ್ಲ." ಎಂದು ಗಟ್ಟಿಯಾಗಿ ಅಬ್ಬರಿಸಿ ಹೇಳಿದರೆಂದರೆ, ಆ ಮಾತು ಎಲ್ಲೆಲ್ಲಿಯೂ ಪ್ರತಿಧ್ವನಿಸುತ್ತಿತ್ತು. ಅವರು ಮಕ್ಕಳನ್ನು ಹೊತ್ತು ಹೆತ್ತು ಸಾಕಿ ಸಲಹಿದವರಲ್ಲವಾದರೂ, ಅವರ ಕೆಲವು ಮಾತುಗಳಲ್ಲಿ ಮಾತ್ರ ಹೆತ್ತವರ ಅನುಭವವು ಅಡಗಿತ್ತು. ಹಾಗಾದರೆ ಅವರು ಮನೆ ಮನೆಗೆ ಹೋಗುವಾಗ ಏನನ್ನು ಕೊಂಡೊಯ್ಯುವರೆಂದರೆ, ಅವರು ಬೈಲಗುಡ್ಡೆ ಗ್ರಾಮದಲ್ಲಿ ಬಸ್ಸಿನಿಂದಿಳಿಯುವಾಗ, ಒಂದು ಗೇಣುದ್ದದ ಮಲ್ಲಿಗೆ ದಂಡೆಯನ್ನು ತರುವರೆಂದು ಇಟ್ಟುಕೊಳ್ಳೋಣ. ಮೊದಲು ಸರಸರನೆ ಹೊಸಬೀಡಿಗೆ ಹೋಗಿ

"ಪದ್ಮಾವತೆ! ಪದ್ಮಾವತೆ! ಮಂಗಳೂರಿನ ಮಲ್ಲಿಗೆ ಹ್ಯಾಗುಂಟು ನೋಡೆ! ಗಮ! ಗಮ!—" ಎಂದು ಕೂಗುತ್ತಾ ಅದನ್ನು ಕೊಡುವರು. ಒಂದು ಗಂಟು ಕೊಟ್ಟ ಹಾಗೆ! ಆ ಮಲ್ಲಿಗೆ ದಂಡೆ ನಿಜವಾಗಿ ಒಬ್ಬಳ ತಲೆಗೆ ಮಾತ್ರ ಸಾಕಾಗುವಷ್ಟೇ ಇದ್ದರೂ, ಅಲ್ಲಿ ಇನ್ನೂ ಕೆಲವು ಹೆಂಗಳೆಯರಿದ್ದು, ಅವರು ತಮಗಿಲ್ಲವಲ್ಲಾ ಎಂದು ಬಾಯಿ ತೆರೆದು ಪಿಳಿಪಿಳಿ ನೋಡುವ ಸಂದರ್ಭ ಬಂದರೆ ಫಕ್ಕನೆ ಲಚಿಮತ್ತೆ "ಚೂರಿ ತಾರೇ ಇಲ್ಲಿ" ಎಂದು ಅಧಿಕಾರ ಹೊರಡಿಸುವರು. ಒಬ್ಬಳು ಓಡಿಹೋಗಿ ಒಂದು ಚೂರಿ ತಂದು ಕೊಟ್ಟ ಕೂಡಲೇ ಲಚಿಮತ್ತೆ ಆ ಗೇಣುದ್ದದ ಹೂದಂಡೆಯನ್ನು ಚೂರು ಚೂರು ಮಾಡಿ ಎಲ್ಲರಿಗೂ ಹಂಚುತ್ತ—"ಸಾಕು! ಹೆಸರಿಗೆ ಮಾತ್ರವೇ ಆದರೂ ಮಂಗಳೂರು ಮಲ್ಲಿಗೆ ಅಂದರೆ ಭಾರೀ ವಿಶೇಷ! ಗಮುಗಮಾ ಮನೆ ಪೂರಾ ಪರಿಮಳವಾಗಲಿ!" ಎಂದು ತಮ್ಮ ಛಿದ್ರ ಘಂಟಾನಿನಾದದ ಮುದ್ರಾವಚನದಿಂದ ಹೇಳುವರು.

ಅನಂತರ *ಪಟ್ಟಾಂಗ—ಗಿಟ್ಟಾಂಗ ಎಲ್ಲಾ ಆದಮೇಲೆ ಲಚಿಮತ್ತೆ ಅಲ್ಲಿಂದ ಹೊರಡುವಾಗ, ಏನಾದರೊಂದು ವಸ್ತುವನ್ನು ಅಂದರೆ ಗುಳ್ಳದ ಕಾಯಿಯೋ, ಮಾವಿನಮಿಡಿಯೋ, ಹಣ್ಣೋ, ಹಲಸಿನ ಸೋಳೆಯೋ; ಅದೇನೂ ಇಲ್ಲದಿದ್ದರೆ—"ನಿನ್ನ ಉಪ್ಪಿನಕಾಯಿ ಏನುಂಟೆ? ನೋಡುವಾ!" ಎಂದು ಕೇಳುತ್ತಾರೆ. ಒಮ್ಮೊಮ್ಮೆ ಕೇಳದೆ ಅವರೇ ಹುಡುಕಿ ಕೈಹಾಕಿ ತೆಗೆದುಕೊಳ್ಳುವುದೂ ಉಂಟು. ಆದರೆ ಅದೇನೂ ಕೊಳ್ಳೆಯಲ್ಲ ಲೂಟಿಯಲ್ಲ; ಉಪ್ಪಿನಕಾಯಿಯಾದರೆ ಒಂದೇ ಒಂದು ಚೂರು; ಗುಳ್ಳ—ಮಾವಿನ ಕಾಯಿಯಾದರೆ ಒಂದೇ ಒಂದು. ನಾವೀಗ ಉಪ್ಪಿನಕಾಯಿಯೊಂದಿಗೇ ಕೊಂಚ ಮುಂದುವರಿಯೋಣ.

ಆ ಪ್ರಶ್ನೆಗೆ ಮನೆಯಾಕೆ ಹೀಗೆ ಹೇಳುತ್ತಾಳೆ:—"ಹೊಸ ಉಪ್ಪಿನ ಕಾಯಿ ಈ ವರ್ಷ ಹಾಕಲೇ ಇಲ್ಲ ಲಚಿಮತ್ತೆ. ಮಾವಿನಮಿಡಿ ಭಾರೀ ಕಡಮೆ. ಅದೂ ಸಿಕ್ಕಲಿಲ್ಲ. ಹಳೇ ಉಪ್ಪಿನಕಾಯಿ ಮಾತ್ರವೇ ಉಂಟು. ಅದೂ ಬೂಸರು ಬಂದದ್ದು."

"ಬೂಸರು ಬಂದರೇನಾಯಿತು? ಅದೇ ಬೇಕು ಕೊಡು. ಅದನ್ನೆ ಒಂದು ಚೂರು ಕೊಡು. ನಿನ್ನ ಕೈಯ ಉಪ್ಪಿನಕಾಯಿಯನ್ನು ಪರೀಕ್ಷೆ

* ಪಟ್ಟಾಂಗ=ಹರಟೆ.

ಮಾಡಿಸಿ ಮೆಡ್ಲು ಕೊಡಿಸುತ್ತೇನೆ ನಿನಗೆ" ಎಂದು ಲಚಿಮತ್ತೆ, ಒಂದೇ ಒಂದು ಚೂರು ಉಪ್ಪಿನ ಕಾಯಿಯನ್ನು ಒಯ್ದು, ಸಿಂಗಾರಕ್ಕನ ಮನೆಗೆ ಹೋಗಿ ಅವಳಿಗೆ ಆ ಉಪ್ಪಿನಕಾಯಿಯನ್ನು ಬಹುಮಾನವಾಗಿ ಕೊಡುತ್ತಾ— "ನೋಡಿದಿಯಾ ಸಿಂಗಾರಿ! ಈ ಮಿಡಿ ಉಪ್ಪಿನಕಾಯಿ ಹ್ಯಾಗುಂಟು ಕಮ್ಮಗೆ! ಹೊಸಬೇಡು ಪದ್ಮಾವತಕ್ಕ ಹಾಕಿದ್ದು. ವರ್ಷ ಒಂದಾದರೂ ಕೆಡಲಿಲ್ಲ ನೋಡೇ! ಹಾಕಿದರೆ ಹೀಗಲ್ಲವೇ ಉಪ್ಪಿನಕಾಯಿ ಹಾಕಬೇಕು!—" ಎಂದು ಪದ್ಮಾವತಕ್ಕನಿಗೆ ಅವರೇ ಹೊರಡಿಸುತ್ತಾರೆ ಮೆಡಲು. ಅನಂತರ ಅಲ್ಲಿಂದ ಹೊರಡುವಾಗ ಇನ್ನೊಂದು ವಸ್ತುವನ್ನು ಒಯ್ಯುವರು ಹೀಗಾಗಿ ಅವರು ಒಂದು ರೀತಿಯ ವಿಚಿತ್ರ ಸ್ವಭಾವದವರೇ ಆಗಿದ್ದರು. ಆದ್ದರಿಂದ ಅವರನ್ನು ಪಿರಿಕಿ ಎಂದೂ ಕರೆಯುತ್ತಿದ್ದರು.

೫

ಪಿರಿಕಿ ಲಚಿಮತ್ತೆ ಎಂದು ಅವರೆದಿರೇ ಯಾರಾದರೂ ಹೇಳಿದರೆ ಅವರೇನೂ ಸಿಟ್ಟಾಗುವುದಿಲ್ಲ. ಬದಲಾಗಿ ನಗುತ್ತಾ—"ಅಲ್ಲಾ ನಾನು ಚುರುಕು ಲಚಿಮತ್ತೇ" ಎಂದು ಹೇಳುವರು. ಒಮ್ಮೊಮ್ಮೆ ಅವರ ಈ ಚುರುಕು ವಾಚಾಳಿತನವೇ ಪಿರಿಕಿಯಾಗಿ ಹೋಗುವುದೂ ನಿಜ. ಒಮ್ಮೆ ಏನೋ ಭಕ್ತಿ ಪರವಶರಾಗಿ ಬೀದಿಯ ಸಾಲ್ಮರಗಳಿಗೆ ಸಾಷ್ಟಾಂಗ ನಮಸ್ಕಾರ ಮಾಡಿದ್ದಾರಂತೆ! ಏಕೆಂದು ಕೇಳಿದುದಕ್ಕೆ "ಈ ಸಾಲುಮರಗಳೆಂದರೆ ದೇವರಿದ್ದಹಾಗೆ. ಮಧ್ಯಾಹ್ನದ ಬಿಸಿಲಿನ ಜಳದಲ್ಲಿ ನಡೆಯುವವರಿಗೆ ಈ ಮರಗಳಿಂದಾಗುವ ಉಪಕಾರವು ಅಲ್ಪವಾ ಸ್ವಲ್ಪವಾ? ಎಲೆಗಳು ತುಂಬಿ ತಣ್ಣಗಾಗಿರುವ ಕೊಂಬೆರೆಂಬೆಗಳ ಮೇಲೆ, ಎಷ್ಟು ಹಕ್ಕಿಗಳಿಗೆ ಸ್ಥಳ ಕೊಡುತ್ತವೆ ಈ ಮರಗಳು! ಆಹಾ! ಈ ಮರಗಳಿಗೆ ಪೂಜೆ ಮಾಡಿದರೆ ಸಾಕು! ಎಷ್ಟೋ ಪುಣ್ಯ!" ಎಂದು ಉತ್ತರವಿತ್ತಿದ್ದಾರೆ. ಮುಖ್ಯವಾಗಿ ಅವರು ಮನೆ ಮನೆಗಳಿಗೆಲ್ಲ ಹೊಕ್ಕು ಮಂದಿಯನ್ನು ಅನಾವಶ್ಯಕವಾಗಿ ಮಾತಾಡಿಸುವುದರಿಂದಲೇ ಪಿರಿಕಿಯಾದರೆಂದು ಕೆಲವರನ್ನುವರು. ಎಲ್ಲರ ಮೇಲೆಯೂ ಅವರಿಗೆ ಒಂದೇ ವಿಧವಾದ ಪ್ರೀತಿಯೆಂಬುದಕ್ಕೆ ಅದು ಗುರುತೆಂದು ನನಗೆ ತೋರುತ್ತದೆ. ಅವರಿಗೆ ಆಸ್ತಿಪಾಸ್ತಿ ಮನೆಮಾರು ಎಂದು ಒಂದೂ ಇರಲಿಲ್ಲ. ಆದರೂ ಅವರು ಆಸೆಯುಳ್ಳವರಲ್ಲ; ದಾನ ಬುದ್ಧಿಯವರು. ಆದುದರಿಂದ ಅವರನ್ನು ಪಿರಿಕಿ ಎನ್ನುವರು ಕೆಲವರು. ಅವರಿಗೆ ಕೊಂಚ ಅಶನಾರ್ಥ

ಮಾತ್ರ ಬರುತ್ತಿತ್ತು. ಅದನ್ನು ಅವರು ಉಪಯೋಗಿಸಿಕೊಳ್ಳದೆ ಹಾಗೆಯೇ ಮಿಗಿಸಿಟ್ಟು ಕೆಲವು ನೂರು ರೂಪಾಯಿಗಳಾಗಿ ಮಾಡಿ ಅದನ್ನು ಹಾಗೆಯೇ ಕಲಾಭೂಷಣೀ ಪಾಠ ಶಾಲೆಗೆ ದಾನಮಾಡಿದ್ದಾರೆ. ಹೀಗೆ ತ್ಯಾಗ ಮಾಡಿದ ವರನ್ನು ಮರುಳರೆನ್ನಬಹುದೆ? ಅವರು ಯಾರಿಗೂ ಏನೂ ಕೆಡುಕು ಮಾಡ ಲಿಲ್ಲ. ನಿಜವಾದ ವಿಧವೆ. ಸನ್ಯಾಸಿನಿ. ಪರಂತು ಅವರು ಬಾಲವಿಧವೆಯೇ ಆಗಿರಬೇಕು. ಅವರಷ್ಟು ಕ್ರಮವಾಗಿ ವಿಧವಾವ್ರತವನ್ನು ಪಾಲಿಸುವವರು ವಿರಳ. ಎಂದೆಂದಿಗೂ ಬೆಳ್ತಿಗನ್ನದ ಒಪ್ಪೊತ್ತು ಊಟ. ಅದೂ ಅನ್ನ ಗೊಜ್ಜು ಮಜ್ಜಿಗೆ ಇಷ್ಟರಲ್ಲಿ ಮುಗಿಯಬೇಕು ನಾಲಗೆ ಚಪಲವುಳ್ಳವರಲ್ಲ. ಇದರ ಮೇಲೆ ಆಗಾಗ ವ್ರತ—ಉಪವಾಸ—ನೇಮ—ನಿಷ್ಠೆ ಎಲ್ಲವನ್ನೂ ಪಾಲಿಸುತ್ತಿದ್ದರು.

"ಇಷ್ಟೆಲ್ಲಾ ನೇಮ—ನಿಷ್ಠೆ ಯಾಕೆ ಲಚಿಮತ್ತೆ?" ಎಂದು ಯಾರಾದರೂ ಕೇಳಿದರೆ "ಈ ಪಾಪಿ ಜೀವಕ್ಕೆ ವೈಭೋಗ ಯಾಕೆ ಕರ್ಮಕ್ಕೆ? ಶತಪಾಪಿ ನಾನು!" ಎನ್ನುವರು.

"ನೀವೆಂಥ ಪಾಪ ಮಾಡಿದ್ದೀರಿ ಲಚಿಮತ್ತೆ?" ಎಷ್ಟೋ ಒಳ್ಳೆದ ಮಾಡಿದ್ದೀರಿ! ಶಾಲೆಯ ನಿಧಿಗೆ ಎಲ್ಲವನ್ನೂ ತ್ಯಾಗಮಾಡಿದ್ದೀರಿ!"

"ಹೌದೌದು! ನನ್ನ ತ್ಯಾಗ! ಮಾಡಿದ ಪಾಪಾನ ಮುಚ್ಚುವುದಕ್ಕೇ ಆಯ್ತು ಈ ತ್ಯಾಗವೂ ರಾಗವೂ!"

"ಅಂಥಾ ಪಾಪ ನೀವೇನು ಮಾಡಿದ್ದೀರೊ?—"ಎಂದು ಬಿಡದೆ ಪಟ್ಟು ಹಿಡಿದು ಒಮ್ಮೆ ಕೇಳಿದಾಗ—"ನನ್ನ ಸ್ವಾಮಿಯನ್ನೇ ನಾನು ಕೊಂದವಳು! ಪಾಪಿ!" ಎಂದು ಅವರು ಹೇಳಿದುದನ್ನು ಕೇಳಿ ಯಾರಿಗೆ ತಾನೇ ಆಶ್ಚರ್ಯ ವಾಗಲಿಕ್ಕಿಲ್ಲ!

"ನಿಮ್ಮ ಸ್ವಾಮಿಯನ್ನು ನೀವೇಕೆ ಕೊಲ್ಲುವಿರಿ ಲಚಿಮತ್ತೆ? ಆಯುಷ್ಯ ಮುಗಿದರೆ ಎಲ್ಲರೂ ಸಾಯುತ್ತಾರೆ." ಎಂದು ಅವರಿಗೆ ಸಮಾಧಾನ ಮಾಡ ಹೋದರೆ "ಅಲ್ಲಲ್ಲ, ನನ್ನ ಸ್ವಾಮಿಯನ್ನು ನಾನೇ ಕೊಂದೆ" ಎನ್ನುತ್ತಾ ದುಃಖಿ ಸುವರು ಲಚಿಮತ್ತೆ.

ಅವರ ಸ್ವಾಮಿ ಯಾರು? ಯಾವಾಗ ಆಗಿತ್ತು ಅವರ ಮದುವೆ? ಇದು ಯಾರಿಗೂ ತಿಳಿಯದು. ಎಂದಿನಿಂದಲೋ ವಿಧವಾರೂಪದಲ್ಲಿಯೇ ಕಾಣಿಸುತ್ತಿದ್ದಾರೆ. ಅವರು ಹಾಗೆ ಹೇಳಿದುದನ್ನು ಕೇಳಿ ಈಗಿನ ಹುಡುಗಿ ಯರು ಸುಮ್ಮನೆ ಬಿಡಲಿಲ್ಲ. ಬಹಳ ಒತ್ತಾಯ ಮಾಡಿ ಅವರ ಸೌಭಾಗ್ಯದ

ಕತೆಯನ್ನು ಹೇಳಲೇ ಬೇಕೆಂದು ಪೀಡಿಸಿದರು. ಆಗ ಲಚಿಮತ್ತೆ ಗಂಟಲು ಸರಿಮಾಡಿಕೊಂಡು ಹೇಳತೊಡಗಿದರು. ಶಾಂತ ಸ್ವರದಿಂದ; ಆ ಛಿದ್ರ ಘಂಟಾ ನಿನಾದದಿಂದಲ್ಲ.

"ಈ ಕತೆ ಕೇಳಿ ನೀವೇನು ಮಾಡುವಿರೋ ಹುಡುಗೀರಾ! ಆದರೂ ಕೇಳಿ; ನನ್ನ ಹಾಗೆ ದಡ್ಡಿತನ ಮಾಡದೆ ಗಂಡನಿಗೆ ಆಗುವ ಹಾಗೆ ನಡೆದು ಕೊಳ್ಳುವುದಕ್ಕೆ ಕಲಿಯಿರಿ. ಆ ಕಾಲದಲ್ಲಿ ನಾನು ಈಗಿನ ಈ ಗಂಡುಬೀರಿ ಲಚಿಮತ್ತೆಯೇ ಅಲ್ಲ. ಬರೀ ದಡ್ಡಿ ಲಚಿಮಿ. ನನ್ನ ಆ ದಡ್ಡತನವೇ ನನ್ನ ಸ್ವಾಮಿಗೆ ಮೃತ್ಯುವಾಯಿತು. ಅಟ್ಟ ಮೇಲೆ ಉಣಿದ ಹಾಗೆ ಕೆಟ್ಟ ಮೇಲೆ ಬುದ್ಧಿ ಬಂದು, ಈಗ ಆ ದಡ್ಡತನ, ನಾಚಿಗೆ, ಸಂಕೋಚ ಎಲ್ಲಾ ಕಡಿದು ಕೊಂಡು ಹೀಗೆ ಚುರುಕು ಲಚಿಮತ್ತೆಯಾಗಿದ್ದೇನೆ. ಬರುವ ಜನ್ಮಕ್ಕಾದರೂ ನನ್ನ ಸ್ವಾಮಿಯನ್ನು ಸೇವಿಸುವ ಪುಣ್ಯ ಬರಲೀ ಅಂತ. ಮಾಡಿದ ಪಾಪ ಆಡಿದರೆ ಪರಿಹಾರವಾಗುತ್ತದಂತೆ......ಏನು ಹೇಳಲಿ? ಎಲ್ಲಿಂದ ಸುರು ಮಾಡಲಿ?......" ಎನ್ನುವಷ್ಟರಲ್ಲಿ ಅವರ ಕಂಗಳು ನೆನೆದುವು. ಎರಡು ಹನಿಗಳು ಗಲ್ಲದಿಂದ ಜಾರಿ ಬಂದುವು. ಲಚಿಮತ್ತೆಯ ಕಣ್ಣಿನಲ್ಲಿ ನೀರೆಂದರೆ ಅಪೂರ್ವದೃಶ್ಯವದು. ಹೇಳಲಾರಂಭಿಸಿದರು ಲಚಿಮತ್ತೆ.

"ಆಗಿನ ಕಾಲದ ಹೆಣ್ಣು ಮಕ್ಕಳು ತುಂಬಾ ಒಳಚಂದದವರು. ಈಗಿನ ಕಾಲದ ಹೆಂಗಳೆಯರ ಹಾಗೆ ಗಂಡುಸರ ಎದುರಿಗೆ ಬಂದು ಮೆರೆಯುವವರಲ್ಲ. ಈ ದಡ್ಡಿ ಲಚಿಮಿಯೂ ಅಂತವಳೇ ಆಗಿದ್ದಳು. ಮದುವೆಯಾಗುವಾಗ ಇವಳು ಒಂಭತ್ತು ವರ್ಷದ ಹುಡುಗಿ. ಈ ಹುಡುಗಿ ಕಣ್ಣು ಮೂಗಿನಿಂದ ಚೆಂದವಾಗಿಯೇ ಇದ್ದಾಳೆಂತ ಊರವರೆಲ್ಲ ಹೇಳುತ್ತಿದ್ದರು. ಮುತ್ತೂರು ವೆಂಕಪ್ಪನವರ ಎರಡನೇ ಮಗ, ಅವರ ಹೆಸರು ಈ ಲಚಿಮಿ ಹೇಳಬಾರದು; ನೀವಾದರೆ ಗಂಡನ ಹೆಸರನ್ನು ನಿರ್ಭೀತಿಯಿಂದ ಹೇಳಿಯೇ ಬಿಡುತ್ತೀರಿ;— ಅವರೊಂದಿಗೆ ಈ ದಡ್ಡಿ ಲಚಿಮಿಗೆ ಮದುವೆಯಾಯಿತು. ಅವರಿಗೆ ಮಲೆ ಯಾಳದ ತಿರಿಚೂರಿನಲ್ಲಿ *ಶಾಂತಿಯ ಕೆಲಸ. ಲಚಿಮಿ ದೊಡ್ಡವಳಾಗು ವಾಗ ಅಂದರೆ ಹನ್ನೆರಡನೇ ವರ್ಷದಲ್ಲಿ ಅವರು ಬಂದು ಈ ಲಚಿಮಿಯನ್ನು ತನ್ನೊಂದಿಗೆ ಕರೆದುಕೊಂಡು ಹೋದರು.

ಈ ದಡ್ಡಿ ಲಚಿಮಿಯನ್ನು ಮಡ್ಡಿ ಹುಡುಗಿ ಆ ಕಾಲದಲ್ಲಿ ಕೂಡ ಯಾರೂ ಇರಲಿಕ್ಕಿಲ್ಲ. ಗಂಡನೊಂದಿಗೆ ಒಬ್ಬಳೇ ಹೊರಡುವುದೆಂದರೆ ಈ

---

* ಶಾಂತಿ = ದೇವಾಲಯದ ಪೂಜೆ.

ಕಾಲವವರಿಗೆ ಕೇಳಬೇಕೆ? ಸಂತೋಷವು ಹೊರಗೆ ಉಕ್ಕುತ್ತದೆ! ಆ ಕಾಲದವರಿಗೆ ಒಳಗಾದರೂ ಇರುತ್ತಿತ್ತು. ನನಗೆ—ಈ ಶತದಡ್ಡಿಗೆ ಅದೂ ಇರಲಿಲ್ಲ. ಯಾಕಪ್ಪ ಇವರೊಂದಿಗೆ ಮದುವೆಯಾಯ್ತು? ಹೇಗಪ್ಪ ಇವರೊಂದಿಗೆ ಒಬ್ಬಳೇ ಹೋಗುವುದು? ಅಂತ ಭಾರಿ ವ್ಯಸನದಲ್ಲಿದ್ದೆ. ಅವರೋ ಊರೂರು ತಿರುಗಾಡಿದವರು. ಬಹಳ ಕುಶಾಲಿನವರು.

ರೈಲಿನಲ್ಲಿ ಹೋಗುವಾಗ ಅವರ ಈ ದಡ್ಡಿ ಲಚಿಮಿಯನ್ನು ಬಗೆಬಗೆಯಾಗಿ ಮಾತಾಡಿಸಿ ನೋಡಿದರು. ಏನೇನೋ ಪ್ರಶ್ನೆ ಹಾಕಿದರು; ಏನೇನೋ ತೆಗೆದುಕೊಟ್ಟರು. ಲಚಿಮಿ "ಹುಂ ಹಂ" ಅನ್ನಲಿಲ್ಲ. ಮೂಕಿಯ ಹಾಗೆ ಕೆಳಮುಖ ಹಾಕಿ ಕೂತುಬಿಟ್ಟಿದ್ದಳು. ಆದರೂ ಅವರು ಸಿಟ್ಟಾಗಲಿಲ್ಲ. ಇವಳ ಬದಿಬದಿಗೆ ಅವರು ಸರಿಸರಿದು ಬರುವುದು, ಇವಳು ಅಳುಕಳುಕಿ ಸರಿಸರಿದು ಮೈಯನ್ನು ಮುದ್ದೆಮಾಡಿಕೊಂಡು ಕೂಡುವುದು! ಮನಸ್ಸಿನಲ್ಲಿ ಏನು ಕೊಳಕಪ್ಪ ಇವರು! ಸುತ್ತಲೂ ಇಷ್ಟು ಮಂದಿ ನೋಡುತ್ತಿದ್ದಾರೆ! ಇವರಿಗೆ ನಾಚಿಕೆ ಇಲ್ಲ! ಛಿ!—ಎಂದು ಅವರಿಗೆ ಬಯ್ಯುವುದು. ನಾಚಿಕೆಯಿಂದಲೂ ಭಯದಿಂದಲೂ ಇವಳಿಗೆ ದುಃಖವು ಉಕ್ಕಿ ಉಕ್ಕಿ ಬರುತ್ತಿತ್ತು ಗಂಟಲಿನಲ್ಲಿ. ಅಂತೂ ಇಂತೂ ಅಷ್ಟುದ್ದದ ಪ್ರಯಾಣದಲ್ಲಿ ಈ ನೊಂದಿ ಲಚಿಮಿಯ ಬಾಯ ಬೀಗವನ್ನು ಒಡೆಯಲಾರದೆಯೇ ಹೋದರು ಅವರು. ಕೊನೆಗೆ ಅವರು ಬೇಸತ್ತು "ಛೆಕ್ ಇಂಥಾ ಮೂಕ ಹೆಣ್ಣೆಂದು ತಿಳಿಯದೆ ಹೋಯಿತು!" ಎಂದು ಮುಖವನ್ನು ತಿರುಗಿಸಿ ಕೂತುಬಿಟ್ಟರು. ಅದನ್ನು ಕೇಳಿ ಲಚಿಮಿಗೆ ಭಾರಿ ಸಂಕಟವಾಯಿತು. ಬಳಬಳ ಅಳುತ್ತಾ ಕೂತಳೊಂದು ಮೂಲೆಯಲ್ಲಿ.

ಆದರೂ ಈ ಮಣ್ಣ ಬೊಂಬೆಯ ಮೇಲೆ ಅವರಿಗೆ ತುಂಬಾ ಪ್ರೀತಿ ಇತ್ತೆಂತ ಈಗ ನನಗೆ ಚೆನ್ನಾಗಿ ಗೊತ್ತಾಗುತ್ತದೆ. ಅವರೊಂದು ಚಿಕ್ಕ ಮನೆಯನ್ನು ಗೊತ್ತುಮಾಡಿಟ್ಟಿದ್ದರು. ಅವರು ಶಾಂತಿ ಮಾಡುವ ದೇವಸ್ಥಾನವೂ ಸಮೀಪವಾಗಿತ್ತು. ಅವರು ಅಕ್ಕಿ ಕಾಯಿ ತರಕಾರಿ ಮುಂತಾದ ಸಾಮಾನುಗಳನ್ನು ತಂದು ಮನೆಯಲ್ಲಿ ಹಾಕುತ್ತಿದ್ದರು. ನಾನು ಮೂಕ ಭಾವವನ್ನು ಮಾತ್ರ ಬಿಡದೆ ಬೇಯಿಸಿ ಅವರಿಗೆ ಬಡಿಸಿ ನಾನೂ ಉಣ್ಣುತ್ತಿದ್ದೆ. ಅವರು ಸಮೀಪದಲ್ಲಿರುವಾಗಲೆಲ್ಲಾ ಹಾಳು ಸಂಕೋಚ ಗುಡ್ಡದ ಹಾಗೆ ನನ್ನ ಮೇಲೆ ಮಗುಚಿಕೊಳ್ಳುತ್ತಿತ್ತು. ಈ ಮೂಕಿ ಲಚಿಮಿಯನ್ನು ಅವರು ನಾನಾ ರೀತಿಯಿಂದ ರಮಿಸಿ ರಮಿಸಿ ನೋಡಿದರು. ಬುದ್ಧಿ ನೀತಿ ಹೇಳಿದರು. ಬಸವಣ್ಣ

ನಾದರೂ ಹೇಳಿದ್ದಕ್ಕೆಲ್ಲ ತಲೆಯಾಡಿಸೀತು; ನಾನು ಊಹುಂ! ಅವರೇನಾದರೂ ನನ್ನ ಚಾಪೆಯನ್ನು ಮುಟ್ಟಿದರೆ ಸಾಕು, ನಾನು ಬೆಂಕಿಗೆ ಹೆದರುವ ಹಾಗೆ ಬದಿಬದಿಗೆ ಹೋಗಿ ಕೊನೆಗೆ ನೆಲದಲ್ಲಿಯೇ ಮುದುಡಿ ಮಲಗಿಬಿಡುತ್ತಿದ್ದೆ. ಪಾಪ ಅವರಿಗೆ ಎಷ್ಟು ಆಶೆಯಿತ್ತೋ! ಎಷ್ಟು ಸಂಕಟಪಟ್ಟರೋ! ......ಹುಂ......

ಒಂದು ದಿನ ಅವರು,—ಲಚಿಮಿ!—ಹೌದು; ಅವರು ಲಚಿಮಿ ಎಂದು ಹೆಸರು ಹೇಳಿಯೇ ನನ್ನನ್ನು ಕರೆಯುವುದು; ಈವೊತ್ತು ಕಡೇ ಸರ್ತಿ ಹೇಳುತ್ತೇನೆ. ಈವೊತ್ತು ನಿನ್ನ ಅಳುಕು-ನಾಚಿಕೆ ಪೂರ್ಣ ಬಿಟ್ಟುಬಿಡಬೇಕು. ಇನ್ನೂ ಗಂಡನೊಡನೆ ಮೈಚಳಿಬಿಟ್ಟು ಮಾತಾಡುವುದಿಲ್ಲಾಂದರೇನೆ? ಅದೆಂಥ ಸಂಕೋಚ? ಇನ್ನು ಕೂಡದು. ನೀನು ಈ ದಿನ ಬಂದು ನನ್ನ ಕಾಲು ಒತ್ತಲೇಬೇಕು. ನನಗೆ ವೀಳ್ಯ ಕೊಡಲೇಬೇಕು. ನಾನು ಕರೆಯಲಿಕ್ಕಿಲ್ಲ. ನೀನಾಗಿ ಬಂದೀ ಸರಿ, ಇದಕ್ಕೆ ತಪ್ಪಿದರೆ ನಾಳೆಯಿಂದ ನಾನು ಮನೆಗೇ ಬರಲಿಕ್ಕಿಲ್ಲ! ಅಂತ ಎಚ್ಚರಿಕೆ ಹಾಕಿ ಕಟ್ಟುಮಾಡಿದರು. ಆದರೂ ನನ್ನ ಹಟ ನಾನು ಬಿಡಲಿಲ್ಲ. ಪಾಪಿ! ನನ್ನಂಥ ಮಣ್ಣುಮುದ್ದೆ ಎಲ್ಲಿಯೂ ಹುಟ್ಟಿರಲಿಕ್ಕಿಲ್ಲ. ಅವರಾಗಿ ರಮಿಸಿ ಕರೆದರೂ ಅವರ ಬಳಿಗೆ ಹೋಗದ ನಾನು, ಅವರು ಸುಮ್ಮನಿರುವಾಗ ಹ್ಯಾಗೆ ಹೋದೇನು? ಅದೆಂಥ ಅಳುಕೋ ಅದೆಂಥ ಅಭಿಮಾನವೋ! ಅಂದು ನನ್ನಷ್ಟಕ್ಕೆ ನಾನು ಮಲಗಿದೆ, ಅವರಷ್ಟಕ್ಕೆ ಅವರು ಮಲಗಿದರು. ಎಲ್ಲಿ ಅವರು ಬಂದು ನನ್ನ ಮೈಮುಟ್ಟಿ ಬಿಡುವರೋ ಎಂಬ ಹೆದರಿಕೆಯಿಂದ ಬೆಳಗ್ಗಿನ ತನಕ ನನಗೂ ನಿದ್ದೆ ಬರಲಿಲ್ಲ; ಅವರಿಗೂ ನಿದ್ದೆ ಬರಲಿಲ್ಲ. ಅವರ ಉದ್ದ ಉದ್ದವಾದ ಶ್ವಾಸ ಆಗಾಗ ನನಗೆ ಕೇಳಿಸುತ್ತಾ ಇತ್ತು ಹೂಂ......

ಹೂ......ಬೆಳಗಾಯಿತು. ಅವರು ಎದ್ದಕೂಡಲೇ ಸರಸರನೆ ಹೊರಟೇ ಹೋದರು. ತಾಳಿದರೂ ಎಷ್ಟು ದಿನ ತಾಳಿ ಕೊಂಡಾರು ಪಾಪ! ಅವರಿಗೆ ಆ ದಿನ ಬಹಳ ಕೋಪ ಬಂದಿತ್ತು. ನನಗೂ ಹೊಟ್ಟೆಯಲ್ಲಿ ಏನೋ ಸಂಕಟ; ಯಾಕೋ ಅಳುವೂ ಬಂತು. ಅಡುಗೆ ಮಾಡಲಿಕ್ಕೂ ಮನಸ್ಸು ಹೋಗಲಿಲ್ಲ; ಅವರೂ ಊಟಕ್ಕೆ ಬರಲಿಲ್ಲ.....ಹೂಂ......ಹೀಗೆ...... ಒಂದು-ಎರಡು-ಮೂರು--ನಾಲ್ಕು ದಿನ ಆಯ್ತು. ನಾಲ್ಕನೇ ದಿನ ಒಬ್ಬ ಮಲೆಯಾಳೀ ಆಳಿನ ಕೈಯಲ್ಲಿ ಅಕ್ಕಿ ಕಾಯಿ ಮುಂತಾದ ಮನೆಗೆ ಬೇಕಾದ

ಸಾಮಾನು ಕೊಟ್ಟು ಕಳಿಸಿದರು......ಹೂಂ...ಅವರಿಗೆ ಎಷ್ಟು ಪ್ರೀತಿ ನೋಡಿದಿರಾ?

ಅದನ್ನೆಲ್ಲ ಕೊಟ್ಟು ಹೋಗುವಾಗ ಆ ಆಳು ಅಮ್ಮಾ ಅವರಿಗೆ ಸುಖ ವಿಲ್ಲ. ನಿಮ್ಮನ್ನು ಬರಹೇಳಿದ್ದಾರೆ. 'ಒಮ್ಮೆ ಬಂದು ನೋಡಲು ಹೇಳಿದ್ದಾರೆ.' ಎಂದು ಮಲೆಯಾಳದಲ್ಲಿಂದ. ನನಗೆ ಮಲೆಯಾಳ ಸರಿಯಾಗಿ ಬಾರದು. ನಾನು ಮಾತಾಡದೆ ಸುಮ್ಮನೆ ಇದ್ದುದು ನೋಡಿ, ಅವನು ಮತ್ತೊಮ್ಮೆ ಹೇಳಿ ಹೊರಟು ಹೋದ. ಆ ಆಳಿಗೂ ಗೊತ್ತಿತ್ತು ನಾನು ಮೂಕೀ ಅಂತ. ಹೌದು, ನಾನು ಯಾರೊಡನೆಯೂ ಮಾತಾಡುತ್ತಿರಲಿಲ್ಲ. ಗಂಡನೊಡನೆ ಸಹಾ ಮಾತಾಡುವುದಿಲ್ಲ ಅಂತ ಜನರಿಗೆಲ್ಲ ಗೊತ್ತಿತ್ತು. ಅಲ್ಲಿಯ ಜನರು ನನ್ನನ್ನು ಮೂಕಮ್ಮ ಎಂದು ಹೇಳಿಕೊಂಡದ್ದನ್ನು ನಾನೇ ಕೇಳಿದ್ದೇನೆ. ಒನ್ಮೆ ಅವರ ಕನ್ನಡ ಭಾಷೆ ಬರುವ ಸ್ನೇಹಿತ ನನ್ನನ್ನು ಮಾತಾಡಿಸಿದ್ದಕ್ಕೆ ನಾನು ನಾಚಿಗೆಯಿಂದ ಮಾತಾಡದೆ ಮೋರೆ ತಗ್ಗಿಸಿಕೊಂಡು ಒಳಗೆ ಓಡಿದ್ದು ನೋಡಿ, ಅವನು ಅವರೊಡನೆ ಬಾಯಿ ಬರೋದಿಲ್ಲಾಂತ ನನಗೆ ಗೊತ್ತಿರ ಲಿಲ್ಲ, ಮನ್ನಿಸಿ ಅಂದದ್ದು ನನ್ನ ಕಿವಿಗೆ ಬಿತ್ತು. ನಾನು ಒಳಗಿನ ಮೂಲೆ ಯನ್ನೆ ಸೇರಿ ಬಿಕ್ಕಿ ಬಿಕ್ಕಿ ಅತ್ತೆ; ಅವರೂ ನಾಚಿಕೊಂಡು ತಲೆತಗ್ಗಿಸಿಬಿಟ್ಟರು. ಇದರಿಂದ ಆ ಸ್ನೇಹಿತ ಸುಂಟೆ ತಿಂದ ಮಂಗನ ಹಾಗಾಗಿ ಮುಖ ಸಣ್ಣಗೆ ಮಾಡಿಕೊಂಡ. ಇಷ್ಟು ಅವಮಾನವಾದರೂ ನನಗೆ ಬುದ್ಧಿ ಬಂತೇ? ಛಿ! ನನ್ನ ಜನ್ಮ!... ..

ಐದು ದಿನ–ಆರು ದಿನ ಆಯ್ತು. ಅವರು ಮನೆಗೆ ಬರಲೇ ಇಲ್ಲ. ನಾನು ಒಳಗೊಳಗೇ ಅಳುತ್ತಾ ಮನೆಯೊಳಗೇ ಇದ್ದೆ. ಆ ಮೇಲೆ ದೇವ ಸ್ಥಾನದ ಆಳು ಬಂದು ದುಃಖದಿಂದಲೂ ಸಿಟ್ಟಿನಿಂದಲೂ ನನ್ನನ್ನು ನೋಡಿ ಎಂಥಾ ಹೆಂಗಸಪ್ಪಾ ನೀವು? ಗಂಡನಿಗೆ ಸುಖವಿಲ್ಲ ನೋಡಬೇಡವೇ? ಬನ್ನಿ ಎಂದ ಮಲೆಯಾಳದಲ್ಲಿ. ಅವನೇನೋ ಬುದ್ಧಿ ಹೇಳುತ್ತಾನಂತ ತಿಳಕೊಂಡು ನಾನು ಬಾಗಿಲ ಹಾಕಿಕೊಂಡೆ. ಅವನೇನೋ ಅವರ ಪರವಾಗಿ ರಾಯ ಭಾರ ಮಾಡಲಿಕ್ಕೆ ಬಂದಿದ್ದಾನೆ. ಛೀ ಛೀ! ನಾಲ್ಕು ಜನರ ಎದುರಿಲ್ಲಾ ನನ್ನ ವಿಷಯ ಹೇಳಿದರಲ್ಲಾ! ನಾಚಿಕೆಗೇಡು! ಸತ್ತರೂ ಅವರ ಬಳಿಗೆ ಹೋಗಲಾರೆನಪ್ಪಾ!— ಅಂತ ಕಂಡಿತು ಆಗ ನನ್ನ ಮನಸ್ಸಿಗೆ.

ಮರುದಿನ ಮಲೆಯಾಳೀ ಹೆಂಗುಸೊಬ್ಬಳು ಗಾಬರಿಯಿಂದ ಓಡಿಯೋಡಿ ಬಂದು ಅಯ್ಯೋ ಅಮ್ಮಾ! ಬನ್ನಿ ಅವರಿಗೆ ಪ್ರಾಣ ಸಂಕಟ ಒಮ್ಮೆ ಬಂದು ನೋಡಿರಿ—ಎಂದು ಕೂಗುತ್ತಾ ನನ್ನ ಕೈಯನ್ನು ಹಿಡಿದು ದರದರ ಎಳೆದುಕೊಂಡೇ ಹೋದಳು. ಅವಳು ಹೇಳಿದ 'ಪ್ರಾಣಂ ಪೊಗುನ್ನುಂಡಲ್ಲೊ' ಎಂದ ಮಾತು ನನ್ನ ಹೃದಯಕ್ಕೆ ಒನಕೇ ಪೆಟ್ಟು ಬಿದ್ದ ಹಾಗಾಯಿತು. ಬಳ ಬಳಾಂತ ಕಣ್ಣೀರೂ ಸುರಿಯಿತು. ಜೀವವಿಲ್ಲದ ಬೊಂಬೆಯ ಹಾಗೆ ಅವಳ ಹಿಂದೆಯೇ ಹೋದೆ......ಹೂಂ......

ಲಚಿಮತ್ತೆ ಸ್ವಲ್ಪ ಹೊತ್ತು ಮೌನ; ಕೇಳುವವರೂ ಮೌನ. ಆ ಮೇಲೆ ಗಂಟಲಲ್ಲಿ ಸಿಕ್ಕಿಕೊಂಡಿದ್ದ ದುಃಖದುಂಡೆಯನ್ನು ಕಣ್ಣೀರಿನಿಂದ ನುಂಗಿಕೊಂಡು ಮುಂದುವರಿಸಿದರು ಲಚಿಮತ್ತೆ.

"...ಹೂಂ...ಹೇಳಿದ ಮೇಲೆ ಪೂರಾ ಹೇಳದಿದ್ದರೆ ಆಗುತ್ತದೆಯೇ?... ದೇವಸ್ಥಾನದ ಹೊರ ಮಂಟಪದ ಒಂದು ಕೋಣೆಯಲ್ಲಿ ಅವರು ಮಲಗಿದ್ದಾರೆ, ಕಾಯಿಲೆ! ಕಣ್ಣು ಮೇಲಕ್ಕೆ ತಿರುಗುತ್ತಾ ಉಂಟು!......ಸುತ್ತು ಮುತ್ತು ನಾಲ್ಕಾರು ಮಂದಿ ನೋಡುತ್ತಾ ಇದ್ದರು. ನಮ್ಮವರು ಅಂತ ಅಲ್ಲಿ ಯಾರಿದ್ದಾರೆ? ಅಕ್ಕಪಕ್ಕದವರೇ ಏನೋ ನೋಡಿ ಏನೋ ಮದ್ದು ಮಾಡಿರಬೇಕು. ಮುಖ್ಯವಾಗಿ ನೋಡಬೇಕಾದವಳು ಯಾರೋ-ಅವಳು- ಈ ಪಾಪಿಷ್ಠೆ ನೋಡದೇ-ಉಪಚಾರ ಮಾಡದೇ ಹೋದ ಮೇಲೆ ಯಾರು ನೋಡಿ ಏನು ಫಲ? ಅವರಿಗೆ ಒಂದೇ ಚಿಂತೆ! ಈ ಜಿಕ್ಕಿಣಿ ಹೆಂಡತಿಯದೇ ಚಿಂತೆ. ಅದರಿಂದಲೇ ಅವರ ಮನಸ್ಸು ಕೆಟ್ಟು, ಆರೋಗ್ಯ ಕೆಟ್ಟು ಆ ಜ್ವರ ಬಂತೂಂತ ಕಾಣುತ್ತದೆ. ಹೇಳಿ ಕಳುಹಿಸಿದರೂ ನಾನು ಅರ್ಥ ಮಾಡಿಕೊಳ್ಳದೆ, ಸಂಕೋಚದಿಂದ ಅವರ ಬಳಿಗೆ ಹೋಗದ್ದು, ಅವರೊಡನೆ ಕ್ಷಮೆಯನ್ನು ಬೇಡದ್ದು, ಈ ಎಲ್ಲಾ ವ್ಯಸನವೂ ಸೇರಿ, ಬೆಂದು ಹೊತ್ತಿ ನನ್ನ ಸೌಭಾಗ್ಯವು ಬೂದಿಯಾಗಿ ಹೋಯಿತು!......ಹೂಂ......

ನಾನು ನೋಡಿದಾಗ ಅವರೂ ನನ್ನನ್ನು ತೇಲುಗಣ್ಣಿನಿಂದ ನೋಡಿ ಸಕ್ಕ ಹಾಗಾಯಿತು. ನಾನು—ಅಯ್ಯೋ! ದೇವರೆ! ಏನು ಗತಿ! ಎಂತ ಬಾಯಿಬಿಟ್ಟು ಕೂಗಿದೆ! ಸುತ್ತಿಕೊಂಡಿದ್ದವರಲ್ಲಿ ಒಬ್ಬ—ಅಮ್ಮಾ! ಯಾವಾಗಲೂ ಲಚಿಮಿಾ! ಲಚಿಮಿಾ! ಎಂದು ನಿಮ್ಮ ಹೆಸರು ಹೇಳಿ ಜಪಿಸುತ್ತಿರುವರು. ಅವರ ತಲೆಯೆತ್ತಿ ಮಡಿಲಲ್ಲಿರಿಸಿಕೊಳ್ಳಿರಿ ಎಂದಳು. ಹೆಂಗುಸೊಬ್ಬಳು. ನನ್ನನ್ನು ಕೂಡಿಸಿ ಅವರ ತಲೆಯನ್ನು ನನ್ನ ತೊಡೆಯ ಮೇಲಿಟ್ಟಳು. ನನ್ನ

ಮುಖವನ್ನೆ ನೋಡುತ್ತಾ ಅವರೇನೋ ಅಂದರು. ಶಬ್ದ ಕೇಳಿತು—ಕೇಳಲಿಲ್ಲ. ಮತ್ತೆ......ಹೂಂ......ಆಯಿತು! ನನ್ನ ತೊಡೆಯಲ್ಲಿಯೇ ಅವರ ಪ್ರಾಣ ಹೋಯಿತು!......

ಹೂಂ......ಹೌದು. ಅವರನ್ನು ಕೊಂದವಳು ನಾನೇ. ಅಲ್ಲಿದ್ದವರೆಲ್ಲಾ ಹಾಗೆಯೇ ಹೇಳಿ ನನ್ನನ್ನು ಬೈದರು. ಆ ಜನರ ಬಗೆಬಗೆಯ ಬೈಗಳನ್ನು ಕೇಳಿ ಕೇಳಿ ಈ ದಡ್ಡಿ ಲಚಿಮಿಯ ಕಿವಿ ಕಿವುಡೇ ಆಯ್ತು. ಮತ್ತೆ ಬುದ್ಧಿ ಬಂತು. ಪದ್ಮನಾಭ ಬಂದು, ಎಲ್ಲಾ ಕೇಳಿ ನನ್ನನ್ನು ಬೈದು ಬೈದು ಹಣ್ಣು ಮಾಡುತ್ತಾ ಊರಿಗೆ ಕರಕೊಂಡು ಬಂದ. ಬರುವ ಜನುಮದಲ್ಲಿಯಾದರೂ ನಾನು ಚುರುಕು ಹುಡುಗಿಯಾಗಿ ಹುಟ್ಟಬೇಕಂತ ಹೀಗಾಗಿದ್ದೇನೆ ಈಗ ಚುರುಕು ಲಚಿಮತ್ತೆ, ಪಿರಿಕಿ ಲಚಿಮತ್ತೆ ಅಂತ. ಹುಂ...... ಆಹಾ! ನಾನು ಆ ನನ್ನ ಸ್ವಾಮಿಯನ್ನು ಎಷ್ಟು ನೋಯಿಸಿದರೂ ಬೇಯಿಸಿದರೂ ಅವರ ಪ್ರೀತಿಗೇನಾದರೂ ಕಡಮೆಯಾಯಿತೇ? ಅವರು ಮನೆಗೆ ಬಾರದಿದ್ದರೂ ನನಗಾಗಿ ಅಕ್ಕಿ ಕಾಯಿಗಳನ್ನು ಕೊಟ್ಟು ಕಳಿಸಿದರಲ್ಲ! ಆಹಾ! ಸಾಯುವ ಸಮಯಕ್ಕೂ ನನ್ನನ್ನು ನೋಡಿ ನಕ್ಕರು!......" ಎಂದು ತಮ್ಮ ಕರುಣಕತೆಯನ್ನು ಮುಗಿಸಿದರು ಲಚಿಮತ್ತೆ.

೬

ನಮ್ಮ ಮಗು ವೆಂಕಟೇಶನನ್ನು "ತಿಮ್ಮ"ನನ್ನಾಗಿ ಮಾರ್ಪಡಿಸಿದವರು ಈ ಲಚಿಮತ್ತೆಯೇ. ಮಗುವಿಗೆ ಶ್ರೀನಿವಾಸ ಎಂದು ನಾಮಕರಣವಾದ ಮೇಲೆ ತಾಯಿ ಜಲಜಮ್ಮ—

"ವೆಂಕಟೇಶನೆ ಜೋ ಜೋ ರಾಮಪ್ಪ ಜೋ ಜೋ,
ನೀನೆಮ್ಮ ಕುಲದೀಪ ನಾಗಪ್ಪ ಜೋ ಜೋ."

ಎಂದು ಹಾಡುತ್ತ ತೊಟ್ಟಿಲು ತೂಗುತ್ತಿರುವಾಗ ಲಚಿಮತ್ತೆ ಯಾವ ಊರಿನಿಂದಲೋ ದಡಬಡನೆ ಒಳಗೆ ಬಂದು, "ಛೀ ಛೀ, ಇದೇನು ಹೆಸರಿಟ್ಟದ್ದು ಜಲಜಾ ನಮ್ಮ ಪದ್ಮನಾಭನ ಹಿರೀ ಮಗನಿಗೆ? ಬೇಡ! ವೆಂಕಟೇಶನೂ ಬೇಡ, ರಾಮಪ್ಪನೂ ಬೇಡ. ಎಷ್ಟು ಹಣವಂತನಾದರೂ ಮನುಷ್ಯರ ಮಗು ದೇವರಾಗುವುದುಂಟೆ? ಬೇಡಾ! ಕಡೆಗೆ ಹೆಸರು ಹಾಲಪ್ಪ ಮಜ್ಜಿಗೆ ಇಲ್ಲಪ್ಪ ಎಂದ ಹಾಗೆ ನಗೆಗೀಡಾದೀತು. ಈ ಎಳೆ ಮಗುವಿಗೆ ಆ ಧಾಂಡಿಗ

ಭೀಮ ಕರಿ ರಾಮಪ್ಪಯ್ಯನ ಹೆಸರು ಬೇಡ. ಇದು ಆ ಮುತ್ತಜ್ಜನಷ್ಟು ಕಪ್ಪೂ ಅಲ್ಲ, ಕಲ್ಲಗುಂಡೂ ಅಲ್ಲ. ಇವನ ಅಪ್ಪನ ಹಾಗೆಯೇ ತೆಳ್ಳಗೆ ಬೆಳೆಯುತ್ತಾನೆ ಬೇಕಾದರೆ ನೋಡು. ಅದೆಲ್ಲಾ ಬೇಡ." ಎಂದು ತೀವ್ರ ಧ್ವನಿಯಿಂದ ನಿಷೇಧಿಸಿಬಿಟ್ಟರು.

"ಅಲ್ಲತ್ತಿಗೆ, ತಿರುಪತಿಯಾತ್ರೆ ಮಾಡಿಬಂದ ನೆನಪಿಗಾಗಿ ವೆಂಕಟೇಶ ಅಂತ ಇಟ್ಟದ್ದು"—ಎಂದು ಜಲಜಾ ಹೇಳಹೋಗುವಾಗ.

"ಬೇಡಾ!" ಎಂದು ಲಚಿಮತ್ತೆ ಮತ್ತೊಮ್ಮೆ ಕೂಗಿ—"ವೆಂಕಟೇಶ ಅಂತ ಇಟ್ಟರೆ ಮುಂದೆ ವೆಂಕಾ—ಮಂಕಾ ಅಂತೆಲ್ಲಾ ಹೆಸರು ಹಾಳು ಸುಟ್ಟು ಹೋಗುತ್ತದೆ. ನಾನು ಇಡುತ್ತೇನೆ ನೋಡು ಹೆಸರು," ಎಂದು ಗಂಧದ ಕಲ್ಲು ತರಿಸಿ, ಬಜೆಯನ್ನು ತೇದು, ಚಿನ್ನದುಂಗುರದಲ್ಲಿ ಎತ್ತಿ ಮಗುವಿನ ಬಾಯಿಗಿಟ್ಟು, ಬೆಣ್ಣೆ ಜೇನು ತುಪ್ಪಗಳನ್ನು ನೆಕ್ಕಿಸಿ, ಒಂದು ರೂಪಾಯಿಯ ನಾಣ್ಯವನ್ನು ಮಗುವಿನ ಕೈಯಲ್ಲಿಟ್ಟು "ತಿಮ್ಮಾ ತಿಮ್ಮಾ" ಎಂದು ಕರೆದರು. ಬಳಿಕ "ತಿಮ್ಮ—ಎಂದೇ ಇವನ ಹೆಸರಾಗಲಿ. ವೆಂಕಟೇಶನಿಗೆ ತಿಮ್ಮಪ್ಪ ಎಂತ ಹೆಸರಿಲ್ಲವೆ? ಈ ಹೆಸರಿಗೆ ಅಳಿವೇ ಇಲ್ಲ. ಇನ್ನು ಮೇಲೆ ಇವನು ತಿಮ್ಮ-ನಮ್ಮ ತಿಮ್ಮ-ತಿರುಪತಿ ತಿಮ್ಮ-ಕಟ್ಟೇಬೆಟ್ಟು ತಿಮ್ಮ ಪದ್ಮನಾಭನ ಹಿರೇ ಮಗ ತಿಮ್ಮ" ಎಂದು ಪ್ರಬಲ ಶಬ್ದದಿಂದ ಕೂಗಿದರು. ಆ ಕೂಗು ಕೇಳಿ ಹೊರಗೆ ಆಡುತ್ತಿದ್ದ ಹುಡುಗಾಟದ ಹುಡುಗ—ಹುಡುಗಿಯರು "ತಿಮ್ಮ! ತಿಮ್ಮಣ್ಣ! ತಿರುಪತಿ ತಿಮ್ಮಣ್ಣ! ತಾಲಿಗಡೋ ತಿಮ್ಮಣ್ಣ!" ಎಂದು ಪ್ರತಿಧ್ವನಿ ಹೊರಡಿಸಿ ಕೇಕೆ ಹಾಕಿದರು ಈ ಗಲಭೆಗೆ ತೊಟ್ಟಿಲೊಳಗಿನ ತಿಮ್ಮ ಕುಲು ಕುಲು ನಕ್ಕನು.

ಲಚಿಮತ್ತೆಯ ಆ ಕುಶಾಲು ಬಾಯಿಯಿಂದ ಹೊರಟ ಹೆಸರು, 'ಅಕಬರ ಬೀರಬಲರ ಕಥೆ'ಯೊಳಗಿನ ಮೂರ್ಖನಿಗೆ 'ಪಂಡಿತ'ನೆಂಬ ಹೆಸರು ಬಿದ್ದುಹೋದಂತೆ 'ಲಚಿಮತ್ತೆಯ ತಿಮ್ಮ' ಎಂದು ಅವರಿವರ ಬಾಯಿಯಿಂದ ಹೊರಟು, ಹಾಗೆಯೇ ರೂಢಿಯಾಗಿಬಿಟ್ಟಿತು.

ಆದರೆ ಲಚಿಮತ್ತೆ ಹಿರಿಯರಾದ ರಾಮಪ್ಪಯ್ಯನನ್ನು ತೀರಾ ಬಿಟ್ಟು ಹಾಕಲಿಲ್ಲ. "ಹಾಗಂತ ಬಡಿಗೇ ಭೀಮ ಕರಿ ರಾಮಪ್ಪಯ್ಯನನ್ನು ಎಷ್ಟ ಮಾತ್ರಕ್ಕೂ ಬಿಡಕೂಡದು. ಎಂಟನೆಯ ವರ್ಷದಲ್ಲಿಯೇ ಈ ತಿಮ್ಮನಿಗೆ ಉಪನಯನ ಮಾಡಬೇಕು. ಆ ಮೇಲೆ ಇವನು ಸಂಧ್ಯಾವಂದನೆ ಮಾಡಿ ಅಭಿವಾದನೆ ಮಾಡುವಾಗ ರಾಮಪ್ಪಯ್ಯ ಶರ್ಮಾಣಾಂ ಅಹಂ ಭೋ ಅಭಿ

4

ವಾದಯೇ ಅಂತ ಉಚ್ಚರಿಸಲಿ, ಊರಿಗೆಲ್ಲಾ ತಿಮ್ಮಣ್ಣನಾಗಿಯೇ ಮೆರಿ ಯಲಿ" ಎಂದು ಶಾಸನವನ್ನು ವಿಧಿಸಿಯೂ ಇಟ್ಟಿದ್ದರು ಲಚಿಮತ್ತೆ.

ಯಾವ ಮಕ್ಕಳ ಮೇಲೆಯೂ ವಿಶೇಷವಾದ ಮಮತಾದ್ವೇಷಗಳಿಲ್ಲದ ಲಚಿಮತ್ತೆ ತಾನು ಹೆಸರಿಟ್ಟ ಮಗುವೆಂದೋ ಏನೋ, ತಿಮ್ಮನ ಮೇಲೆ ತುಂಬಾ ಅಕ್ಕರೆಗೊಂಡಿದ್ದರು. ಅವರು ಮಕ್ಕಳನ್ನು ಎತ್ತಿ ಆಡಿಸುವ ಪರಿ ಪಾಠವಿಲ್ಲದಿದ್ದರೂ "ಅಕೊ ತಿಮ್ಮೂ ಅಳುತ್ತಾನೆ ಆಡಿಸೇ, ಇಕೋ ತಿಮ್ಮೂಗೆ ನಿದ್ದೆ ಬರುತ್ತದೆ— ಮಲಗಿಸೇ, ನಮ್ಮ ತಿಮ್ಮೂಗೆ ಹಸಿವಾಗುತ್ತದೆ, ಉಣ್ಣಿಸೇ ತಿಮ್ಮೂ ಬಿದ್ದಾನು ಎತ್ತಿಕೋ" ಎಂದು ಹೀಗೆ ಅವರಿವರಿಂದ ತಿಮ್ಮನನ್ನು ನೋಡಿಸುತ್ತಿದ್ದರು. ತಿಮ್ಮನಿಗೆ ಹಾಗೆ ಮಾಡು, ಹೀಗೆ ಮಾಡು, ಅದನ್ನು ಕೊಡಬೇಡ, ಇದನ್ನು ಕೊಡು ಎಂದು ಅಧಿಕಾರ ಚಲಾಯಿಸುತ್ತ ಆ ಮೂಲಕವಾಗಿ ತಿಮ್ಮಣ್ಣನ ಮೇಲೆ ಅಭಿಮಾನ, ಅಕ್ಕರೆ, ಆರೈಕೆಗಳನ್ನು ಪ್ರದರ್ಶನ ಮಾಡುತ್ತಿದ್ದರು. ಅಂತೆಯೇ ತಿಮ್ಮನು ಹುಟ್ಟಿದ ಮೇಲೆ ಅವರು ಆಗಾಗ ಕಟ್ಟೆಬೆಟ್ಟಿಗೆ ಬರಲಾರಂಭಿಸಿದ್ದರು.

ಎಂಟನೆಯ ವರ್ಷಕ್ಕೆಂದು ಗಡುವಿಟ್ಟ ಹಾಗೆಯೇ ತಿಮ್ಮಣ್ಣನ ಉಪ ನಯನವನ್ನು ಹಟಹಿಡಿದು ಮಾಡಿಸಿದವರೂ ಲಚಿಮತ್ತೆಯೇ. ಆ ಸಂದರ್ಭ ದಲ್ಲಿ ಹಿರಿಯ ಮಗನ ಉಪನಯನದ ಸನ್ನಾಹವನ್ನು, ಬಹು ವಿಜೃಂಭಣೆ ಯಿಂದ ಮಾಡಬೇಕೆಂದು ಹಿರಿಯರೆಲ್ಲಾ ಆಲೋಚನೆ ಮಾಡುವಾಗ, ಈ ಲಚಿಮತ್ತೆ "ಬೇಡ! ಅದೆಲ್ಲ ಏನೂ ಬೇಡ! ತಿಂದು ತಿಂದು ಜೀರ್ಣಿಸಿಕೊಳ್ಳ ಲಿಕ್ಕೆ ಸಾಧ್ಯವಿಲ್ಲದಂಥಾ ಭಕ್ಷ್ಯ ಗಿಕ್ಷ್ಯ ಮಾಡಿಸಿ ಉಂಡವರಿಗೆಲ್ಲಾ ಅಜೀ ರ್ಣ ರೋಗವನ್ನು ಬರಿಸುವುದು ಏನು ಸುಖ? ಏನು ಚಂದ? ಏನು ನ್ಯಾಯ? ಇದು ದೇವರಿಗೂ ಇಷ್ಟವಿಲ್ಲ. ಪದ್ಮನಾಭಾ! ನೀಕೇಳು ನನ್ನ ಕ್ರಮ. ಸುಖವಾದ ಊಟಕ್ಕೆ ಹುಳಿಸಾರು ಗೊಜ್ಜು ಚಟ್ನಿ ಪಲ್ಯಗಳೇ ಮುಖ್ಯ. ವಿಶೇಷ ಅಂತ ಚಿತ್ರಾನ್ನ ಕೊಸಂಬರಿಯಾಯಿತು. ಮೇಲೊಂದು ಆಂಬೋಡೆ ಬೀಳಲಿ. ಸೀಭಕ್ಷ್ಯಕ್ಕೆ ಒಂದು ಸುಲಭವಾದ ಮನೋಹರ ಮಾಡಿಸಿಬಿಡು. ಸಾಕು. ಕಡಲೇ ಬೇಳೆ ಪಾಯಸ ಉಂಟೇ ಉಂಟಲ್ಲಾ ಹೊಟ್ಟೆ ಉಬ್ಬರಿಸಬೇಕೆಂಬವರಿಗೆ? ಮತ್ತೇನು ಬೇಕು ಹೇಳು? ಚೆಲೋ ಮಜ್ಜಿಗೆ ಸುರಿಯಲಿ ದಿವ್ಯಾಮೃತದ ಹಾಗೆ ಆಯಿತು ಪರಮ ತೃಪ್ತಿ. ನಿನ್ನ ಹೋಳಿಗೆ ಗೀಳಿಗೆ ಬೇಡವೇ ಬೇಡ ಹಾಳು. ಮನೋಹರದಲ್ಲೆ ಮುಗಿಯ

ಬೇಕು ನಮ್ಮ ತಿಮ್ಮಣ್ಣನ ಉಪನಯನ" ಎಂದು ಮುದ್ರಾವಚನದಿಂದ ವಿವರಿಸಿ ಸಿದ್ಧಮಾಡಿಟ್ಟರು.

ಮದುವೆ ಉಪನಯನಗಳಂತಹ ವಿಶೇಷ ಸಮಾರಾಧನೆಗಳಲ್ಲಿ, ಲಡ್ಡು ಜಿಲೇಬಿಗಳಂತೂ ಹೋಗಲಿ, ಹೋಳಿಗೆ ಕೂಡಾ ಮಾಡಿಸದಿದ್ದರೆ ಆ ಪ್ರಾಂತಕ್ಕೆ ಅದೊಂದು ಅಪವಾದವೇ ಸರಿ. ಆದರೆ ತಿಮ್ಮಣ್ಣನ ಉಪನಯನ ದಲ್ಲಿ ಲಚಿಮತ್ತೆಯ ಮಾತೇ ಸಿದ್ಧಾಂತವಾದುದರಿಂದ, ಅವನ ಉಪನಯನವು 'ಮನೋಹರ ಉಪನಯನ'ವೆಂದು ಊರೆಲ್ಲಾ ಪ್ರಸಿದ್ಧವಾಯಿತು. ತಿಮ್ಮಣ್ಣನು ಉಪನಯನದ ಮನೆಯಲ್ಲಿ ಕೂಡುವ ನಾಲ್ಕು ದಿನಗಳ ಮೊದಲೇ ಆ ಲಚಿಮತ್ತೆಯ ಮನೋಹರದ ಮುದ್ರಾಸಿದ್ಧಾಂತವನ್ನು ಕೇಳಿ, ಬುದ್ಧಿಬಂದ ದೊಡ್ಡ ಹುಡುಗರು ತಿಮ್ಮಣ್ಣನ ಸುತ್ತಲೂ ಕೂಡಿ,—

"ಬ್ರಹ್ಮಚ್ಚಾರೀ ಆಗುವ ತುಂಟ
ಎಮ್ಮೆ ಕೋಣ ಕತ್ತೇ ನೆಂಟ
ಬೆಕ್ಕು ನಾಯಿ ಜಗಳ ಗಂಟ
ಮನೋಹರದ ಭೋಜನ ಬಂಟ"

ಎಂದು ಹಾಡಿ ಹಾಡಿ ಹಾರಿ ಹಾರಿ ಗಲಭೆಯೆಬ್ಬಿಸಿದರು. ಅವರ ಗೌಜಿ ಯನ್ನು ನಿವಾರಿಸಿ ನಿವಾರಿಸಿ ಲಚಿಮತ್ತೆಗೆ ಸಾಕುಸಾಕಾಗಿ ಹೋಯಿತು.

ಚಪ್ಪರದಲ್ಲಾಗುವ ಹೆಂಗಸರ ಗಲಾಟೆಯನ್ನು ಅಡಗಿಸಲಿಕ್ಕೆ ಲಚಿ ಮತ್ತೆಯ ಒಡಕು ಗಂಟೆಯ ದನಿಯೇ ಸಾಕು. ಉಪನಯನದ ಚಪ್ಪರ ದಲ್ಲಿ ಜೊನ್ನೆಕಟ್ಟೆ ಸೀತಮ್ಮ, ಬೇಂಕಿನ ಕ್ಯಾರಮ್ಮ, ಬೈಲಕರೆ ಸುಬ್ಬಮ್ಮ, ಆಚ್ಮನೆ ಲಕ್ಷ್ಮಮ್ಮ, ಸಾರೋಟಿ ಚಿಟ್ಟಕ್ಕ ಮೊದಲಾದ ಅಮ್ಮ ಅಕ್ಕಂದಿ ರೆಲ್ಲಾ ಕೂಡಿಕೊಂಡು "ಅವಳು ಸೆರಗು ಹಾರಿಸುವ ಚಂದ ನೋಡು, ಅವಳ ಚಿನ್ನದ ಪಟ್ಟಿ ಗಂಡನ ಮನೆಯವರು ಹಾಕಿದ್ದೋ ತಾಯಿ ಮನೆದ್ದೋ? ಅವಳು ಆ ಬೊಂಬ್ಯಾ ಬಳೆ ಬಾಯಮ್ಮನ ಹತ್ರ ಎರವು ತಂದದ್ದಂತೆ, ಅಬ್ಬಬ್ಬೆ! ಅವಳ ಲೋಲಾಕಿನ ಚಂದ ನೋಡಬಾರದೆ? ಅಯ್ಯೊ! ಅದ್ಯಾಕೆ ಕೇಳ್ತೀರಿ ಬಿಡೀ! ನಮ್ಮ ಕಾಲದ ಕೊಪ್ಪು, ಬುಗುಡೀ ಎಲ್ಲಾ ಎಲ್ಲಿ ಹೊಯ್ತೋ ಏನೋ!" ಎಂದು ಮೊದಲಾಗಿ ಹೆಂಗುಸರು ಪಿಸು ಮಾತಾಡುತ್ತಿದ್ದಾಗ, ಲಚಿಮತ್ತೆ ಭರ್ರನೆ ಬಂದು—"ಯಾರೇ ಅದು ಬುಗುಡೀ ಧಗಡೀ! ಬುಗುಡೀ ಬೇಡಾ! ಧಗಡೀ ಬೇಡಾ! ಬಾಯಿಮುಚ್ಚಿ ಕೂಡೀ!" ಎಂದು ಕೂಗಿ

ಹೇಳುತ್ತ ಕಾಲಪ್ಪಳಿಸಿಕೊಂಡು ಈ ಕಡೆಯಿಂದಾಕಡೆಗೆ ಓಡಿದ್ದೇ ತಡ! ಚಪ್ಪರವೆಲ್ಲಾ ಪ್ರತಿಧ್ವನಿಗೊಟ್ಟು ಗಫ್ ಛಿಪ್!

ಹೀಗೆ ಚಪ್ಪರದಗಲಾಟೆಯನ್ನು ನಿಲ್ಲಿಸಲು ಹೆಂಗುಸರೊಳಗೆ ಲಚಿಮತ್ತೆ ಹೇಗೋ ಹಾಗೆ ಗಂಡಸರೊಳಗೆ ಉಡುವೆಟ್ಟದ ಶೀನಯ್ಯನವರಿದ್ದಾರೆ ಹಂಡೇ ದನಿಯವರು!

೨

ಉಪನಯನದ ಬ್ರಹ್ಮಚಾರಿಗೆ ಬಿಕ್ಷೆ ಹಾಕುವಾಗ ಲಚಿಮತ್ತೆ, ಒಂದು ದೊಡ್ಡ ಪಟ್ಟೆಯ ಧೋತರವನ್ನೂ, ತೆಳು ಜರಿಯ ಒಂದು ವಲ್ಲಿಯನ್ನೂ ಬಾಲವಟುವಿನ ಹೆಗಲ ಮೇಲೆ ಅಲಂಕರಿಸಿ ಒಂದು ರೂಪಾಯಿಯನ್ನೂ ಭಿಕ್ಷೆ ಹಾಕಿದ್ದರು ಧೋತರವು ಸೀರೆಯ ಹಾಗೆ ಇದ್ದ ಕಾರಣ ಅದು ತಿಮ್ಮಣ್ಣನ ಪ್ರಯೋಜನಕ್ಕೆ ಬೀಳಲಿಲ್ಲ ಅವನ ತಂದೆಗೆ 'ಮಡಿಪಂಚೆ'ಯಾಗಿ ಪಳಗಿತು.

ಜರಿಕಂಬಿಯ ವಲ್ಲಿ ಮಾತ್ರ ತಿಮ್ಮಣ್ಣನಿಗೆ ಸರಿಯಾಗಿತ್ತು. ಲಚಿಮತ್ತೆ ಅದನ್ನು ಅವನ ಹೆಗಲಿಗೇರಿಸಿದಾಗ ಜರಿಕಂಬಿ ಎರಡು ಬದಿಗಳಲ್ಲಿಯೂ ಕಾಣಿಸುವ ಹಾಗೆ ಮಡಿಕೆಗೊಂಡಿತ್ತು. ಉಪನಯನದ ಗೌಜಿ ಮುಗಿದ ಮೇಲೆ ಜಲಜಾ ಅದನ್ನು ಪೆಟ್ಟಿಗೆಯಲ್ಲಿಡಬೇಕೆಂದು ಬಿಸಿಲಿಗೆ ಹಾಕುವಾಗ ಆ ಬಗೆಯ ಮಡಿಕೆಯನ್ನು ತಿರುಗು ಮುರುಗು ಮಾಡಿಬಿಟ್ಟಳು. ತಿಮ್ಮಣ್ಣನಿಗೆ ಅಪಾರವಾದ ದುಃಖವಾಯಿತು.

ಆ ವಲ್ಲಿಯನ್ನು ಮೊದಲಿನಂತೆಯೇ ಮಡಿಕೆಮಾಡಿ ಕೊಡಬೇಕೆಂದು ತಾಯಿಯೊಡನೆ ಚಂಡಿಹಿಡಿದು ಕಾಡಿದನು. ಅವನ ಕೂಗನ್ನು ಕೇಳಿ ಎಷ್ಟೋ ಮಂದಿ ಕೂಡಿ ಹೇಗೆ ಹೇಗೆ ಬುದ್ಧಿಯನ್ನು ತಿರುಗಿಸಿ ಮಡಿಕೆ ಹಾಕಿದರೂ, ಆ ಮಾಯದ ವಲ್ಲಿಗೆ ಮೊದಲಿನಂತೆ ಇಬ್ಬದಿಯಲ್ಲಿಯೂ ಜರಿಯಂಚು ಬರುವಂತೆ ಮಾಡಲಾಗಲೇ ಇಲ್ಲ. ತಿಮ್ಮನಿಗೆ ವಲ್ಲಿ ಮಡಿಕೆಮಾಡಿ ಕೊಡಬೇಕೆಂದು, ಕಾಡೋಳೀ ಇಂದ್ರಾವಳಿಕ್ಕ, ಬೈಲಕರೆ ದೊಡ್ಡಮ್ಮ, ಆಚೆ ಮನೆ ಅಕ್ಕತ್ತೆ ಮೊದಲಾದವರೆಲ್ಲಾ ಕೈಕೊಟ್ಟು ನೋಡಿ ನೋಡಿ "ನಮ್ಮಿಂದಾಗದಪ್ಪ ಈ ಲಚಿಮತ್ತೆಯ ವಲ್ಲಿಯನ್ನು ಸರಿ ಮಡಚಲಿಕ್ಕೆ" ಎಂದು ಬಿಟ್ಟು ಅತ್ತ ಹೋಗಿಬಿಟ್ಟರು. ತಿಮ್ಮಣ್ಣ ಹಟಬಿಡಲಿಲ್ಲ. "ಅತ್ತೆ ಕೊಟ್ಟ ವಲ್ಲೀನ

ಕೊಟ್ಟ ಹಾಗೆ ಮಡಚಿ ಕೊಡದಿದ್ದರೆ ನಾನು ಊಟ ಮಾಡೋದೇ ಇಲ್ಲ; ಶಾಲೆಗೆ ಹೋಗೋದೇ ಇಲ್ಲ." ಎಂದು ಚಂಡಿಹಿಡಿದು ತಾಯಿಯನ್ನು ಪೀಡಿಸಲು ಪ್ರಾರಂಭಿಸಿದನು. ತಾಳ್ಮೆಯ ತಾಯಿಗೆ ಸಿಟ್ಟುಬಂದು ಹಿಡಿಗಡ್ಡಿಗಳ ಅಚ್ಚನ್ನು ಅವನ ಬೆನ್ನಮೇಲೆ ಎಬ್ಬಿಸಿಯೇ ಬಿಟ್ಟಳು.

"ಈ ವಲ್ಲೀನ ಈಗ ಮುಟ್ಟಲಿಕ್ಕೇ ಕೂಡದು. ಪೆಟ್ಟಿಗೆಯಲ್ಲಿಡುತ್ತೇನೆ. ಮದುವೆಗೋ ಜಾತ್ರೆಗೋ ಹೋಗುವಾಗ ಮೈಮೇಲೆ ಹಾಕಿಕೊಂಡರೆ ಚೆಂದ ಕಾಣುತ್ತದೆ" ಎಂದು ಜಲಜಮ್ಮನೆಂದರೆ ತಿಮ್ಮಣ್ಣ ಬಿಡಲಿಲ್ಲ. "ನಾನು ಶಾಲೆಗೆ ಹೋಗುವಾಗ ಈ ವಲ್ಲೀನ ಕೊಂಡುಹೋಗುತ್ತೇನೆ" ಎಂದು ಹಟ ಮಾಡಿದ ಇದನ್ನೆಲ್ಲ ಕೇಳಿದ ಲಚಿಮತ್ತೆ—"ಹೋಗಲೇ ಜಲಜಾ! ಅವನ ವಲ್ಲಿ ಅವನು ಎಲ್ಲಿಗೆ ಬೇಕಾದರೂ ಹಾಕಿಕೊಂಡು ಹೋಗಲಿ." ಎಂದು ತೀರ್ಮಾನ ಹೇಳಿಬಿಟ್ಟರು. ತಿಮ್ಮಣ್ಣ ಆ ವಲ್ಲಿಯನ್ನು ಶಾಲೆಗೆ ಹೋಗುವಾಗ ಮೈಮೇಲೆ ಹಾಕಿಕೊಂಡು ಹೋಗಲಿಕ್ಕೆ ಪ್ರಾರಂಭ ಮಾಡಿದ.

ಶಾಲೆಗೆ ಹೋದರೆ ಹುಡುಗರು ಸುಮ್ಮನಿರುವರೆ? ಅವನೊಬ್ಬ ವಲ್ಲೀ ಹೊತ್ತುಕೊಂಡು, ನೂತನ ಪುರುಷನಾಗಿ ಮದುಮಗನ ಹಾಗೆ ಪ್ರತ್ಯಕ್ಷನಾದುದನ್ನು ನೋಡಿ, "ಹೊ! ಬ್ರಹ್ಮಚಾರಿಗಳು!" ಎಂದರು ಕೆಲವರು, ಹಲವರು "ಮದುಮಗ ತಿಮ್ಮಾ! ಮದುಮಗ ತಿಮ್ಮಾ!" ಎಂದು ಗೇಲಿಮಾಡಿದರು. ಮಹಾ ಅಭಿಮಾನಿಯಾದ ತಿಮ್ಮಣ್ಣ ನಾಚಿಕೊಂಡು ವಲ್ಲಿಯನ್ನು ಸಣ್ಣ ಮುದ್ದೆಯಾಗಿ ಮಾಡಿ, ತನ್ನ ಪುಸ್ತಕದ ಸಂಚಿಯೊಳಗೆ ಹುದುಗಿಸಿ, ಬೆಂಚಿಯ ಅಡಿಯಲ್ಲಿ ಇಡುತ್ತಿರುವುದನ್ನು ಹದ್ದಿನ ದೃಷ್ಟಿಯವರಾದ 'ಜೋಡುಬಳೆ' ವೆಂಕಟರಾಯ ಮಾಸ್ತರು ಕಂಡೇ ಬಿಟ್ಟರು.

ಒಡನೆಯೆ ಅವರು ಸರಸರನೆ ತಿಮ್ಮಣ್ಣನ ಬಳಿಗೆ ಬಂದು, ಬಾಗಿ, ಬೆಂಚಿನಡಿಯ ಅವನ ದಪ್ತರದ ಸಂಚಿಯನ್ನೆತ್ತಿ, ವಲ್ಲಿಯನ್ನು ಹೊರದೆಗೆದು, ಅದರಿಂದ ತಿಮ್ಮನ ಬಾಲಜುಟ್ಟಿನ ಬೋಳು ತಲೆಗೆ ಒಂದು ಸುತ್ತುಸುತ್ತಾದ ಮುಂಡಾಸನ್ನು ಕಟ್ಟಿದರು. ಮುಂಡಾಸಿನ ತಲೆಯ ತಿಮ್ಮಣ್ಣನವರನ್ನು ಕಾಣುತ್ತಲೇ ಕ್ಲಾಸಿನಲ್ಲಿದ್ದ ಹುಡುಗರೆಲ್ಲ ಗೊಳ್ಳೆಂದು ನಕ್ಕುಬಿಟ್ಟರು ಪುನಃ ಅವಮಾನದಿಂದ ತಿಮ್ಮಣ್ಣನ ಮುಖವು ಇಷ್ಟು ಸಣ್ಣದಾಯಿತು. "ಅಮ್ಮ ಹೇಳಿದ ಹಾಗೆ ಕೇಳುತ್ತಿದ್ದರೆ, ಈ ಸಂಕಟವಾಗುತ್ತಿರಲಿಲ್ಲ" ಎಂದು ತನ್ನೊಳಗೇ ಮಿಡುಕಿದನು. ಕಣ್ಣಿನಲ್ಲಿ ನೀರು ತುಂಬಿತು.

ಕೂಡಲೇ ವೆಂಕಟರಾಯ ಮಾಸ್ತರರು ಸಿಟ್ಟಿನಿಂದ ಕಣ್ಣು ಬೆಳಗಿಸಿ ಇಡೀ ಕ್ಲಾಸನ್ನು ಚುರಚುರನೆ ನೋಡಿ "ಸ್ಟೇಂಡ್ !" ಎಂದರು. ಹುಡುಗರೆಲ್ಲಾ ಹೆದರಿ ಒಮ್ಮೆಗೇ ಹಾರಿ ನಿಂತರು. ತಿಮ್ಮಣ್ಣನೂ ನಿಂತ.

ವೆಂಕಟರಾಯ ಮಾಸ್ತರು ಬಳುಕುವ ಸುರುಳೀಬೆತ್ತವನ್ನು ಕೈಯಲ್ಲಿ ತೆಗೆದುಕೊಂಡು, ಮೊದಲಿನಿಂದ ಕಡೆಯ ತನಕ ಒಬ್ಬೊಬ್ಬ ಹುಡುಗನ ಕೈಯನ್ನೂ ಮುಂದೆ ನೀಡಿಸಿ ಅಂಗೈ ಮೇಲೆ "ರ್ರಫ್ ರ್ರಫ್" ಎಂದು ಛಡಾಯಿಸುತ್ತಾ ಬಂದರು. ಅಂಗೈಯನ್ನು ಮುಂದೆ ಚಾಚಲು ಹಿಂದೆ ಮುಂದೆ ನೋಡಿದರೆ ತೊಡೆಯ ಮೇಲೊಂದು ಛಡಿ ಮೊದಲೇ ಹೆಚ್ಚೆರಗಿ ಅನಂತರ ಅಂಗೈಗೂ ಬರುತ್ತಿತ್ತು. ಈ ಕ್ರಮವು ಗೊತ್ತೇ ಇದ್ದುದರಿಂದ ಹುಡುಗರು ಯಾವುದೋ ಒಂದು ಶಿಂಡಿಗೆ ಆತುರದಿಂದ ಕೈ ಚಾ ಚು ವಂ ತೆ ನಾಮುಂದೆ ನಾಮುಂದೆ ಎಂಬಂತೆ ಕೈ ಮುಂದೆ ಚಾಚಿ "ಹಾಯ್ ಹಾಯ್" ಎನ್ನುತ್ತಾ ಆ ಛಡಿಯ ಸವಿಯನ್ನು ಚಪ್ಪರಿಸಿಕೊಂಡರು.

ಈ ಛಡಿ ಪೀಡೆ ತಿಮ್ಮಣ್ಣನ ಬಳಿಗೆ ಬಂದಾಗ ಅವನೂ ಲಗುಬಗೆಯಿಂದ ತನ್ನ ಕೈಯನ್ನು ಚಾಚಿದನು. ಆದರೆ ಮಾಸ್ತರರು "ನಿನಗೆ ಆ ಮೇಲೆ" ಎಂದು ಹೇಳಿ ತಮ್ಮ ಕಾರ್ಯವನ್ನು ಮುಂದುವರಿಸಿಕೊಂಡೇ ಹೋದರು. ಎಲ್ಲರಿಗೂ ಹೀಗೆ ದಂಡೋಪಚಾರವಾದ ಮೇಲೆ, ಮಾಸ್ತರು ತಮ್ಮ ಸ್ಥಳದಲ್ಲಿ ನಿಂತುಕೊಂಡು, ಬೆತ್ತವನ್ನು ತಿರುಗಿಸುತ್ತಾ ಕ್ಲಾಸನ್ನು ನೋಡಿ, "ನನ್ನ ಅಕ್ಕರೆಯ ಮಕ್ಕಳೇ! ನಿಮಗೆಲ್ಲ ಸಕ್ಕರೆಯಂಥ ಛಡಿಕೊಟ್ಟದ್ದು ಏತಕ್ಕೆಂದು ಗೊತ್ತಾಯಿತೊ ?" ಎಂದು ಕೇಳಿದರು.

ಹುಡುಗರಲ್ಲಿ ಕೆಲವರು ತಗ್ಗಿದ ದನಿಯಿಂದ "ನಕ್ಕದ್ದಕ್ಕೆ ಸಾರ್"

"ನಗುವಿಗೆ ಕಾರಣ ?"

"ತಿಮ್ಮಣ್ಣನ ಮುಂಡಾಸು"

"ತಿಮ್ಮಣ್ಣನಿಗೇನು ಶಿಕ್ಷೆ ?"

"ನಮಗೆ ಗೊತ್ತಿಲ್ಲ ಸಾರ್"

"ಅವನಿಗೆ ಬೇರೆ ಒಳ್ಳೇ ಶಿಕ್ಷೆ ಕೊಡಬೇಕು. ತಿಮ್ಮಾ ಹೀಗೆ ಬಾ."

ತಿಮ್ಮನು ಮಾಸ್ತರ್ರ ಬಳಿಗೆ ಹೋದನು. ಮಾಸ್ತರು ಅವನನ್ನು ಕೈ ಹಿಡಿದು ಕರೆದುಕೊಂಡು 'ಟೀಚರ್ಸ್ ರೂಂ'ಗೆ ತೆರಳಿದರು. ಹೋಗುವಾಗ

ಉಳಿದ ಹುಡುಗರಿಗೆ ವಾಡಿಕೆಯಂತೆ 'ಕೋಪಿ ಬರೆಯಲಿಕ್ಕೆ ಆಜ್ಞಾಪಿಸಿದ್ದರು.

ಆ 'ಟೀಚರ್ಸ್ ರೂಮಿ'ಗೆ 'ಹೆಡ್ಮಾಸ್ತ್ರ ಕೋಣೆ' ಎಂದು ಶಾಲಾ ಬಾಲಕರ ಪರಿಚಯದ ಹೆಸರು. ಆ ಕೋಣೆಯೊಳಗೆ ಹುಡುಗರು ಹೋಗುವುದೆಂದರೆ, ಅದೂ ಅವನು ತಪ್ಪುಗಾರನಾದರೆ, ಹೆಬ್ಬುಲಿಯ ಗವಿಯೊಳಗೆ ಹೋಗುವವನ ಹಾಗೆಯೇ. ಕ್ಲಾಸಿನ ಉಪಾಧ್ಯಾಯರಿಂದ ತೀರಿಸಲು ಅಸಾಧ್ಯವಾದ ಹುಡುಗರ ನ್ಯಾಯವು 'ಹೆಡ್ಮಾಸ್ತ್ರ ಕೋಣೆ'ಗೆ ಹೋಗುತ್ತದೆ. ಬೆಂಚಿಯ ಮೇಲೆ ನಿಲ್ಲುವ ಅಪರಾಧಕ್ಕಿಂತ ದೊಡ್ಡ ಆಪಾದನೆಗೆ "ಹೆಡ್ಮಾಸ್ತ್ರ ಕೋಣೆಗೆ ನಡೀ" ಎಂದು ಕ್ಲಾಸ್ ಮಾಸ್ತರ್ರ ಅಪ್ಪಣೆಯಾಗುತ್ತದೆ. ಅಲ್ಲಿಗೆ ಹೋದವನ ಗತಿ ಏನಾಯಿತೆಂಬುದನ್ನು "ರ್ರಫ್ ರ್ರಫ್" ಎಂದು ಅಲ್ಲಿಂದ ಕೇಳಿ ಬರುವ ಸುರುಳೀ ಛಡಿಯ ಬಿಸಿಬಿಸಿ ಶಬ್ದವು ಚೆನ್ನಾಗಿ ಕೇಳಿಸಿ ಹುಡುಗರನ್ನೆಲ್ಲಾ ನಡುಗಿಸಿ ಬಿಡುತ್ತಿತ್ತು.

ಇಂತಹ ಭಯಂಕರ ಸ್ಥಾನಕ್ಕೆ ತನ್ನನ್ನು ಕರೆದೊಯ್ಯುವುದನ್ನು ನೋಡಿ ವಲ್ಲಿಯನ್ನು ಶಾಲೆಗೆ ತಂದುದಕ್ಕೆ ಪ್ರತ್ಯೇಕವಾಗಿ ತನಗೆ ಶಿಕ್ಷೆಯಾಗುತ್ತದೋ ಎಂದು ಭಯ--ಸಂದೇಹಗಳಿಂದ ತೂಗಾಡಿಕೊಂಡೇ ತಿಮ್ಮಣ್ಣ ಹೆಡ್ಮಾಸ್ತ್ರ ಕೋಣೆಯೊಳಗೆ ಹೊಕ್ಕನು. ಇನ್ನು ಸ್ವಲ್ಪ ಹೊತ್ತಿಗೆಲ್ಲಾ ಅವನಿಗೆ ಒಳ್ಳೆಯ ಭಾರವಾದ ಛಡಿ ತಿಂಡಿ ಸಿಕ್ಕುವುದೆಂದು ನಿರೀಕ್ಷಿಸುತ್ತ ಅವನ ಕ್ಲಾಸಿನ ಹುಡುಗರು ಗುಣುಗುತ್ತಿದ್ದರು.

ಅಲ್ಲಿ ಮಾಸ್ತರುಗಳು ಯಾರೂ ಇದ್ದಿಲ್ಲ. ಹೆಡ್ಮಾಸ್ತರು ಮಾತ್ರ ಓ ಅಲ್ಲಿ ಕಿಟಕಿಯ ಬಳಿಯಲ್ಲಿ ಮೇಜಿಯ ಮುಂದೆ ಕುರ್ಚಿಯ ಮೇಲೆ ಕುಳಿತುಕೊಂಡು ಏನೋ ಬರೆಯುತ್ತಿದ್ದರು. ಅವರ ಈಚೆಯ ಬದಿಯ ಮೇಜಿಯ ಮೇಲೆ ತೀಕ್ಷ್ಣವಾದ ಸುರಳೀ ಬೆತ್ತವು ವಿಶ್ರಮಿಸಿಕೊಂಡಿತ್ತು. ಈ ಮೇಜಿಯ ಬದಿಯಲ್ಲಯೇ ತಿಮ್ಮಣ್ಣನನ್ನು ನಿಲ್ಲಿಸಿ ವೆಂಕಟರಾಯ ಮಾಸ್ತರು ಆ ಉದ್ದವಾದ ಸುರಳೀಬೆತ್ತವನ್ನು ಕೈಗೆತ್ತಿಕೊಂಡರು. ಅದನ್ನು ನೋಡಿದ್ದೇ ತಡ, ತಿಮ್ಮಣ್ಣ ಗಡಗಡನೆ ನಡುಗುತ್ತಾ—"ಸಾರ್! ತಪ್ಪಾಯ್ತು. ತಾಯಿಯ ಮಾತು ಕೇಳದೆ ವಲ್ಲಿಯನ್ನು ಶಾಲೆಗೆ ತಂದೆ. ಇನ್ನು ತರುವುದಿಲ್ಲ. ಮಾಫ್ ಮಾಡಿ ಸಾರ್!" ಎರಡು ಕೈಮುಗಿದು ತಡವರಿಸುತಾ ಅಂಗಲಾಚಿದನು. ವೆಂಕಟರಾಯ ಮಾಸ್ಟರು ಮುಗುಳ್ ನಗುತ್ತಾ ಆ ಬೆತ್ತವನ್ನು ಎತ್ತಿ ಬೀರು

ವಿನ ಮೇಲೆ ಹಾಕಿ, ತಿಮ್ಮಣ್ಣನ ರಟ್ಟೆ ಹಿಡಿದೆತ್ತಿ ಮೇಜಿಯ ಮೇಲೆ ಕುಳ್ಳಿರಿಸಿದರು. ಮೋಸಹೋಗಿ ತಿಮ್ಮನ ಮುಖ ಇಷ್ಟು ಸಣ್ಣದಾಯಿತು.

ಬಳಿಕ ಮಾಸ್ತರು ಆಚೆಯ ಕವಾಟಿನೊಳಗಿಂದ, ಒಂದು ಲಡ್ಡು ಒಂದು ಜಿಲೇಬಿ,—ಅವರ ಉಪಾಹಾರಕ್ಕೆ ತರಿಸಿದುದೆಂದು ಕಾಣುತ್ತದೆ—ಅವನ್ನೊಂದು ತಟ್ಟೆಯಲ್ಲಿಟ್ಟು ತಿಮ್ಮನ ಮುಂದಿಟ್ಟು "ತಿನ್ನು" ಎಂದರು.

ಏನೂ ತೋಚದೆ ತಿಮ್ಮ ದಾಕ್ಷಿಣ್ಯದಿಂದ "ಬೇಡ ಸಾರ್—ಬೇಡ" ಎಂದರೆ ಮಾಸ್ತರು ಅವನ ಇದಿರೇ ಕುರ್ಚಿಯಲ್ಲಿ ಕುಳಿತು "ನಿನ್ನಂತಹ ಹುಡುಗರು ತಿಂಡಿ ಬೇಡ ಎಂದು ಸುಳ್ಳು ಹೇಳಬಾರದು. ಬೇಕೆಂದು ಹೆಚ್ಚು ತಿನ್ನಲೂ ಬಾರದು" ಎನ್ನುತ್ತಾ ಜಿಲೇಬಿಯ ತುಂಡನ್ನು ತಾನೇ ಅವನ ಬಾಯಿಗಿಟ್ಟರು. ತಾವೂ ಚೂರು ಚೂರಾಗಿ ತಿನ್ನಲಾರಂಭಿಸಿದರು.

ಈಗ ತಿಮ್ಮನ ಹೃದಯದಲ್ಲಿ ಧೈರ್ಯದ ಗಾಳಿ ಚೆನ್ನಾಗಿ ಭೀಸಲಾರಂಭವಾಯಿತು. ನಿರ್ಭಯದಿಂದ ತಿಂದನು. ಮಾಸ್ತರು, ಅವನ ಬೆನ್ನು ತಟ್ಟುತ್ತ ವಲ್ಲಿಯ ವೃತ್ತಾಂತವನ್ನು ಅವನ ಬಾಯಿಯಿಂದಲೇ ಕೇಳಿಕೊಂಡ ಮೇಲೆ,-"ತಿಮ್ಮ, ಈ ವಲ್ಲಿಯನ್ನು ದಿನಾ ಮೈ ಮೇಲೆ ಹಾಕಿಕೊಂಡು ಶಾಲೆಗೆ ಬಾ. ನಾನು ನಿನಗೆ ಮುಂಡಾಸು ಕಟ್ಟುತ್ತೇನೆ. ಹುಡುಗರು ಹೇಗೆ ನಗುತ್ತಾರೋ ನೋಡುತ್ತೇನೆ" ಎಂದು ಹುರಿದುಂಬಿಸಿದರು-ಹುಡುಗಾಟದ ಮಾಸ್ತರು!

ಅದೇನೋ ತಿಮ್ಮಣ್ಣನ ಮೇಲೆ ವೆಂಕಟ್ರಾಯ ಮಾಸ್ತರ್ರಿಗೆ ಬಲು ಇಚ್ಛೆ. ಅವನಿಗೆ ಆ ವಲ್ಲಿಯ ಮೇಲೆ ಬಹಳ ಅನುರಾಗವಾಗಿದೆ ಎಂಬುದನ್ನು ಅರಿತೇ ಅವರು ಹಾಗೆ ಹುರಿದುಂಬಿಸಿದರು. ಅದರೊಂದಿಗೆ ಅವರು ಕಿಂಚಿತ್ ತಮ್ಮ ಆಟದ ಬುದ್ಧಿಯನ್ನೂ ಬೆರೆಸಿರಬೇಕು. ಇಲ್ಲದಿದ್ದರೆ ಶಾಲೆಗೆ ವಲ್ಲಿ ಯಾಕೆ? ಮುಂಡಾಸು ಯಾಕೆ? ಹೌದು. ವೆಂಕಟರಾಯ ಮಾಸ್ತರು ಬಹಳ ಹುಡುಗಾಟದ ಮಾಸ್ತರರೆಂಬುದೂ ಸುಳ್ಳಲ್ಲ.

೮

ಜೋಡು ಬಳೆ ವೆಂಕಟರಾಯ ಮಾಸ್ತರು ಪದವಿಯಲ್ಲಿ ಸಾಮಾನ್ಯ 'ಡ್ರಾಯಿಂಗ್ ಟೀಚರ್' ಆದರೆ ಆ 'ಕಳಾಭೂಷಣೀ' ಶಾಲೆಗೆ ಅವರು ತುಂಬಾ ಮಹತ್ವಪ್ರಾಯರಾಗಿದ್ದರು. ಆ ಶಾಲೆಯನ್ನು ಮುಂದಕ್ಕೆ ತಂದ ಮುಂದಾಳುಗಳಲ್ಲಿ ಅವರಿಗೂ ಮುಖ್ಯ ಸ್ಥಾನವಿದೆ. ಬರೇ ಡ್ರಾಯಿಂಗ್ ಕಲಿತ

ಟೀಚರ್ ಮಾತ್ರ ಅವರಲ್ಲ. ಜನ್ಮತಃ ಕಲಾವಿದರು; ಕಲಾರಾಧಕರು; ಸುಮ್ಮನೆ ನಡೆಯುವಾಗಲೂ ತಿರುಗಾಡುವಾಗಲೂ ಯಾವುದಾದರೊಂದು ಪುಸ್ತಕವನ್ನು ಮನಸ್ಸಿನಲ್ಲಿಯೇ ಓದುತ್ತಿರುವರು. 'ಫೇಂಬರ್ಲಿನ'ರ ಕೈಯಲ್ಲಿ ಯಾವಾಗಲೂ ಕೊಡೆಯಿರುವ ಹಾಗೆ ವೆಂಕಟರಾಯ ಮಾಸ್ತರಿಗೆ 'ಪುಸ್ತಕಂ ಹಸ್ತಭೂಷಣಂ' ಆಗಿತ್ತು. ಅವರು ಓದುವುದನ್ನು ನೋಡಿ ಪುಸ್ತಕದಲ್ಲಿ ಸಂಪೂರ್ಣ ಲಯಿಸಿ ಹೋಗಿರುವರಲ್ಲಾ ಎಂದುಕೊಂಡು ಹುಡುಗರೇನಾದರೂ ತಪ್ಪು ತಂಟೆಯನ್ನು ಪ್ರಾರಂಭಿಸಿದರೆ ಸಾಕು, ಅವರು ಸಪ್ಪಳ್ಳಿಲ್ಲದೆ ಹದ್ದಿನ ಹಾಗೆ ಬಂದು ಆ ತಂಟೆಗಾರರ ಕಿವಿಗಳನ್ನು ಹಿಂಡುವಾಗ "ಓ ಹೋ! ವೆಂಕಟರಾಯ ಮಾಸ್ತರ್ರ ಎರಡು ಕಣ್ಣು ಎರಡು ಕೆಲಸಗಳನು ಒಂದೇ ಬಾರಿ ಮಾಡುತ್ತದಪ್ಪ" ಎಂದು ಅರಿವಾಗುತ್ತದೆ!

ತಿಮ್ಮಣ್ಣ ಕೂಡಾ ಅವರ ಹಾಗೆಯೇ ಒಬ್ಬ ಎಳೆಯ ಕಲಾಭ್ರಾಂತ. ವೆಂಕಟರಾಯ ಮಾಸ್ತರ್ರ ಕೈಚಳಕದ ಮೇಲೆಯೇ ತಿಮ್ಮಣ್ಣನ ಕಣ್ನೋಟ ವಿಶೇಷವಾಗಿತ್ತು. ಅವರು ಬೋರ್ಡಿನಲ್ಲಿ ಡ್ರಾಯಿಂಗ್ ಮಾಡುವಾಗ, ಅವರು ಹೇಗೆ ಆರಂಭಿಸುವರು, ಅವರ ಕೈ ಹೇಗೆ ಹೇಗೆ ತಿರುಗುತ್ತದೆ ಎಂಬುದನ್ನು ತಿಮ್ಮಣ್ಣ ಬಲು ಜಾಗ್ರತೆಯಾಗಿ ಪರೀಕ್ಷೆ ಮಾಡುತ್ತಿದ್ದನು. ಆ ಮಾಸ್ತರು ಕತೆ ಹೇಳುವುದರಲ್ಲಿಯೂ ಬಲು ಜಾಣರು. ಅವರಂತೆಯೇ ಅಭಿನಯ ಮಾಡಿ ಕತೆ ಹೇಳಲಿಕ್ಕೆ ತಿಮ್ಮಣ್ಣನೂ ಪ್ರಯತ್ನಪಡುತ್ತಿದ್ದನು. ಪದ್ಯ ಹೇಳುವುದರಲ್ಲಿಯೂ ಅವರು ಸಮರ್ಥರು. ಅವರು ಹೇಳುವ "ಚುಂಚುಂ ಮ್ಯಾನ್" "ಹೆಬ್ಬೆಟ್ಟರಾಯ" "ಪಿಟೀಲು ಹುಡುಗಿ" ಮೊದಲಾದ ಕತೆಗಳನ್ನೂ, "ತೆಂಕಣ ಗಾಳಿಯಾಟ" "ಮೂಡುವನೂರವಿ" ಮೊದಲಾದ ಪದ್ಯಗಳನ್ನು ಅವರಂತೆ ಹಾವ-ಭಾವ ಅಂಗ ವಿನ್ಯಾಸಗಳನ್ನು ಮಾಡುತ್ತ ಹೇಳುವುದೆಂದರೆ ಅವನಿಗೂ ತುಂಬ ಉತ್ಸಾಹ; ಕೇಳುವುದೆಂದರೆ ಇತರರಿಗೂ ತುಂಬ ಇಷ್ಟ. ಚಿತ್ರಗಳೆಂದರೂ ತಿಮ್ಮಣ್ಣನಿಗೆ ತುಂಬ ಇಷ್ಟ. ವೆಂಕಟರಾಯ ಮಾಸ್ತರು ಶಾಲೆಯೊಳಗೆ ಅನೇಕ ಚಿತ್ರಗಳನ್ನು ಚಿತ್ರಿಸಿದ್ದರು, ಚಿತ್ರಿಸುತ್ತಲೂ ಇದ್ದರು. ಕತೆಗಳಿಗೆ ಸಂಬಂಧಪಟ್ಟ ದೊಡ್ಡ ದೊಡ್ಡ ಬಣ್ಣದ ಚಿತ್ರಗಳನ್ನು ತಾವೇ ಚಿತ್ರಿಸಿ ಹುಡುಗರಿಗೆ ತೋರಿಸುತ್ತಿದ್ದರು. ಅವುಗಳನ್ನೆಲ್ಲಾ ನೋಡಿ ನೆನಪಿಟ್ಟುಕೊಂಡು, ತಿಮ್ಮಣ್ಣನು ಅವರ ಚಿತ್ರಗಳಿಗೆ ಎಗತಾಳಿಯೋ ಎಂಬಂತೆ, ಬಾಲಹಸ್ತ ಚಿತ್ರಗಳನ್ನು ಗೀಚಿ, ವೆಂಕಟರಾಯ ಮಾಸ್ತರಿಗೆ ತೋರಿಸಿ ಅವರಿಂದ 'ಶಹಭಾಸ್' ಗಿರಿಯನ್ನು ಹೊಂದುತ್ತಿದ್ದನು.

ಈ ಬಗೆಗಳಿಂದ ವೆಂಕಟರಾಯ ಮಾಸ್ತರರಿಗೂ ತಿಮ್ಮಣ್ಣನಿಗೂ ಪರಸ್ಪರ ಮನಸ್ಸಿನೊಳಗೆ ಅದೊಂದು ಹೊಂದಿಕೆಯಿತ್ತು. ಈ ದಿನ ತಿಮ್ಮನು ಲಚಿಮತ್ತೆಯ ವಲ್ಲಿಯನ್ನು ಶಾಲೆಗೆ ಒಯ್ದು, ಆ ನೆಚ್ಚಿನ ಮಾಸ್ತರರಿಂದ ಮುಕುಟಕ್ಕೆ ಮುಂಡಾಸು ಕಟ್ಟಿಸಿಕೊಂಡು, ಹೆಮ್ಮೆಯಿಂದಲೂ ಆನಂದದಿಂದಲೂ ಮನೆಗೆ ಬಂದು,

"ಅಮ್ಮ ನೋಡೇ ಇಲ್ಲಿ,
ಲಚಿಮತ್ತೆಯ ವಲ್ಲಿ,
ಹೋಗಿ ಶಾಲೆಯಲ್ಲಿ,
ಬಿದ್ದು ಸಂಚಿಯಲ್ಲಿ,
ಡ್ರಾಯಿಂಗ್ ಮಾಸ್ತ್ರ ಕೈಲಿ,
ಮುಂಡಾಸಾಯ್ತು ತಲೇಲಿ!
ನನಗೇ ತಿಂಡೀ ಬಾಯಲ್ಲಿ!
ಹುಡುಗರಿಗೆಲ್ಲಾ ಸುರುಳೀಲಿ!"

ಎಂದು ತಾಯಿಯ ಇದಿರಿನಲ್ಲಿ ನಲಿದನು—ದೊಡ್ಡ ಮುಂಡಾಸುರಾಯನಾಗಿ, ಒಂದು ಮಾತು. ತಿಮ್ಮಣ್ಣನೊಬ್ಬ ಎಳೆ ಬೀಜದಂತಹ ಕವಿ ಎಂಬುದನ್ನು ಕೂಡ ನಿಮಗೆ ತಿಳಿಸಲು ಮರೆತೆ. ಈಗ ನೆನಪಿಟ್ಟುಕೊಳ್ಳಿ.

ಆ ಮೇಲೆ ತಿಮ್ಮಣ್ಣನು ದಿನಾಲೂ ಆ ವಲ್ಲಿಯನ್ನೇ ಮೈಮೇಲೆ ಹಾಕಿಕೊಂಡು ಶಾಲೆಗೆ ಹೋಗುತ್ತಿದ್ದ. ಮೊದಮೊದಲು ಒಂದೆರಡು ಬಾರಿ ವೆಂಕಟರಾಯ ಮಾಸ್ತರು ತಿಮ್ಮಣ್ಣನ ತಲೆಗೆ ತಮಾಶೆಯಾಗಿ ಮುಂಡಾಸು ಕಟ್ಟುತ್ತಿದ್ದರು. ಆ ಮಾಸ್ತರ್ರ ಭಯದಿಂದ ಹುಡುಗರಾರೂ ಈಗ ನಗುವುದಿಲ್ಲ. ಆ ಮೇಲೆ ವೆಂಕಟ್ರಾಯ ಮಾಸ್ತರ್ರು "ಶಾಲೆಯಲ್ಲಿ ಮುಂಡಾಸು ಬೇಡ; ವಲ್ಲಿ ಮೈಮೇಲೇ ಇರಲಿ" ಎಂದರು. ಆದರೂ ತಿಮ್ಮಣ್ಣನಿಗೆ ಮುಂಡಾಸಿನ ಮೋಹ ಬಲವಾಗಿತ್ತು. ಅವನಿಗೊಬ್ಬ ಮುಂಡಾಸಿನ ಗೆಳೆಯನೂ ಸಿಕ್ಕಿದ.

ತಿಮ್ಮಣ್ಣ ಶಾಲೆಬಿಟ್ಟು ಮನೆಗೆ ಹೋಗುವಾಗ, ಅವನ ಓರಿಗೆಯ ಗೆಳೆಯ ಪದ್ಮನಾಭ ಆ ವಲ್ಲಿಯಿಂದ ಅವನ ತಲೆಗೆ ಮುಂಡಾಸನ್ನು ಕಟ್ಟಲಾರಂಭಿಸಿದನು. ಶಾಲೆ ಬಿಟ್ಟ ಮೇಲೆ ಮೈದಾನದಲ್ಲಿ ಆಡುವಾಗಲೂ ಮನೆಗೆ ಹೋಗುವಾಗಲೂ ಬರುವಾಗಲೂ ಪದ್ಮನಾಭನು ತಿಮ್ಮಣ್ಣನ ಜತೆಯಲ್ಲಿಯೇ ಇದ್ದು ಅವನಿಗೆ ವಲ್ಲಿಯ ಮುಂಡಾಸು ಕಟ್ಟುತ್ತಲೂ, ಸರಿಯಾಗಲಿಲ್ಲವೆಂದು ಬಿಚ್ಚುತ್ತಲೂ ಪುನಃ ಕಟ್ಟುತ್ತಲೂ, ಹೀಗೆ ಇವರಿಬ್ಬರ ಒಂದು ಜತೆ ಬೇರೆಯೇ

ಆಯಿತು. ಈ ಮುಂಡಾಸಿನ ಪುಚ್ಛು ಆ ಪದ್ಮನಾಭನಿಗೂ ಬಡಿದು, ಅವನೂ ವೈದೀಕರ ಅಂಗವಸ್ತ್ರವೊಂದನ್ನು ಮೈಮೇಲೆ ಹಾಕಿಕೊಂಡು ಶಾಲೆಗೆ ಬರ ಲಾರಂಭಿಸಿದನು. ಇಬ್ಬರೂ ಗುಡ್ಡದ ದಾರಿಯಲ್ಲಿ ಒಬ್ಬರನ್ನೊಬ್ಬರು ಸಂಧಿ ಸುತ್ತಿದ್ದರು, ಅಗಲುತ್ತಿದ್ದರು. ಈ ತಿಮ್ಮ—ಪದ್ಮನಾಭರು ಇವನವನಿಗೆ ಅವನಿವನಿಗೆ ಮುಂಡಾಸು ಕಟ್ಟುತ್ತಾ ಬಿಚ್ಚುತ್ತಾ ನಡೆಯುವ ಅವಾಂತರದಲ್ಲಿ ಬೇರೆ ಹುಡುಗರು ಗೇಲಿ ಮಾಡುವುದನ್ನು ಕೂಡಾ ಲಕ್ಷಿಸದೆ ಹೋದರು. ಅಂದ ಮೇಲೆ ಹೊತ್ತಿಗೆ ಸರಿಯಾಗಿ ಶಾಲೆಗೆ ಮುಟ್ಟಬೇಕೆಂಬುದರ ಕಡೆಗೆ ಹೇಗೆ ಲಕ್ಷ್ಯ ಹೋದೀತು?

ಅವರು ಶಾಲೆ ಸೇರುವಾಗಲೂ, ಶಾಲೆಯಿಂದ ಮನೆ ಸೇರುವಾಗಲೂ ದಿನನಿತ್ಯ ಒಂದೆರಡು ಗಂಟೆ ತಡ-ತಡವಾಗಲು ವೊದಲಾಯಿತು. "ಏಕೆ ತಡ ವಾಯಿತೆ"ಂದು ಮಾಸ್ತರು ಕೇಳಿದರೆ, "ತಾಯಿ ಗಂಜಿ ಮಾಡುವಾಗ ಹೊತ್ತಾಯಿತು ಊಟ ಹೊತ್ತಾಯಿತು" ಎಂದು ಸುಳ್ಳು ಸೊಟ್ಟು ಹೇಳಿ ಬೆಂಚಿಯ ಮೇಲೆ ನಿಲ್ಲುತ್ತಿದ್ದರು.

ಮನೆಯಲ್ಲಿ ತಡವಾದ ಕಾರಣವೇನೆಂದು ತಾಯಿ ತಿಮ್ಮನನ್ನು ಕೇಳಿದರೆ, "ವೆಂಕಟರಾಯ ಮಾಸ್ತರು ಬಿಡಲಿಲ್ಲವಮ್ಮ. ಪದ್ಯ ಹೇಳಿಸಿದರು, ಕತೆ ಹೇಳಿಸಿದರು. ಆಟವಾಡಿಸಿದರು" ಎಂದು ಅಬದ್ಧವಾಡುತ್ತಿದ್ದನು.

ಸುಳ್ಳಿನ ಆಟ ಬಹಳ ದಿವಸ ನಡೆಯುವುದಿಲ್ಲ.

ಒಂದು ದಿನ ಸಾಯಂಕಾಲ ಶಾಲೆಬಿಟ್ಟ ಮೇಲೆ ವೆಂಕಟರಾಯ ಮಾಸ್ತ ರರು ಮನೆಗೆ ಹೋಗುತ್ತಾ ಹಾಗೆಯೇ ಕಟ್ಟೆಬೆಟ್ಟಿಗೆ ತಿರುಗಿ ಜಲಜಮ್ಮನನ್ನು ಕರೆದು—"ಜಲಜಮ್ಮ, ನಿಮ್ಮ ಮಗನನ್ನು ದಿನಾಲೂ ತಡವಾಗಿ ಶಾಲೆಗೆ ಕಳುಹಿಸುತ್ತಿರುವಿರಲ್ಲಾ? ಗಂಜಿ ಊಟ ಬೇಗ ಮಾಡಿಸಿ ಗಂಟೆಗೆ ಸರಿಯಾಗಿ ಶಾಲೆಗೆ ಕಳುಹಿಸಲಾಗದೆ?" ಎಂದು ಕೇಳಿದರು.

"ನಾನೆಲ್ಲಿ ತಡಮಾಡಿ ಕಳುಹಿಸುತ್ತೇನೆ ಮಾಸ್ತರೆ? ಹೊತ್ತಾಯ್ತು ಹೊತ್ತಾಯ್ತು ಅಂತ ಅವಸರ ಮಾಡಿ ಬಹು ಬೇಗ ಊಟಮಾಡಿ ಹೋಗು ತ್ತಾನಲ್ಲಾ?"

"ಹಾಗೋ?"

"ಅಲ್ಲದೆ ಈಗ ನೋಡಿ ಮಾಸ್ತರೇ, ಶಾಲೆ ಬಿಟ್ಟು ಎಷ್ಟೋ ಹೊತ್ತಾ ಯಿತಷ್ಟೆ? ಹೊತ್ತು ಕೂಡಾ ಕಂತುತ್ತಾ ಬಂತು. ಇನ್ನೂ ಬರಲಿಲ್ಲ ಹುಡುಗ.

ವಿನಾಲೂ ಇನೇ ಹಾಡು. ಕೇಳಿದರೆ ನೀವೇ ಆಟಪಾಟ ಮಾಡಿಸುತ್ತೀರಿ ಅಂತ ಹೇಳುತ್ತಾನೆ."

"ಹೌದೆ? ಹಾಗಿಲ್ಲವಲ್ಲಮ್ಮ?"

ಆಗ ದೂರದಲ್ಲಿ ತೋಡು ಹತ್ತಿ ಗದ್ದೆ ಹುಣಿಯಲ್ಲಿ ನಡೆಯುತ್ತಾ, ಗೋಸ್ವಾಯಿಯಂಗಿಯ, ವಲ್ಲೀ ಮುಂಡಾಸಿನ ತಲೆಯ, ಜೋಳಿಗೆಯಂತಹ ದಪ್ತರ ಸಂಚಿಯ ಬಗಲಿನ, ತಿಮ್ಮಣ್ಣ ಮುಂಡಾಸನ್ನು ಮುಟ್ಟಿ ನೋಡುತ್ತಾ ಬರುತ್ತಿರುವುದು ಕಾಣಿಸಿತು. ನೋಡಿ ಮಾಸ್ತರು—"ಅಗೊ ಹುಡುಗ ಬರುತ್ತಾನೆ. ಜಲಜಮ್ಮ, ನಾನು ನಿಮ್ಮ ಹಟ್ಟಿಯಲ್ಲಿ ಅಡಗುತ್ತೇನೆ. ನೀವು ವಿಚಾರಿಸಿ. ಏನು ಹೇಳುತ್ತಾನೋ ನೋಡುವ" ಎಂದು, ತಟಕ್ಕನೆ ಹಟ್ಟಿಯೊಳಗೆ ನುಗ್ಗಿದರು.

ತಿಮ್ಮ ಮನೆಯ ಅಂಗಳವನ್ನು ಮುಟ್ಟುವಾಗ, ಅದು ಎಷ್ಟನೇ ಬಾರಿಯ ಸುತ್ತೋ, ಮುಂಡಾಸನ್ನು ಪುನಃ ಸುತ್ತಿಕೊಳ್ಳುತ್ತಿದ್ದನು. ವಲ್ಲಿಯ ಅರ್ಧ ಭಾಗವು ಮುಂಡಾಸಾಗುತ್ತಾ ತಲೆಯಲ್ಲಿಯೂ, ಉಳಿದರ್ಧವು ಅವನ ಹೆಗಲು ಕೈಗಳಲ್ಲಿ ಇಳಿದೂ ಇತ್ತು. ಅವನನ್ನು ನೋಡಿದ ಕೂಡಲೇ ಜಲಜಮ್ಮ—"ಇವತ್ತೇನೋ ಇಷ್ಟು ಹೊತ್ತು? ಎಂದು ವಿಚಾರಿಸಿದಳು.

ತಿಮ್ಮ ಮುಖಗಂಟು ಹಾಕಿ—"ವೆಂಕಟ್ರಾಯ ಮಾಸ್ತರು ಬಿಡಲೇ ಇಲ್ಲಮ್ಮ. ತೆಂಕಣ ಗಾಳಿಯಾಟ ಹೇಳೂ ಅಂದರು—"

"ಕಳ್ಳ! ಸುಳ್ಳು ಹೇಳುತ್ತೀಯಾ? ಗೊತ್ತುಂಟೊ ನಿನ್ನ ಠಕ್ಕು ನನಗೆ! ಇಲ್ಲಿ ಬಾರಾ ಇಲ್ಲಿ" ಎಂದು ಜಲಜಮ್ಮ ಕೋಪದಿಂದ ಅವನ ರಟ್ಟೆಯನ್ನು ಹಿಡಿದಳು. ಅವಳ ಇನ್ನೊಂದು ಕೈ ಮಾಡಿನ ಎಡೆಯಿಂದ ಒಂದು ಕೋಲನ್ನು ಕಿತ್ತುಕೊಂಡಿತು.

ತಾಯಿಯ ಪೆಟ್ಟಿನ ಅನುಭವವಿರುವ ತಿಮ್ಮಣ್ಣ ಏನೋ ಗಂಡಾಂತರ ಬಂತೆಂದು ಹೆದರಿದನು. ಈ ಸಂದರ್ಭದಲ್ಲಿ ವಾಡಿಕಯಾಗಿ ಕೈಕೊಳ್ಳುವ ಯುಕ್ತಿಯೆಂದರೆ ದೂರ ಓಡುವುದು. ಅಂತೆಯೇ ರಟ್ಟೆಯನ್ನು ಕೊಸರಿ ಕೊಳ್ಳಲು ಹವಣಿಸುತ್ತಿದ್ದನು. ಅಷ್ಟರಲ್ಲಿ ಹಟ್ಟಿಯೊಳಗಿನಿಂದ ವೆಂಕಟರಾಯ ಮಾಸ್ತರು—"ಹೊಡೆಯ ಬೇಡಿ, ಜಲಜಮ್ಮ!" ಎನ್ನುತ್ತ ಹೊರ ಬಿದ್ದರು. ಅವರನ್ನು ನೋಡಿ ತಿಮ್ಮನ ಕೈಕಾಲೇ ಬಿದ್ದು ಹೋದ ಹಾಗಾಯಿತು.

ಮಾಸ್ತರು ತಿಮ್ಮನ ಕೈಯನ್ನು ಹಿಡಿದು—"ಹುಡುಗಾ, ನೀನು ನಿನ್ನ ಪಾಠದಲ್ಲಿ ಸುಳ್ಳಾಡಬಾರದು, ಎಂದು ಓದಿರುವಿಯಾ? ಅಲ್ಲ, ಸುಳ್ಳಾಡ ಬೇಕು ಎಂದು ಓದಿರುವಿಯಾ?" ಎಂದು ಕೇಳಿದರು.

"ಸುಳ್ಳಾಡಬಾರದೂ ಅಂತ ಓದಿದ್ದೇನೆ" ಎಂದು ತಿಮ್ಮ ಅಳುಗೊರಳಿನಿಂದ ರಾಗವಾಗಿ ಹಾಡಿದನು.

"ಹಾಗಾದರೆ ಈಗ ನೀನು ಹೇಳಿದ್ದು ಸುಳ್ಳೋ ಸತ್ಯವೊ?"

"ಸುಳ್ಳು"

"ತಪ್ಪೋ ಸರಿಯೊ?"

"ತಪ್ಪು"

"ಇನ್ನು ಮೇಲೆ ಸುಳ್ಳು ಹೇಳುತ್ತಿಯಾ?"

"ಇಲ್ಲ"

ಒಳ್ಳೇದು. ನೀನು ಮನೆಗೆ ಬರಲಿಕ್ಕೂ ಶಾಲೆಗೆ ಬರಲಿಕ್ಕೂ ಏಕೆ ತಡವಾಗುತ್ತದೆ?"

ತಿಮ್ಮಣ್ಣ ಬಳಬಳನೆ ಕಣ್ಣೀರು ಸುರಿಸುತ್ತಾ—"ಹಾಡೀಕಾಡು ಪದ್ಮನಾಭ—ನಾನು—ಈ ಮುಂಡಾಸು— ಕಟ್ಟುತ್ತಾ— ಬರುವಾಗ—ತಡವಾಯಿತು."

ಕೂಡಲೇ ಜಲಜಮ್ಮ ಸಿಟ್ಟಿನ ಒತ್ತುದನಿಯಿಂದ—"ಅದಕ್ಕೇ ಉಪನಯನದ ವಳ್ಳೀನ ಶಾಲೆಗೆ ಹಾಕ್ಕೊಂಡು ಹೋಗಬೇಡಾಂತ ನಾನು ಹೇಳಿದ್ದು. ನನ್ನ ಮಾತು ಕೇಳಿದಿಯಾ? ಅದರ ಮೇಲೆ ಮಾಸ್ತ್ರೇ ನಿಮ್ಮ ಪ್ರೋತ್ಸಾಹ ಬೇರೆ ಹುಚ್ಚು ಮಂಗನಿಗೆ ಹೆಂಡಕುಡಿಸಿದ ಹಾಗೆ!" ಎಂದಳು.

ಮಾಸ್ತರು ಮುಗುಳು ನಗುತ್ತ—"ಹೌದು ಜಲಜಮ್ಮ ತಿಮ್ಮಣ್ಣನ ಈ ಅಪರಾಧದಲ್ಲಿ ಅರ್ಧದೋಷ ನನ್ನದೇ ಆಗಿದೆ. ಕ್ಷಮಿಸಿ" ಎಂದು ಹೇಳಿ, ತಿಮ್ಮನನ್ನು ಅಧಿಕಾರ ನೇತ್ರದಿಂದ ನೋಡುತ್ತ ಖಂಡಿತ ಸ್ವರದಲ್ಲಿ "ಎಲೊ ತಿಮ್ಮ ಜಾಗ್ರತೆ! ಇನ್ನು ಮೇಲೆ ಈ ವಳ್ಳಿಯನ್ನು ಶಾಲೆಗೆ ತರಲೇ ಕೂಡದು ಎಲ್ಲಿಯಾದರೂ ಕದ್ದು ಮುಚ್ಚಿ ತಂದೀ! ಜಾಗ್ರತೆ! ಹುಂ, ತೆಗೆದು ಕೊಡು ತಾಯಿಯ ಕೈಯಲ್ಲಿ. ತಪ್ಪಾಯ್ತು ಕ್ಷಮಿಸಮ್ಮಾ ಎಂದು ತಾಯಿಯ ಕಾಲಿಗೆ ಅಡ್ಡ ಬೀಳು" ಎಂದು ಆಣತಿಯಿತ್ತರು.

ತಿಮ್ಮ ಹಾಗೆಯೇ ತಾಯಿಯ ಕಾಲಿಗೆ ಅಡ್ಡಬಿದ್ದಾಗ, ಜಲಜಮ್ಮನ ಹೃದಯವು ಕರಗಿ—"ಸಾಕು ಏಳಾ, ಇನ್ನು ಮೇಲೆ ಗೊತ್ತಾಗುತ್ತದಲ್ಲ ನಿನ್ನ ಬುದ್ಧಿ. ಇನ್ನು ಮೇಲೆ ಹೀಗೆ ಠಕ್ಕು ಠವುಳಿ ಹಟಾಗಿಟಾವಾಡು. ನಿನ್ನ ಹದಮಾಡಬೇಕಂತ ಅಪ್ಪನಿಗೆ ಕಾಗದ ಬರೀತೇನೆ" ಎಂದು ಹೇಳಿ ಆ ವಲ್ಲಿಯನ್ನು ಕಿತ್ತುಕೊಂಡಳು.

ತಿಮ್ಮನ ತಂದೆ ಪದ್ಮನಾಭೈಯ ಆಗ ಊರಲ್ಲಿರಲಿಲ್ಲ. ತೆಂಕಲಾಗಿ ಮಲೆಯಾಳಕ್ಕೆ ಹೋಗಿದ್ದರು. ಅವರು ಚಿಕ್ಕಂದಿನಲ್ಲಿ ಮಲೆಯಾಳದತ್ತ ಕಡೆಯಲ್ಲೆ ತಿರುಗಾಡಿದವರು; ಆದುದರಿಂದ ಅವರು ಆಗಾಗ ಮಲೆಯಾಳಕ್ಕೆ ಹೋಗಿ ಅಲ್ಲಿ ಕೆಲವು ತಿಂಗಳಿದ್ದು ಊರಿಗೆ ಬರುತ್ತಿದ್ದರು. ಅವರ ಒಬ್ಬ ಅಣ್ಣ ಮಲೆಯಾಳದಲ್ಲಿಯೇ ಸ್ಥಿರವಾಗಿದ್ದರು. ಆದುದರಿಂದ ಪದ್ಮನಾಭೈಯ ಅತ್ತ ಹೋದಾಗಲೆಲ್ಲಾ ಅಲ್ಲಿ 'ಶಾಂತಿ' ಕೆಲಸವಿದ್ದೇ ಇತ್ತು. ನಾಲ್ಕು ದುಡ್ಡು ಸಂಪಾದನೆ ಮಾಡುವುದಾದರೆ ಅವರು ಅಲ್ಲಿಯೇ. ಕಷ್ಟಕೃತ ಮಾಡುತ್ತಿರುವುದು ಊರಿನಲ್ಲಿ. ಆದುದರಿಂದ ತಿಮ್ಮಣ್ಣನಿಗೆ ತಂದೆಯದೇನೂ ಭಯವಿರಲಿಲ್ಲ. ಅವನಿಗೆ ಬಯ್ಯುವವಳು ಹೊಯ್ಯುವವಳು ಎಲ್ಲ ತಾಯಿಯೇ.

ಮುಂಡಾಸಿನಿಂದ ಪರಾಭವ ಹೊಂದಿದ ಮೇಲೆ ತಿಮ್ಮನು ಮತ್ತೊಮ್ಮೆ ತಾಯಿಯ ಹೊಯ್ಮೆಗೆ ಪಾತ್ರನಾದುದು ಅವನ ಸ್ವಂತ ಬುದ್ಧಿಯಿಂದಲ್ಲ; ಅವನಿಗೆ ಸಿಕ್ಕಿದ ಒಬ್ಬ ಹೊಸ ಗೆಳೆಯನಿಂದಾಗಿ. ತಿಮ್ಮ ಆ ವರ್ಷದ ಪರೀಕ್ಷೆಯಲ್ಲಿ 'ಫೇಲ್' ಆಗಿ ಮೂರನೆಯ ಕ್ಲಾಸಿನಲ್ಲಿಯೇ ಗಟ್ಟಿಯಾಗಿ ಬೇರೂರಿದಾಗ, ಎರಡನೆಯ ಕ್ಲಾಸಿನಿಂದ 'ಪಾಸಾ'ಗಿ ಬಂದ 'ವಾಮನ ಮರ ಕಾಲ'ನೆಂಬ ಮೊಗವೀರ ಹುಡುಗನು ತಿಮ್ಮನ ಬಳಿಯೇ ಕುಳಿತನು. ಪಾಸಾದುದರಿಂದ ಅವನು 'ಹುಶಾರು' ಹುಡುಗನೆಂದು ತಿಮ್ಮನ ಭಾವನೆ. ತಿಮ್ಮನು ತನ್ನ 'ಡ್ರಾಯಿಂಗ್ ಬುಕ್ಕಿ'ನಲ್ಲಿ ಚಿತ್ರಿಸಿದ ಚಿತ್ರವನ್ನು ನೋಡಿ, ಆ ಹುಶಾರು ಹುಡುಗನು ತಿಮ್ಮನ ಬೆನ್ನು ತಟ್ಟಿ 'ಶಾಭಾಸ್' ಅಂದುದನ್ನು ಕೇಳಿ ತಿಮ್ಮಣ್ಣ ಬಹಳ ಉಬ್ಬಿದ. ತನಗೂ ಕೆಲವು ಚಿತ್ರಗಳನ್ನು ಚಿತ್ರಿಸಿ ಕೊಡುವಂತೆ ತಿಮ್ಮಣ್ಣನಿಗೆ ಅವನ ಪ್ರೋತ್ಸಾಹವಾಯಿತು. ಹೀಗೆ ಅವರಿಬ್ಬರ ಹೊಸ ಗೆಳೆತನ ಪ್ರಾರಂಭವಾಯಿತು.

ಆ ವಾಮನ ಮರಕಾಲ ದೂರದ ಬಯಲಿನಾಚೆಗಿರುವ, ಕಡಲತಡಿಯ ಚಬುಕಿನ ಕಾಡಿನ ಒಳಗಿರುವ ಹರುಕು ಗುಡಿಸಲಿನೊಳಗಿನಿಂದ ಆ ಶಾಲೆಗೆ

ಬರುತ್ತಿದ್ದ. ಬರುವಾಗ ತರುವ ಒಂದು ಸಣ್ಣ ಬುತ್ತಿಯ ಗಂಟನ್ನು, ಕ್ಲಾಸು ನಡೆಯುವಾಗ ಬೆಂಚಿಯಡಿಯಲ್ಲಿ ಇಟ್ಟಿದ್ದು, ಮಧ್ಯಾಹ್ನ ಶಾಲೆ ಬಿಟ್ಟಮೇಲೆ ಅವನ್ನು ತಿಂದು ಅಲ್ಲಿಯೇ ಇರುತ್ತಾನೆ.

ಒಂದು ದಿನ ತಿಮ್ಮಣ್ಣ ಅವನ ಬುತ್ತಿಯಲ್ಲಿ ಏನಿರುವುದೋ, ಅದನ್ನು ಹೇಗೆ ತಿನ್ನುತ್ತಾನೋ ನೋಡಬೇಕೆಂದು ಅಲ್ಲಿಯೇ ಇದ್ದು ನಿರುಕಿಸಿದ ಆ ಬುತ್ತಿಯಲ್ಲಿ ಕೆಂಪು ಕೆಂಪು ಅನ್ನದ ಒಂದು ಮುದ್ದೆಯೂ, ನಾಲ್ಕೈದು ಒಣಗಿಸಿದ ಉಪ್ಪು ಮೀನೂ ಇದ್ದದ್ದು ನೋಡಿ ತಿಮ್ಮನಿಗೆ ರೋಸಿಕೆಯೂ ಕುತೂಹಲವೂ ಉಂಟಾಯಿತು. ವಾಮನನು ಆ ಮೀನನ್ನು ಚೀಪುತ್ತಾ ಅನ್ನದುಂಡೆಯನ್ನು ಬಾಯಿಯೊಳಗೆ ತಳ್ಳಿ ನುಂಗುವ ಚೆಂದವನ್ನು ಕೌತುಕದಿಂದ ನೋಡಿದನು. "ಅಯ್ಯಯ್ಯ! ಈ ಮೀನು ಏನು ರುಚಿಯೊ! ಚೀಂಪಿ ಚೀಂಪಿ ನಕ್ಕಿ ನಕ್ಕಿ ತಿಂತೀಯಲ್ಲ!" ಎಂದು ತಿಮ್ಮಣ್ಣ ಕೇಳಿದ.

"ನಿಂಗೇನು ಗೊತ್ತು ಇದರ ರುಚಿ ಬ್ರಾಂಬರಿಗೆ! ಉಪ್ಪು—ಖಾರ ಎಲ್ಲಾ ಹಾಕಿದೆ. ಹ್ಯಾಗಿದೆ ಗೊತ್ತೊ?" ಎಂದ ವಾಮನ.

"ಮತ್ತೆ ನಿಮ್ಮ ಜಾತಿಯವರ ಮನೆಯಲ್ಲೆಲ್ಲ ಮೀನು ಹಚ್ಚುತ್ತಾ ಇರುವಾಗ ಕೆಟ್ಟ ವಾಸನೆ ಬರುತ್ತದಲ್ಲ?"

"ಹಚ್ಚುವಾಗ ವಾಸನೆ ಬಂದರೇನಾಯಿತು? ಅದನ್ನೆಲ್ಲ ತೆಗೆದು ಶುದ್ಧ ಮಾಡಿ ಇದನ್ನು ಮಾಡ್ತಾರೆ ಗೊತ್ತೊ? ಈಗ ನೋಡಂತೆ ಇದರ ಪರಿಮಳಾನ ಘಮ್ಮಂತ ಹ್ಯಾಗಿದೆ!" ಎಂದು ವಾಮನನು ಅರ್ಧ ಚೀಪಿದ ಆ ಮೀನಿನ ಮುಳ್ಳನ್ನು ಎಂಜಲು ಕೈಯಿಂದಲೇ ಎತ್ತಿ ತಿಮ್ಮನ ಮೂಗಿನ ಬಳಿಯಲ್ಲಿ ಹಿಡಿದನು.

"ವ್ವಪ್ಪಾ, ಏನು ಕೊಳಕೊ! ಕೆಟ್ಟ ಕಸ್ಸಂಟು!" ಎಂದು ತಿಮ್ಮಣ್ಣ ಮುಖವನ್ನು ಈಚೆಗೆ ತಿರುಗಿಸಿ ಸಿಂಡರಿಸಿಕೊಂಡನು.

"ಹೂ! ಕಸಂಟಂತೆ! *ಕೊದ್ದೆಲ್ ತಿನ್ನುವ †ಬೆರಣರಿಗೇನು ಗೊತ್ತು? ಒಂದು ಸಾರಿ ತಿಂದರೆ ಮತ್ತೆ ಕದ್ದು ತಿಂದಾರು!"—ವಾಮನನೆಂದ.

ಆಗ ಶಾಲೆಯ ತೋಟಗಾರ ಬರ್ಮಪ್ಪ ಫಕ್ಕನೆ ಅಲ್ಲಿಗೆ ಬಂದು, ಅದೇನೋ ಕಂಡು ಹಿಡಿದವನಂತೆ,—"ಅರರರರೆ! ಏನಿದು ತಿಮ್ಮಣ್ಣೋರೆ?

---

* ಕೊದ್ದೆಲ್=ಜೇಳೆ ಹುಳಿ. † ಬೆರಣ=ಬ್ರಾಹ್ಮಣ.

ವಿಸಾನು ನಕ್ಕಿನಕ್ಕಿ ನೋಡ್ತೀರಲ್ಲಾ! ಅಹ್ಹಹ್ಹಹ್ಹಹಾ!" ಎಂದು ಬಾಯಿ ತೆರೆದು ನಕ್ಕನು.

ತಿಮ್ಮಣ್ಣ ಅಪ್ರತಿಭನಾಗಿ—"ಇಲ್ಲ ಬರ್ಮಪ್ಪಾ, ನಾನೇನೂ ತಿಂದಿಲ್ಲ! ಕೊಳಕು! ಊ—ವೆ!" ಎಂದು ಓಕರಿಕೆ ತೋರಿಸಿದ.

"ಊವೆ! ಕೊಳಕು! ಅಹಾಹಾ! ಈಗ ನಕ್ಕಿ ನಕ್ಕಿ ಚೀಪಿದ್ದು ಯಾರೊ?" ಎಂದು ಅಣಕಿಸಿದನು ವಾಮನ.

"ನನಗೆಲ್ಲ ಗೊತ್ತಾಯ್ತು. ಹೇಳ್ತೀನೆ ನಿಮ್ಮ ತಾಯಿ ಹತ್ತಿರ!" ಎಂದು ಗೇಲಿಯಾಗಿ ನಗುತ್ತಾ ಬರ್ಮಪ್ಪ ಅತ್ತ ಹೋದ.

"ಸುಂಸುಮ್ಮನೇ ಹೇಳಿದರೆ ನೋಡುಮತ್ತೇ?"—ಎಂದು ತಿಮ್ಮಣ್ಣನೂ ಕೂಗಿದ.

ಎಲ್ಲಿ ಅವನು ತಾಯಿಯೊಡನೆ ಇಲ್ಲದ್ದೆಲ್ಲ ಹೇಳಿ ರಂಪ ಎಬ್ಬಿಸುತ್ತಾನೋ ಎಂದು ತಿಮ್ಮನಿಗೆ ಭಯವೇ ಆಯಿತು. ಬ್ರಾಹ್ಮಣ ಜಾತಿ ಮೀನು ತಿಂದರೆ ಎಷ್ಟು ಹೇಯವೆನಿಸುತ್ತದೆಂಬುದನ್ನು ತಿಮ್ಮಣ್ಣನ್ನು ಚೆನ್ನಾಗಿ ಬಲ್ಲ. ಇದರಿಂದ ಮಿಕಿಮಿಕಿ ಮಿಡುಕುವ ತಿಮ್ಮನನ್ನು ನೋಡಿ ವಾಮನನೆಂದ—"ನೀವೇನೂ ಮಿಡುಕಬೇಡಿ ಬಟ್ರೆ. ಈ ಬರ್ಮಪ್ಪ ಹಾಗೆಲ್ಲಾ ಸುಳ್ಳು ಹೇಳಿದರೆ ನಾನು ಹೇಳುತ್ತೇನೆ ನಿಮ್ಮ ತಾಯಿ ಹತ್ತಿರ ಸಾಕ್ಷಿ."

ಫಕ್ಕನೆ ತಿಮ್ಮನಿಗೆ ಧೈರ್ಯಬಂತು—"ಖಂಡಿತ ಹೇಳ್ತ್ಯಾ?"

"ಖಂಡಿತ ಹೇಳ್ತೇನೆ. ಆದರೆ ನಾಳೆ ನೀನು ಬರುವಾಗ ನನಗೆ ಸ್ವಲ್ಪ ನಿಮ್ಮ ಕೊದ್ದೆಲ್ ತಕ್ಕೊಂಡು ಬರಬೇಕು. ಅಂ?" ಎಂದು ಗಾಳ ಹಾಕಿದ ವಾಮನ.

ತಿಮ್ಮ ತಲೆತುರಿಸುತ್ತಾ—"ಹ್ಯಾಗೆ ತರಲಿ? ಅದು ಮುಸುರೆ ಆಗುತ್ತದಲ್ಲಾ? ಬ್ರಾಂಬ್ರು ಹಾಗೆಲ್ಲಾ ಮುಸುರೇ ವಸ್ತು ತರಬಾರದಲ್ಲಾ?"

"ನಿಮ್ಮ ಅಮ್ಮನಿಗೆ ಗೊತ್ತಾಗದ ಹಾಗೆ ತರಲಿಕ್ಕೆ ಆಗುವುದಿಲ್ಲವೆ?"

"ಅದು ಹ್ಯಾಗಾಗುತ್ತದೆ? ಬೆಳಿಗ್ಗೆ ಅಡುಗೆ ಕೂಡಾ ಆಗುವುದಿಲ್ಲಲ್ಲಾ?"

"ಹಾಗಾದರೆ ನಿಮ್ಮ ಪುಳಿಕೊದ್ದೇಲಿನ ರುಚಿ ನಾನು ನೋಡೋದು ಹ್ಯಾಗೆ? ನಮ್ಮಪ್ಪ ಹೇಳ್ತಾ ಇರ್ತಾನೆ ಬೆರಣೇರ ಕೊದ್ದೇಲೆಂದರೆ ಭಾರೀ ಗಥಬ್ಬಿರುತ್ತದಂತೆ!"

ತಿಮ್ಮಣ್ಣ ಸಂದೇಹದಿಂದ "ಹಾಗಾದರೆ......ಒಂದು ಮಾಡು. ಈಗ ನನ್ನೊಟ್ಟಿಗೆ ಬರುತ್ತ್ಯಾ?......"

"ಓ!" ಎಂದು ವಾಮನ ಇದ್ದ ಅನ್ನದ ಮುದ್ದೆಯನ್ನೆಲ್ಲ ಬಾಚಿಕೊಂಡು ಬಾಯಿಯೊಳಗೆ ತುರುಕಿ ಮುಗಿಸಿಬಿಟ್ಟ.

"ಬಾ ಹಾಗಾದರೆ. ನನ್ನಮ್ಮ ಬಹಳ ಒಳ್ಳೆಯವಳು. ನಿನ್ನನ್ನು ನನ್ನ ಸ್ನೇಹಿತಾ ಅಂತ ಹೇಳಿ ಹೊಗಳುತ್ತೇನೆ. ಹಾಗೆಯೇ ಸ್ವಲ್ಪ ಅನ್ನವೂ ಹುಳಿಯೂ ಹಾಕಲಿಕ್ಕೆ ಹೇಳುತ್ತೇನೆ—ಹಾಕ್ಯಾಳು."

"ನಡೀ ಹಾಗಾದರೆ"—ವಾಮನ ಲಗುಬಗೆಯಿಂದ ಕೈತೊಳೆದುಕೊಂಡು ಸಿದ್ಧನಾದ.

ನೀನೀಗ ಇಲ್ಲಿ ಬುತ್ತಿ ತಿಂದ್ಯಾಯ್ತಲ್ಲ? ಹುಳಿ ಅನ್ನ ಹ್ಯಾಗೆ ತಿಂತಿ?"

"ಓಹೊ! ನಿಮ್ಮ ಕೊದ್ದೇಲಿನ ಸುದ್ದಿ ಕೇಳಿದ ಕೂಡಲೇ ಈಗ ತಿಂದದ್ದೆಲ್ಲ ಎಲ್ಲಿಗೆ ಹೋಯಿತೋ ಏನೊ!"

ಸರಿ. ತಿಮ್ಮಣ್ಣನ ಹಿಂದೆ ವಾಮನ ಮಾರಕಾಲನೂ ಹೊರಟ. ಒಂದು ಸಣ್ಣ ಗುಡ್ಡದ ದಾರಿಯಲ್ಲಿ ನಡೆದು, ತೋಡಿಗಿಳಿದು, ಗದ್ದೆ ಹುಣಿಗೆ ಹತ್ತಿ, ಹುಣಿ ಹಿಡಿದು ಹೋದರೆ ಬಂತು ತಿಮ್ಮನ ಮನೆ.

ಜಗಲಿಯಲ್ಲಿ ಕಂಬದ ಬದಿಯಲ್ಲಿ ಕುಳಿತು ಮಗುವಿಗೆ ಸ್ತನ್ಯವೀಯುತ್ತಾ ಇದ್ದಳು ಜಲಜಮ್ಮ. ಮಗು ಪುಟ್ಟ ಹಾಗೆಯೇ ನಿದ್ದೆ ಹೋಗುತ್ತಿದ್ದ. ತಿಮ್ಮನನ್ನು ಕಾಣುತ್ತಲೇ ಅವಳು ಪುಟ್ಟನನ್ನು ಮಿದುವಾಗಿ ಗೋಡೆಯ ಬದಿಯಲ್ಲಿ ಮಲಗಿಸಿ—"ಇಷ್ಟು ಹೊತ್ತೇನೊ? ಈಗಷ್ಟೇ ಶಾಲೆ ಬಿಟ್ಟದ್ದೊ?" ಎಂದು ಕೇಳಿದಳು. ತಿಮ್ಮನ ಜತೆಯಲ್ಲಿರುವ ಹೊಸ ಶೂದ್ರ ಹುಡುಗನನ್ನು ನೋಡಿ ಅವಳ ಮುಖದಲ್ಲಿ ಪ್ರಶ್ನಾರ್ಥಕ ಚಿಹ್ನೆ ಮೂಡಿತು.

"ಹೌದಮ್ಮ. ಈಗಷ್ಟೇ ಶಾಲೆ ಬಿಟ್ಟದ್ದು. ಅಮ್ಮ, ಇವನು ನನ್ನ ಸ್ನೇಹಿತ. ಪಾಸಾಗಿ ಬಂದಿದ್ದಾನೆ ನಮ್ಮ ಕ್ಲಾಸಿಗೆ. ಲೆಕ್ಕದಲ್ಲಿ ತುಂಬ ಗಟ್ಟಿಗ. ಬಹಳ ಒಳ್ಳೆಯವ. ಇವನ ಮನೆ ದೂರ ಪಡ್ಡಾಗಿ ಉಂಟು. ಅದಕ್ಕೆ ಶಾಲೇಲೇ ಇರ್ತಾನೆ ಮಧ್ಯಾಹ್ನ ನಾನು ಸುಮ್ಮನೆ ಕರಕೊಂಡು ಬಂದೆ"—ಎಂದು ತಿಮ್ಮ ಅವನ ವಿಷಯವನ್ನು ತಾಯಿಗೆ ಹೇಳಿದ.

ಜಲಜಮ್ಮ ಮಾತೃಭಾವ ತುಂಬಿದ ಕರುಣಾರ್ದ್ರ ಹೃದಯಿ. 'ಚಿಕ್ಕ ಹುಡುಗ. ನಮ್ಮಂತೆಯೇ ಬಡವರ ಹುಡುಗ. ಮಧ್ಯಾಹ್ನ ಹಸಿವೆಯ ವೇಳೆ'. ಎಂಬ ಯೋಚನೆ ಅವಳ ಮನಸ್ಸಿನೊಳಗೆ ಹೊರಳುತ್ತಿರಲು,

"ಇವನು ಉಂಡಿದ್ದಾನೋ ಪಾಪ?" ಎಂಬ ಪ್ರಶ್ನೆ ಅವಳ ಬಾಯಿಯಿಂದ ಕೆಳಗೆ ಜಾರಿತು

"ಏನೋ ಒಂದಿಷ್ಟೇ ಬುತ್ತಿತಂದು ತಿಂತಾನಮ್ಮ, ಶಾಲೇಲೇ," ಎಂದು ತಿಮ್ಮಣ್ಣನಂದ. ಇನ್ನು ಇವನಿಗೆ ಅನ್ನ ಹುಳಿ ಹಾಕಿಸುವ ವಿಧಾನ ಹೇಗಪ್ಪಾ, ಎಂದು ತಿಮ್ಮಣ್ಣ ಗುಡ್ಡದಂಥ ಯೋಚನೆಯನ್ನು ಮಾಡುತ್ತಿರುವಾಗ, ಜಲಜಮ್ಮ ಆ ವಾಮನನನ್ನು ನೋಡಿ, "ಕುಳ್ಳು ಮಗ. ಒಂಜೀತು ನುಪ್ಪು ಪಾಡ್ವೇ" (ಕೂಡು ಮಗು, ಒಂದಿಷ್ಟು ಅನ್ನ ಹಾಕ್ತೇನೆ) ಎಂದುದನ್ನು ಕೇಳಿ ತಿಮ್ಮನ ಭಾರ ಹತ್ತಿಯಂತೆ ಹಾರಿಹೋಯಿತು. ವಾಮನನೂ ಕೃತಜ್ಞತೆಯನ್ನು ತೋರಿಸುವ ನಾಯಿಯ ಹಾಗೆ ನಗುತ್ತ ಜಗಲಿಯಂಚಿನಲ್ಲಿ ಕುಳಿತ.

ತಿಮ್ಮಣ್ಣ ಅವನನ್ನು ಅಡ್ಡಗಣ್ಣಿನಿಂದ ನೋಡಿ ಒಂದು ನಗುವನ್ನು ಹಾರಿಸಿ, ಚಾವಡಿಗೆ ಹೊಕ್ಕು, ತನ್ನ ದಪ್ತರಸಂಚಿ, ಅಂಗಿಗಳನ್ನು ಕಳಚಿಟ್ಟು, ಬಾವಿಕಟ್ಟೆಗೆ ಹೋಗಿ ಕೈಕಾಲು ತೊಳೆದುಕೊಂಡ. ವಾಮನನಿಗೂ ಒಂದು ಚೊಂಬು ನೀರು ಕೊಟ್ಟು ಕೈಕಾಲು ತೊಳೆಯಿಸಿದ.

ಅಷ್ಟರಲ್ಲಿ ಜಲಜಮ್ಮ ಆ ಹುಡುಗನಿಗೆ ಜಗಲಿಯಲ್ಲಿ ಒಂದು ಎಲೆ ಹಾಕಿದ್ದಳು. ತಿಮ್ಮಣ್ಣ ಅಲ್ಲಿ ವಾಮನನ್ನು ಕೂಡಿಸಿದಾಗ—"ನಿಮ್ಮ ತಾಯಿ ತುಂಬ ಒಳ್ಳೆಯವರು!" ಎಂದು ವಾಮನ ಗುಸುಗುಟ್ಟಿದ್ದು ಕೇಳಿ, ತಿಮ್ಮಣ್ಣನಿಗೆ ಉಂಡಷ್ಟು ಸಂತೋಷವಾಯಿತು. ಆದರೂ ಉಣ್ಣಬೇಕಲ್ಲವೆ? ಅವನು ಒಳಗೆ ಹೋದ.

ಜಲಜಮ್ಮನ ಪ್ರೀತಿಯ ಹಸ್ತದಿಂದ ಒಂದಿಷ್ಟು ಅನ್ನವೂ ಅದರ ಮೇಲೆ ಅಲಸಂಡೆಯ ಮುದ್ದೆ ಹುಳಿಯೂ ವಾಮನನ ಎಲೆಯ ಮೇಲೆ ಬಿದ್ದಿತು. ಅವನು ಜಗಲಿಯಲ್ಲಿ ಬಂದು ಕುಳಿತಾಗಲೇ ಅವನ ಪ್ರೀತಿಯ 'ಕೊದ್ದೆಲಿ'ನ ವಾಸನೆ ಅವನ ಮೂಗಿಗೆ ಹೊಕ್ಕು ಮನಸ್ಸನ್ನು ಅರಳಿಸಿತ್ತು. ಬಹಳ ಹಿಗ್ಗಿನಿಂದ ಸವಿದುಂಡನು. ಬಳಿಕ ಎಲೆಯನ್ನು ಎತ್ತಿಕೊಂಡು ಹೋಗಿ ದೂರ ಗದ್ದೆಗೆ ಬಿಸುಟು, ಕೈ ತೊಳೆದುಕೊಂಡು ಬರುವಾಗ, ಜಲಜಮ್ಮ ಒಂದು ಚೂರು ಸೆಗಣಿಯನ್ನು ಅವನು ಉಂಡ ಜಾಗಕ್ಕೆ ಹಾಕಿ, ಅವನಿಗೆ ಎಂಜಲು ಸಾರಿಸಲಿಕ್ಕೆ ಕಲಿಸಿಕೊಟ್ಟಳು. ಅವನು ಎಂಜಲು ಸಾರಿಸಿ ಕೈತೊಳೆದು ತಂಬಿಗೆಯನ್ನು ಕವುಚಿ ಇಟ್ಟನು. ಜಲಜಮ್ಮ ಲವಕ್ಕಿಷ್ಟು ನೀರು ಚೆಳಿದು ಎತ್ತಿಕೊಂಡು ಹೋದಳು ಅಷ್ಟರಲ್ಲಿ ತಿಮ್ಮನ ಊಟವೂ ಮುಗಿಯಿತು. ಹುಡುಗರಿಬ್ಬರೂ ಮತ್ತೆ ಶಾಲೆಗೆ ಹೋದರು.

೧೦

ಅನಂತರ ದಿನವೂ ಮಧ್ಯಾಹ್ನದಲ್ಲಿ ತಿಮ್ಮನ ಜತೆ ಹಿಡಿದು ವಾಮನ ಮರಕಾಲನೂ ಕಟ್ಟಿಬೆಟ್ಟಿಗೆ ಬರಲಾರಂಭಿಸಿದನು ಮಧ್ಯಾಹ್ನದ ವೇಳೆ, ಊಟದ ಹೊತ್ತು, ಚಿಕ್ಕ ಹುಡುಗ, ಅದು ಅಳತೇ ಅನ್ನದ ರೇಷನ್, ಕಾಲವಾಗಿರಲಿಲ್ಲ. ತನ್ನ ಚೊಚ್ಚಲು ಮಗನ ಗೆಳೆಯ ಎಂದುಕೊಂಡು ಜಲಜಮ್ಮನೂ, ಒಳಗೆ ತಿಮ್ಮಣ್ಣನಿಗೆ ಬಡಿಸುವಾಗ, ಹೊರಗೆ ಒಂದು ಮುಷ್ಟಿ ಅನ್ನ—ಹುಳಿಯನ್ನು ವಾಮನನಿಗೂ ಬಡಿಸುತ್ತಿದ್ದಳು ಬ್ರಾಹ್ಮಣರ ಬೇಳೇಹುಳಿಯ ರುಚಿಹಿಡಿದ ವಾಮನನು, ಶಾಲೆಗೆ ಬುತ್ತಿ ತರುವುದನ್ನು ಕೂಡಾ ಬಿಡಲಾರಂಭಿಸಿದನು. ಹೀಗೆಯೇ ಬಹುದಿನ ನಡೆಯುತ್ತಿದ್ದರೆ ಜಲಜಮ್ಮನಿಗಾದರೂ ಬೇಸರ ಬರುತ್ತಿದ್ದಿತು. ಆದರೆ ಅಂತಹ ಪ್ರಸಂಗವು ಬಾರದಂತೆಯೇ ವಾಮನನ ಗೆಳೆತನವು ಠಕ್ಕೆಂದು ಮುರಿಯುವಂತಾಯಿತು.

ಅಂದು 'ಗುಡ್ಡೆಯಂಗಡಿ'ಯ ಬಳಿ ಒಂದು ಡೊಂಬರಾಟವಿತ್ತು. ಮಧ್ಯಾಹ್ನದ ಮೇಲೆ ಮೂರು ಗಂಟೆಯಿಂದ ಆಟಕ್ಕೆ ಪ್ರಾರಂಭ. ಅದಕ್ಕೆ ಶಾಲೆಗೆ ಬಾರದೆ ಹುಡುಗರು ಚಕ್ಕರ್ ಕೊಡಬಾರದೆಂದು, ಮಾಸ್ತರುಗಳು ಹುಡುಗರಿಗೆಲ್ಲ ಡೊಂಬರಾಟಕ್ಕೆ ಹೋಗಬಾರದೆಂದು ಬೆಳಗ್ಗೆಯೇ ಎಚ್ಚರಿಸಿದ್ದರು. ಆದರೂ ಕೆಲವು ಹುಡುಗರು ಆಟಕ್ಕೆ ಹೋಗಲೇಬೇಕೆಂದು 'ಮಸಲತ್ತು' ಮಾಡಿಕೊಳ್ಳದಿರಲಿಲ್ಲ. ಅಂತಹರಲ್ಲಿ ನಮ್ಮ ತಿಮ್ಮಣ್ಣ-ವಾಮನರೂ ಸೇರಿದ್ದರು.

ಅವರಿಬ್ಬರೂ ಅಂದು ಮಧ್ಯಾಹ್ನ, ತಿಮ್ಮನ ಮನೆಯಿಂದ ಶಾಲೆಗೆ ನಡೆಯುವಾಗ, ವಾಮನ ಮರಕಾಲನು ಡೊಂಬರಾಟಕ್ಕೆ ಹೋಗೋಣವೆಂದು ತಿಮ್ಮನನ್ನು ಒತ್ತಾಯಿಸಲಾರಂಭಮಾಡಿದನು.

"ನಾನು ಬರುವುದಿಲ್ಲವೊ ಮಾಸ್ತರು ಹೊಡೀತಾರೆ" ಎಂದು ತಿಮ್ಮಣ್ಣ ಹೆದರಿದನು.

"ಮಾಸ್ತರ್ರ ಹತ್ತಿರ ಡೊಂಬರಾಟಕ್ಕೆ ಹೋದ್ದಂತ ಅನ್ನಬಾರದು. ಹೊಟ್ಟೆನೋವು ಬಂತಂತ ಹೇಳು, ಅಲ್ಲದಿದ್ದರೆ ಮನೇಲಿ ಅಡುಗೆಯಾಗಲಿಲ್ಲ ಅಂತ ಹೇಳು......" ಎಂದು ಮುಂತಾಗಿ ಬೋಧನೆ ಮಾಡಿ ಮಾಡಿ, ವಾಮನನು ಅಂತೂ ತಿಮ್ಮಣ್ಣನನ್ನು ಡೊಂಬರಾಟಕ್ಕೆ ತಿರುಗಿಸಿದನು. ಅಲ್ಲದೆ ತಿಮ್ಮಣ್ಣನಿಗೆ ಮಧ್ಯಾಹ್ನದ ಶಾಲೆಯೆಂದರೆ ಯಾವಾಗಲೂ ಸಂಕಟವೇ.

ಕಾರಣ ಅವನಿಗೆ ಜ್ವರ ಹುಟ್ಟಿಸುವಂತಹ ಆ ಲೆಕ್ಕದ ಪಾಠವು ಬರುವುದು ಮಧ್ಯಾಹ್ನದ ವೇಳೆಯಲ್ಲಿಯೇ. ಲೆಕ್ಕದ 'ಪೀರಿಯಡು' ಎಂದರೆ ತಿಮ್ಮನಿಗೆ ಬಹಳ ಅವಮಾನದ 'ಪೀರಿಯಡು'. ಅದು ಇಂದು ಒಂದು ದಿನದ ಮಟ್ಟಿಗಾದರೂ ತಪ್ಪಲಿ, ಎಂದುಕೊಂಡು, ತಿಮ್ಮಣ್ಣ ವಾಮನನೊಂದಿಗೆ ಶಾಲೆಯ ದಾರಿಯನ್ನು ಬಿಟ್ಟು, ಗುಡ್ಡೆಯಂಗಡಿಯ ದಾರಿ ಹಿಡಿದನು, ಡೊಂಬರಾಟಕ್ಕೆ.

'ಗುಡ್ಡೆಯಂಗಡಿ' ಎಂದರೆ ಎರಡು ಮೂರು ಅಂಗಡಿಗಳಿರುವ ಒಂದು ಪುಟ್ಟ ಪೇಟೆ. ಗ್ರಾಮಗಳಿಗೆ ಯಾವ ಸಾಮಾನು ಬೇಕಾದರೂ ಅಲ್ಲಿಗೇ ಬರಬೇಕು. ಆ ಅಂಗಡಿಗಳ ಮುಂದೆ ಸಂತೆಕಟ್ಟೆಯ ಮೈದಾನದಲ್ಲಿ ಇಂದು ಡೊಂಬರಾಟ ನೋಡಲಿಕ್ಕಾಗಿ, ಸುತ್ತುಮುತ್ತಣ ಗ್ರಾಮಗಳಿಂದ ಮಂದಿ ಬಂದು ಬಂದು ಗುಂಪುಗೂಡುತ್ತಲೇ ಇದ್ದರು. ನಮ್ಮ ತಿಮ್ಮಣ್ಣ-ವಾಮನರು ಚಿಕ್ಕ ಹುಡುಗರಾದುದರಿಂದ, ಜನರ ಗುಂಪಿನೆಡೆಯಿಂದ ಆ ಡೊಂಬರಾಟದ ನೋಟವು, ಚೂರು--ಚೂರಾಗಿ ನೋಡಲಿಕ್ಕೆ ಸಿಕ್ಕುತ್ತಿತ್ತು ಅಷ್ಟೇ. ಇದರಿಂದ ಇಬ್ಬರೂ ಪೇಚಾಡಿ ಪೇಚಾಡಿ ಬೇಸತ್ತು ಹೋದರು. ತಿಮ್ಮಣ್ಣನಿಗಾದರೂ ಒಳಗೊಳಗೆ ಭಯವೂ ಇಣಿಕುತಿತ್ತು-ಯಾರಾದರೂ ಶಾಲೆಯ ಮಾಸ್ತರೋ ಗೀಸ್ತರೋ ಎಲ್ಲಾದರೂ ಬಂದು ತನ್ನನ್ನು ನೋಡಿ ಬಿಡುವರೋ ಎಂದು.

ಇಬ್ಬರೂ ಸ್ವಲ್ಪ ಹೊತ್ತು ಗುಂಪಿನೆಡೆಯಿಂದ ಅಲ್ಲಿ ಇಲ್ಲಿ ಇಣಿಕಿ ಇಣಿಕಿದರು. ಬಳಿಕ ವಾಮನ ತಿಮ್ಮಣ್ಣನನ್ನು ಕರೆದುಕೊಂಡು, ಅತ್ತ ಅಂಗಡಿಯ ಬಳಿಗೆ ಹೋದ. ಅವನ ಕೊಳಕು ಅಂಗಿಯ ಕಿಸೆಯಲ್ಲಿ—ಮೀನು ಮಾರಿದ ದುಡ್ಡೋ ಏನೋ—ಕೆಲವು ಪೈಗಳು 'ಗಿಜಿಗಿಜಿ' ಮಾಡುತಿದ್ದುವು. ಅವನು ಒಂದು ಬೀಡೀ ಅಂಗಡಿಯ ಮುಂದೆ ನಿಂತು, ಒಂದು ಪೈಗೆ ಮೂರು ಬೀಡಿಗಳನ್ನೂ ಮೂರು ಪೈಗೆ ಒಂದು ಬೆಂಕಿ ಪೆಟ್ಟಿಗೆಯನ್ನೂ ತೆಗೆದುಕೊಂಡನು. ಇದೀಗ್ಗೆ ಇಲ್ಲಿ ಒಂದು ಅರಿಕೆ. ನಾವಿಲ್ಲಿ ಹೇಳುತ್ತಿರುವುದು ಇಂದಿನ ಕತೆಯಲ್ಲ; ೩೫ ವರ್ಷಗಳ ಹಿಂದಿನ ಕತೆ. ಆಗ ಬೀಡಿ—ಬೆಂಕಿಪೆಟ್ಟಿಗೆಗಳು ಅಷ್ಟು ಅಗ್ಗವಾಗಿದ್ದುವು. ಇರಲಿ.

ಅವನ್ನು ನೋಡಿ ತಿಮ್ಮಣ್ಣ ಆಶ್ಚರ್ಯದಿಂದ—"ಇದೇನೊ ಇದು ? ಬೀಡೀ ಸೇದ್ತೀಯಾ ನೀನು ?" ಎಂದ.

"ಇಲ್ಲ ಇಲ್ಲ. ಈ ಹೊತ್ತು ಮಾತ್ರ ಸ್ವಲ್ಪ ಮಜಾಮಾಡುವ ಬಾ".

"ನನಗೆ ಬೇಡಪ್ಪ! ಯಾರಾದರೂ ನೋಡಿದರೆ—?"

"ಯಾರೂ ಇಲ್ಲವೋ ಇಲ್ಲಿ. ಏನು ಹೆದರಿಕೆಯಪ್ಪ ಭಟ್ರ ಜಾತಿಗೆ! ಬಾ, ಅತ್ತ ಆ ದೊಡ್ಡ ಮರದಾಚೆಗೆ ಹೋಗೋಣ" ಎಂದು ವಾಮನನು ತಿಮ್ಮಣ್ಣನ ಕೈಯನ್ನು ಹಿಡಿದು ಎಳೆದುಕೊಂಡೇ ಹೋದನು. ಆ ದೊಡ್ಡ ಹಲಸಿನ ಮರದ ಆಚೆಯಲ್ಲಿ ಇಬ್ಬರೂ ಕುಳಿತರು. ಮಿತ್ರನ ಒತ್ತಾಯವೂ ತಿಮ್ಮನ ಹೆದರಿಕೆಯೂ ಕೊಂಚ ಹೊತ್ತು ಕಾದಾಡಿದುವು. ಕಡೆಗೆ ಮಿತ್ರನ ಒತ್ತಾಯವೇ ಗೆದ್ದಿತು. ತಿಮ್ಮ ವಾಮನ ಕೊಟ್ಟ ಬೀಡಿಯನ್ನು, ತುಟಿಗಳ ಹಿಂದಕ್ಕೆ ಮಡಚಿದ ಸಂದಿನಲ್ಲಿಟ್ಟು ಬಿಮ್ಮಗೆ ಹಿಡಿದ. ವಾಮನನೂ ಹಾಗೆಯೇ ಕಚ್ಚಿಕೊಂಡ. ಇಬ್ಬರಿಗೂ ಬೀಡಿಗೆ ಬೆಂಕಿ ಹಚ್ಚುವ ಕಲೆ ಅಲ್ಲ ಚಾಲಾಕು ಗೊತ್ತಿಲ್ಲ. ತಿಮ್ಮಣ್ಣನಂತೂ ತೀರ ಹೊಸಬ. ಕಡೆಗೆ ಹತ್ತಾರು ಬೆಂಕಿಕಡ್ಡಿ ಗೀರಿದ ಮೇಲೆ ಇಬ್ಬರ ಬೀಡಿಯಿಂದಲೂ ಹೊಗೆ ಹೊರಡತೊಡಗಿತು. ಹುಡುಗರು ಗಂಟಲು ಖಾರವಾಗಿ ಕೆಮ್ಮಿದರು. ಆದರೂ ಬೀಡಿಯನ್ನು ಬಿಟ್ಟು ಹಾಕಲಿಲ್ಲ.........

ಅಕಸ್ಮಾತ್ತಾಗಿ ಸಿಡಿಲೆರಗಿ ತಿಮ್ಮಣ್ಣ—ವಾಮನರಿಬ್ಬರೂ ಬೆಚ್ಚಿಬೀಳುವಂತೆ, ಆ ಮರದಾಚೆ ಬೀದಿಯಲ್ಲಿ—"ಓ! ಜಲಜಮ್ಮೆರೆ, ಇಂದೇ ಮೂಳು ತೂಲೆ ಈರೆ ಮಗೆ ಬೇಡಿ ಪತ್ತುನಿ!" (ಓ ಜಲಜಮ್ಮನವರೆ! ಇಲ್ಲಿ ನೋಡಿ ನಿಮ್ಮ ಮಗ ಬೀಡಿ ಹಿಡಿಯುವುದು) ಎಂದ ಮಾತು ಕೇಳಿತು.

ನೋಡಿದರೆ ಶಾಲೆಯ ತೋಟಗಾರ ಬರ್ಮಪ್ಪ. ಅವನಾಚೆಗೆ ಸಮೀಪದಲ್ಲಿರುವ ಅಂಗಡಿಯ ಮುಂದೆ, ಸಾಮಾನಿನ ಬುಟ್ಟಿಯೊಂದಿಗೆ ನಿಂತಿದ್ದ ಜಲಜಮ್ಮನನ್ನು ನೋಡಿ ಅವನು ಹಾಗೆಂದನು.

ಜಲಜಮ್ಮನೂ ಆಶ್ಚರ್ಯದಿಂದ "ಓಳು?" (ಎಲ್ಲಿ?) ಎಂದು ಕೇಳುತ್ತಾ ಅಲ್ಲಿಗೇ ಬಂದಳು. ಅವಳು ಉಪ್ಪು—ಮೆಣಸು ಮೊದಲಾದ ಜೀನಸುಗಳನ್ನು ಕೊಂಡುಕೊಳ್ಳಲಿಕ್ಕಾಗಿಯೇ ಗುಡ್ಡೆಯಂಗಡಿಗೆ ಬಂದಿದ್ದಳೆಂದು ಆ ಬುಟ್ಟಿಯಲ್ಲಿರುವ ಸಾಮಾನುಗಳು ಹೇಳುತ್ತಿದ್ದುವು.

ತಿಮ್ಮಣ್ಣ ತುಂಬ ಹೆದರಿದನು. ವಾಮನನೂ ಸಪ್ಪಗೂಬೆಪ್ಪಗೂ ಆದನು. ಅಷ್ಟರೊಳಗೆ ಇಬ್ಬರೂ ಬೀಡಿಯನ್ನು ದೂರ ಬಿಸುಟಿದ್ದರು.

ವಾಮನ ಹುಶಾರು ಹುಡುಗನಲ್ಲವೆ? ಅವನು ಸುಮ್ಮನೆ ಕೂಡದೆ, ಎದ್ದು ಈಚೆಗೆ ಬರುತ್ತ, ಹಲ್ಲು ಕಿರಿದುಕೊಂಡು—ಪೊಕ್ಕಡೆ ದಾಯೆ ಅಂಚ

ಪಣ್ಸನಿ? ಎಂಕುಳು ಮೂಳು ಪೊಕ್ಕಡೆ ಕುದೊಂದೊ." (ಸುಮ್ಮನೆ ಯಾಕೆ ಹಾಗೆ ಹೇಳುವುದು? ನಾವಿಲ್ಲಿ ಸುಮ್ಮನೆ ಕೂತಿದ್ದೇವೆ) ಎಂದನು ಬರ್ಮಪ್ಪ ನನ್ನು ಕುರಿತು.

"ಸುಳ್ಳು ಪಣ್ಪನಂಬೆ!—(ಸುಳ್ಳು ಹೇಳುತ್ತಿಯೇನೊ?) ಎಂದು ಬರ್ಮಪ್ಪ, ಅವನ ಕೊಳಕು ಕಿಸೆಗೆ ಕೈಹಾಕಿ ಒಂದು ಬೀಡಿಯನ್ನೂ ಆ ಬೆಂಕಿಪೆಟ್ಟಿಗೆಯನ್ನೂ ಹೊರಗೆ ತೆಗೆದು—"ಬೊಕ್ಕ ಉಂದು ದಾನೆಂಬೇ ನಿನ್ನ ಕಿಸೆಟ್? ಕಳುವಾ! ಈ ಕೆಟ್ಟ್ ಪೋಪಿನತ್ತಂದೆ ಎಡ್ಡೆ ಜೋಕುಳೆಗ್ಲಾ ಕಲ್ಪಾವನಾ ನಿನ ಬುದ್ಧಿ?" (ಮತ್ತೆ ಇದೇನೋ ನಿನ್ನ ಕಿಸೆಯಲ್ಲಿ ಕಳ್ಳ, ನೀನು ಕೆಟ್ಟು ಹೋಗುವುದಲ್ಲದೆ ಈ ಒಳ್ಳೆಯ ಹುಡುಗರಿಗೂ ಕಲಿಸುವಿಯಾ ನಿನ್ನ ಬುದ್ಧಿ?) ಎಂದು ವಾಮನನ ದವಡೆಗೊಂದು, ಅಂಗೈಯಪ್ಪವನ್ನೇರಿಸಿ ಜಲ ಜಮ್ಮನನ್ನು ಕುರಿತು—"ಓ ಜಲಜಮ್ಮ ಮೊನ್ನೆ ಶಾಲೆಯಲ್ಲಿ ಈ ಪೋಕ್ರಿ ನಿಮ್ಮ ಹುಡುಗನಿಗೆ ಮೀನು ಕೂಡಾ ತಿನ್ನಿಸಿದ್ದಾನೆ. ಈ ದಿನ ಬೀಡಿ ಕಲಿಸಿಕೊಡು ತ್ತಿದ್ದಾನೆ. ಫಟಿಂಗ!" ಎಂದು ವಾಮನನ ಕೆಪ್ಪೆಗೆ ಇನ್ನೊಂದು ಅಪ್ಪಕೊಡಲಿ ಕ್ಕಾಗಿ ಕೈ *ಬೇರಿದಾಗ, ವಾಮನ ಕೈ ತಪ್ಪಿಸಿಕೊಂಡು ದೂರ ಓಡಿದನು.

ಬರ್ಮಪ್ಪ ಅವನನ್ನು ನೋಡಿ-"ನಾಳೆ ಶಾಲೆಗೆ ಬಾ. ಮಾಸ್ತರ ಹತ್ತಿರ ಹೇಳಿ ನಿನಗೆ ಸನೂ ಮದ್ದು ಮಾಡಿಸುತ್ತೇನೆ." ಎಂದು ಗುಡುಗಿದನು.

ಇದೆಲ್ಲ ನೋಡಿದ ಜಲಜಮ್ಮ—"ಹೌದೇನೋ ತಿಮ್ಮ!" ಎಂದಳು. ಅವಳ ಕಣ್ಣು ತಿಮ್ಮನನ್ನು ದುರದುರನೆ ನೋಡುತ್ತಿತ್ತು.

ತಿಮ್ಮಣ್ಣ ಅಳುಗೊರಳಿನಿಂದ—"ಇಲ್ಲಮ್ಮ! ಮೀನು ಗೀನು ಮುಟ್ಟೇ ಇಲ್ಲ ನಾನು. ಇವ ಸುಳ್ಳು ಹೇಳ್ತಾನೆ!"

"ಮೊನ್ನೆ ಚೀಂಪಿ ಚೀಂಪಿ ತಿಂದಿರಲ್ಲ ಬಟ್ರೀ ಉಪ್ಪು ಮೀನು?" ಎಂದು ಬರ್ಮಪ್ಪ ವ್ಯಂಗ್ಯವಾಗಿ ಹೇಳಿ ನಗಲಾರಂಭಿಸಿದ.

"ಇಲ್ಲಮ್ಮಾ!—ಅಸಹಾಯನಾದ ತಿಮ್ಮನ ಕಣ್ಣುಗಳಿಂದ ದರದರನೆ ನೀರಿಳಿಯಿತು. ಈ ಸಂದರ್ಭದಲ್ಲಿ ಸಾಕ್ಷಿ ಹೇಳುತ್ತೇನೆಂದ ಆ ವಾಮನ ಮರಕಾಲ ಎಲ್ಲಿ?......

ಜಲಜಮ್ಮ ಚಿಂತೆಯಿಂದಲೂ ಸಂತಾಪದಿಂದಲೂ—"ಎಲೋ ನನ್ನ ಪುಣ್ಯ ಬರ್ಮಪ್ಪಾ! ಯಾರಿಗೂ ಹೇಳ್ಬೇಡಪ್ಪ ಈ ಕರ್ಮ! ಜಾತಿ

---

* ಬೇರಿ = ಹೊಡೆಯಲಿಕ್ಕಾಗಿ ಕೈಯೆತ್ತು.

ಹೋದೀತೋ ನಮ್ಮ ಜಾತಿ!......" ಎಂದು ಚಡಪಡಿಸಿದಾಗ ಬರ್ಮಪ್ಪ ನೆಂದ—"ಇಲ್ಲಮ್ಮ! ಇವರು ಬೀಡಿ ಗೀಡಿ ತಿಂದಿಲ್ಲ. ನಾನು ಸುಮ್ಮನೆ ತಮಾಷೆಗಂದೆ. ಆ ಪೋಕ್ರಿ ಬೀಡಿ ತಿನ್ನುತ್ತಾ ಇರುವಾಗ ನಿಮ್ಮ ಮಗ ಅವನ ಹತ್ತಿರ ಕೂತುಕೊಂಡಿದ್ದರು, ಅಷ್ಟೇ ಅಮ್ಮ!"

ಜಲಜಮ್ಮನಿಗೆ ಪಾರಾದಂತಾಯಿತು. ತಿಮ್ಮನಿಗೂ ಸಹ. ಅವಳು ದೂರ ನಿಂತಿದ್ದ ವಾಮನನನ್ನು ನೋಡಿ ಸಿಟ್ಟಿನಿಂದ—"ಎಲೊ ಪೋಕ್ರೀ! ಇನ್ನು ಮಾತ್ರ ಬಾ ನಮ್ಮ ಮನೆಗೆ! ನಿನಗೆ ಹಿಡಿಸೂಡೀಲಿ ಹಾಕ್ತೇನೆ ಅನ್ನ! ಪಾಳು ಬುದ್ಧಿಯವನೆ!" ಎಂದು ಕೂಗಿ ಹೇಳಿದಳು. ಬಳಿಕ ತಿಮ್ಮನ ತಲೆಯ ಬದಿಗೊಂದು ಹೊಡೆದು—"ಭಾರೀ ಒಳ್ಳೇ ಹುಡುಗಾಂತ ಹೊಗಳಿ ದಿಯಲ್ಲ ಅವನ್ನ? ಇದೇಯಾ ಅವನ ಒಳ್ಳೆ ಬುದ್ಧಿ? ಶಾಲೆಗಂತ ಹೊರ ಟು ಇಲ್ಲಿಗೆ ಬಂದು ಬೀಡಿ ಸೇದ್ತೀಯಾ ಅವನೊಟ್ಟಿಗೆ? ಕಳ್ಳ! ಬಾರಾ ಮನೆಗೆ! ಈವೊತ್ತು ನಿನ್ನ ಬೆನ್ನ ಚರ್ಮ ಸುಲೀದಿದ್ರೆ ನಾನ್ಯಾಕೆ?" ಎಂದು ಬೈದಳು.

"ಹೊಡೀಬೇಡಿರಮ್ಮ. ಏನೋ ತಿಳಿಯದೆ ಮಾಡಿದ್ದು. ಇನ್ನು ಮೇಲೆ ಆ ಹುಡುಗನ ಸಾವಾಸ ಮಾಡಬೇಡಂತ ಬುದ್ಧಿ ಹೇಳಿ" ಎಂದು ಬರ್ಮಪ್ಪ ಸಮಾಧಾನ ಹೇಳಿ ಅತ್ತ ಹೊರಟ.

ಜಲಜಮ್ಮ ಸಾಮಾನಿನ ಕುಕ್ಕೆಯನ್ನು ಹೇರಿಕೊಂಡು, ತಿಮ್ಮನನ್ನು ಕರೆದುಕೊಂಡು ಮನೆಗೆ ಹೊರಟಳು. ಮನೆಗೆ ಹೋದ ಮೇಲೆ ತಾಯಿ ಕೊಡುವ ಪೆಟ್ಟಿನಖಾರ ತಿಮ್ಮಣ್ಣನಿಗೆ ಗೊತ್ತೇ ಇದ್ದಿತು. ಅಲ್ಲದೆ ನಾಳೆ ಶಾಲೆಗೆ ಹೋದ ಮೇಲೆ ಏನೇನು ಖಾರ-ಕಠೋರತೆಗಳನ್ನು ಅನುಭವಿಸಲಿ ಕ್ಕಿದೆಯೋ ಎಂದು ಅವನು ಅಂಜಿಕೊಂಡೇ ಇದ್ದನು. ಇನ್ನು ಮೇಲೆ ಆ ವಾಮನ ಮರಕಾಲನೊಂದಿಗೆ ಸೇರಲಾರೆ, ಅವನ ಮುಖ ನೋಡಲಾರೆ, ಅವನು ಕರೆದರೂ ಮಾತಾಡಲಾರೆ ಎಂದು ಶಪಥಹಾಕಿಕೊಂಡನು.

ಆದರೆ ತಾಯಿಗೆ ಬರ್ಮಪ್ಪ ಹೇಳಿದ ಮಾತಿನಿಂದ ಅವಳ ಮಾತೃ ಪ್ರೇಮವು ತೊಳಸಿಕೊಂಡಿತು. ಅವಳು ವಾಡಿಕೆಯಂತೆ ತಿಮ್ಮಣ್ಣನ ಬೆನ್ನ ಮೇಲೆ ಹಿಡಿಗಡ್ಡಿಗಳ ಅಚ್ಚನ್ನೆಳೆಯದೆ, ಅವನನ್ನು ದೇವರ ಮುಂದೆ ಅಡ್ಡ ಬೀಳಿಸಿ ಕ್ಷಮೆಕೇಳಿಸಿದಳು. ಮರುದಿನ ತಿಮ್ಮನು ಭಯದಿಂದ ಶಾಲೆಗೆ ಹೋಗಲು ಮುರುಮುರುಮಾಡಿದಾಗ ತಾಯಿ ಜಬರಿಸಿದಳು. "ನಡೀ ಶಾಲೆಗೆ. ಅಲ್ಲಿಗೆ ಹೋಗಿ ನಿನ್ನೆ ಮಾಡಿದ ತಪ್ಪಿಗೆ ಮಾಸ್ತರ ಕೈಲಿ ಪೆಟ್ಟು

ತಿಂದರೇನೇ ನಿನಗೆ ಬುದ್ಧಿ ಬರ್ತದೆ! ನಾನು ಹೊಡೆದರೆ ನಾಟೀತಾ?' ಎಂದು ಬೈದು ಶಾಲೆಗೆ ಅಟ್ಟಿಯೇ ಅಟ್ಟಿದಳು.

ಶಾಲೆಯಲ್ಲಿ ನಿನ್ನೆ ಮಧ್ಯಾಹ್ನ ಶಾಲೆಗೆ ಬಾರದ ಹುಡುಗರನ್ನು ಉಪಾಧ್ಯಾಯರು ವಿಚಾರಿಸಿದರು. ಒಬ್ಬ "ನಾನು ಅಜ್ಜೀಮನೆಗೆ ಹೋಗಿದ್ದೆ ಸರ್" ಎಂದ. ಇನ್ನೊಬ್ಬ "ಹೊಟ್ಟೆನೋವು ಬಂತು" ಎಂದ. ಮತ್ತೊಬ್ಬ ಮತ್ತೊಂದು ನೆವನ ಹೇಳಿದ. ಕೆಲವರು "ಡೊಂಬರಾಟಕ್ಕೆ ಹೋದೆವು" ಎಂದು ತಲೆತಗ್ಗಿಸಿಕೊಂಡು ಸತ್ಯವನ್ನೇ ಹೇಳಿದರು. ತಿಮ್ಮಣ್ಣನು "ನನ್ನನ್ನು ವಾಮನ ಮರಕಾಲ ಒತ್ತಾಯ ಮಾಡಿ ಕರೆದುಕೊಂಡು ಹೋದದ್ದು ಸರ್" ಎಂದು ಅರ್ಧ ಅಪರಾಧ ಅವನ ಮೇಲೆ ಹಾಕಲಿ ಎಂಬ ಧೋರಣೆಯಿಂದ ಸತ್ಯವೇ ಹೇಳಿದನು. ಆ ಬರ್ಮಪ್ಪ ತಾನು ಬೀಡೀ ಸೇದಿದುದನ್ನು ಎಲ್ಲಿ ಈ ಮಾಸ್ತರಿಗೆ ತಿಳಿಸಿರುತ್ತಾನೋ ಎಂದು ಒಳಗೊಳಗೆ ಅದು ಬೇರೆ ಹೆದರಿಕೆ ಇದ್ದೇ ಇತ್ತು. ಅವನ ಪುಣ್ಯಕ್ಕೆ ಅಂತಹ ಅಪಾಯವಾವುದೂ ಬರಲಿಲ್ಲ. ಕಳ್ಳ ವಾಮನ ಹೆದರಿಯೋ ಏನೋ–ಆ ದಿನ ಶಾಲೆಗೇ ಬರಲಿಲ್ಲ. ಅನಂತರ ಎಂದಿಗೂ ಬರಲೇ ಇಲ್ಲ.

ಮಾಸ್ತರು ಸುಳ್ಳು ಹೇಳಿದವರಿಗೆ ಎರಡೆರಡು ಛಡಿಗಳನ್ನು ಕಾಯಿಸಿ, "ಡೊಂಬರಾಟಕ್ಕೆ ಹೋದುದೇ ಸತ್ಯ" ಎಂದು ಅವರ ಬಾಯಿಯಿಂದ ಹೊರಡಿಸಿದರು. ನಿನ್ನೆ ಶಾಲೆಗೆ ಬಾರದ ಹುಡುಗರೆಲ್ಲ ಬೆಂಚಿಯ ಮೇಲೆ ನಿಲ್ಲಬೇಕಾಯಿತು.

ಜಲಜಮ್ಮ ಇದನ್ನು ಕೇಳಿ, "ಮಾಸ್ತರು ಹೆಚ್ಚಿಗೆ ಶಿಕ್ಷೆ ಕೊಡಲೇ ಇಲ್ಲವೆ? ನಾಡದು ನಿನ್ನ ತಂದೆ ಬರ್ತಾರಂತೆ. ಕಾಗದ ಬಂದದೆ ಅವರ ಹತ್ತಿರ ನೀನು ಮಾಡಿದ್ದೆಲ್ಲ ಹೇಳಿ, ನಿನಗೆ ತಕ್ಕ ಶಿಕ್ಷೆ ಕೊಡಿಸುತ್ತೇನೆ......" ಎಂದು ಹೆದರಿಸಿಬಿಟ್ಟಳು.

## ೧೧

ತಂದೆಯ ಹೆಸರು ಹೇಳಿ ತಾಯಿ ಹೆದರಿಸಿದರೂ ತಿಮ್ಮನಿಗೆ ತಂದೆಯದೇನೂ ಹೆದರಿಕೆಯಿರಲಿಲ್ಲ. ತಂದೆಗಿಂತ ತಾಯಿಯದೇ ಭಯವಾಗಿತ್ತು. ಒಂಭತ್ತು ತಿಂಗಳು ಹೊತ್ತು ಹೆತ್ತು ಹಾಲೂಡಿ ಜೋಪಾಡಿ ಕಾಪಾಡಿದ ತಾಯಿಗಿಂತಲೂ ತಂದೆಗೇ ತನ್ನ ಮೇಲೆ ಪ್ರೀತಿ ಹೆಚ್ಚಾದುದೆಂದು ತಿಮ್ಮಣ್ಣನ ಭಾವನೆ. ಕಾರಣವೇನೆಂದರೆ ಚಿಕ್ಕಂದಿನಲ್ಲಿ ಪೆಟ್ಟುಗಳೇ ಪ್ರೀತಿಯನ್ನು

ತೂಕಮಾಡುವ ತಕ್ಕಡಿ ಎಂದು ಮಕ್ಕಳ ತಿಳುವಳಿಕೆಯಾಗಿರಬೇಕು. ಯಾರು ಹೆಚ್ಚಿಗೆ ಪೆಟ್ಟು ಕೊಡುತ್ತಾರೋ ಅವರಿಗೆ ತನ್ನ ಮೇಲೆ ಪ್ರೀತಿಯಿಲ್ಲ ವೆಂದು ಮಕ್ಕಳು ನಂಬುವರು. ಅಂತಹರನ್ನು ಹುಡುಗರು ಪ್ರೀತಿಯಿಲ್ಲದ ವರು ಎನ್ನುವುದಿಲ್ಲ; "ಕೆಟ್ಟವರು" ಎನ್ನುತ್ತಾರೆ. ಆ ಪ್ರಕಾರ ತಿಮಣ್ಣನಿಗೆ ಹೆಚ್ಚಾಗಿ ಪೆಟ್ಟು ಕೊಟ್ಟವಳು ತಾಯಿ ಜಲಜಮ್ಮ. ಅಂತೆಯೇ ಅವಳು "ಕೆಟ್ಟವಳು" ಅವಳ ಬಳಿಯಲ್ಲಿ ಸಲಿಗೆಯೂ ಹೆಚ್ಚು, ಶುಂಠತನವೂ ಹೆಚ್ಚು.

ತಂದೆಯಾದರೋ ತಿಮ್ಮನಿಗೆ ತುಂಬ ಒಳ್ಳೆಯವರು; ಅವನಿಗೆ ಪೆಟ್ಟೇ ಕೊಟ್ಟವರಲ್ಲ. ಕೊಟ್ಟವರೇ ಅಲ್ಲವೆನ್ನುವಾಗ ಅವರು ಕೊಟ್ಟ ಎರಡೂವರೆ ಪೆಟ್ಟು-ಅವರ ಇಡೀ ಜೀವಮಾನದಲ್ಲಿ ಅವನಿಗೆ ಕೊಟ್ಟ ಎರಡೂವರೆ ಪೆಟ್ಟು ಮಾತ್ರ, ಲೆಕ್ಕಮಾಡಿ ನೆನಪಿಟ್ಟುಕೊಳ್ಳುವ ಹಾಗೆ ಜ್ಞಾಪಕಕ್ಕೆ ಬರುತ್ತದೆ. ಮತ್ತಾವಾಗಲೂ ಹಿರೇ ಮಗ ತಿಮ್ಮನ ಮೇಲೆ ತಂದೆಗೆ ಅಷ್ಟು ಪ್ರೀತಿ, ಅಷ್ಟು ಕೊಂಡಾಟ! "ತಿಮ್ಮೊ ತಿಮ್ಮೊ" ಎಂದು ರಾಗದಿಂದ ಕರೆಯುವರು. ಸಣ್ಣವ ನಾಗಿದ್ದಾಗ ಅವನನ್ನು ಅವರು ತಮ್ಮ ಪಕ್ಕದಲ್ಲೇ ಮಲಗಿಸಿಕೊಳ್ಳುವರು. ಉಷಃಕಾಲದಲ್ಲೇ ಎಬ್ಬಿಸಿ ಉದಯರಾಗವನ್ನು ಹೇಳಿಕೊಡುವರು.

"ಉದಯ ಕಾಲದೊ—ಳೆದ್ದು ಗೋಪಿಯು
ದಧಿಯ ಮಥಿಸುವೆ—ನೆಂಬ ಸಮಯದಿ
ಯದುವರೇಣ್ಯನು—ಎದ್ದು ತೊಟ್ಟಿಲೊಳ್
ತೊದಲನುಡಿಯಲಿ—ತಾಯ ಕರೆದನು ॥"

ಎಂಬ ದಾಸರ ರಾಗವೇ ತಿಮ್ಮನು ಮೊತ್ತಮೊದಲು ಕಲಿತ ಹಾಡು. ಆ ಸಮಯದಲ್ಲಿ ಜಲಜಮ್ಮ ಅಡುಗೆ ಮನೆಯ ಒಲೆಯಲ್ಲಿ ಗಂಜಿಗೆ ಬೆಂಕಿ ಹೊತ್ತಿಸಿರುವಳು. ಹಾಗು ಅಲ್ಲಿಯೇ ಒಲೆಯ ಮುಂದೆ ಕಾಲ್ಮಣೆಯ ಮೇಲೆ ಕುಳಿತುಕೊಂಡು ಮೊಸರು ಕಡೆಯುತ್ತಿರುವಳು. ಒಲೆಯ ದಂಡೆಯ ಮೇಲೆ ಚಿಮಿಣಿ ದೀಪವು, ಕೋಲುದೀವಿಗೆಯನ್ನು ಆಡಿಸುತ್ತಾ ಇರುವುದು. ಆಗ ಆ ತಾಯಿಯ ನೆರಳು ಗೋಡೆಯ ಮೇಲೆ ಬಿದ್ದಿರುವುದು, ಅರೆಯಿಕ್ಕಿದ ಬಾಗಿಲ ಸಂದಿನಿಂದ ಚಾವಡಿಯಲ್ಲಿರುವ ತಂದೆಗೂ ಮಗನಿಗೂ ಕಾಣಿಸು ತ್ತದೆ. ಮೊಸರು ಕಡೆಯುವ "ಸೊರ್ರೊಂ ಭೊರ್ರೊಂ" ಶಬ್ದವು ಶುಭಕರ ವಾದೊಂದು ಶ್ರುತಿಯಂತಿರಲು, ತಾಯಿ ತನ್ನ ಇನಿದಾದ ಸಪೂರ ಸ್ವರದಿಂದ ಉದಯರಾಗವನ್ನು ಹಾಡುತ್ತಿರುವಳು. ಒಮ್ಮೊಮ್ಮೆ ಅದೇ ಉದಯರಾಗ ವನ್ನೆ ತಂದೆಯೂ ಮಗನೂ ಹೇಳುತ್ತಿರುವರು. ಆ ಮೇಲೆ ಜಲಜಮ್ಮನ

ಮೊಸರು ಕಡೆಯುವುದನ್ನು ನಿಲ್ಲಿಸಿ, ದೇವರ ಕೋಣೆಯಲ್ಲಿ ದೀವಿಗೆಯನ್ನು ಬೆಳಗಿಸಿಟ್ಟು, ಐದು ಬಾರಿ ಶಂಖವನ್ನು ಊದುತ್ತಾಳೆ. ಆಗ 'ಮೊಸರು ಕಡೆದಾಯಿತು, ಬೆಣ್ಣೆ ಬಂತು,' ಎಂದು ತಿಮ್ಮನಿಗೆ ತಿಳಿದುಹೋಗುತ್ತದೆ. ಆಗಲೇ ತಂದೆಯು "ತಿಮ್ಮು, ಒಳಗೆ ಹೋಗಿ ಬೆಣ್ಣೆ ತಿಂದು ಬಾ" ಎಂದು ಅವನ ಬೆನ್ನು ತಟ್ಟಿ ಕಳುಹಿಸುತ್ತಾರೆ. ತಿಮ್ಮನು ಹೊಸ್ತಿಲು ದಾಟಿ ತುರು ತುರು ಒಳಗೆ ಓಡಿ, ಮೊಸರಕುಡಿಕೆಯ ಬದಿಯನ್ನೂ, ಕಡಗೋಲನ್ನೂ ಬೆರಳಿನಿಂದ ಒರೆಸಿಕೊಂಡು, ಬೆಣ್ಣೆಯನ್ನು ಒಟ್ಟುಗೂಡಿಸುತ್ತಾ ಇರುವ ತಾಯಿಯ ತೊಡೆಯ ಮೇಲೆ, ತನ್ನ ಸ್ವಂತ ಪೀಠವೇ ಎಂಬಂತೆ ಕುಳಿತಂತೆ ಕಾಣುವಂತೆ ನಿಂತುಕೊಂಡು, "ಅಮ್ಮ ಬೆಣ್ಣೆ" ಎಂದು ಕೈಯನ್ನು ಮುಂದೆ ನೀಡುವ ಆ ಚಿತ್ರವು ನೆರಳಾಗಿ ಗೋಡೆಯ ಮೇಲೆ ಮೂಡುವುದು, ಹೊರಗೆ ಪದ್ಮನಾಭೈಯನಿಗೆ ಕಾಣಿಸುತ್ತದೆ. ತಾಯಿ ಎಂದಿನಂತೆ ಒಂದು ಹದಾ ನಿಂಬೇಗಾತ್ರದ ಬೆಣ್ಣೆಯ ಮುದ್ದೆಯನ್ನು ಆ ಸಣ್ಣ ಅಂಗೈಯಲ್ಲಿ ಇಡುತ್ತಾಳೆ. ತಿಮ್ಮ ಅದನ್ನು ತಿಂದು "ಇನ್ನೂ ಸ್ವಲ್ಪ" ಎಂದು ಮತ್ತೂ ಕೇಳದಿರುವುದೇ ಇಲ್ಲ. "ಹೊಟ್ಟೆಗೆ ಆಗಲಿಕ್ಕಿಲ್ಲಪ್ಪ ನಡೀ" ಎನ್ನುತ್ತಾಳೆ ತಾಯಿ. ಹೇಳಿದ ಕೂಡಲೇ ನಡೆಯದೆ ಹಾಗೆಯೇ ಕುಳಿತರೆ ಇನ್ನೂ ಸ್ವಲ್ಪ ಸಿಕ್ಕುತ್ತದೆಂದು ತಿಮ್ಮನಿಗೆ ಗೊತ್ತೇ ಇರುತ್ತದೆ. ಅಂತೆಯೆ ಅವಳ 'ನಡಿ' ಎಂಬ ಮಾತಿಗೆ ಉತ್ತರವಾಗಿ, ತನ್ನ ಬಾಯಿಯನ್ನೇ ತೆರೆದು *ಕುತ್ತಟ್ಟವನ್ನು ನೋಡುತ್ತಾನೆ. ಹಾಗೆ ಬಾಯಿತೆರೆದ ಮಗನನ್ನು ನೋಡಿ ಸುಮ್ಮನಿರಲು ಯಾವ ತಾಯಿಯ ಹೃದಯವು ಕೇಳೀತು? ಅವಳು ಮತ್ತೊಂದು ಗೋಲೀ ಗಾತ್ರದಷ್ಟು ಬೆಣ್ಣೆಯನ್ನು ಕುಸುರಿಯಾಗಿ ಅವನ ಬಾಯಿಯೊಳಗೆ ಹಾಕಿ, "ಇನ್ನು ನಡೀ" ಎಂದು ಅಟ್ಟಿಬಿಡುತ್ತಾಳೆ.

ತಿಮ್ಮ ಹೊರಗೆ ಬಂದು ಅಪ್ಪನ ತೊಡೆಯ ಮೇಲೇರಿ ಕುಳಿತುಕೊಳ್ಳುತ್ತಲೇ, ಅಪ್ಪ ಅವನ ಬೆಣ್ಣೇ ಮುದ್ದಿಗಾಗಿ ತಮ್ಮ ಮುಳ್ಳು ದವಡೆಯನ್ನು ತೋರಿಸುತ್ತಾರೆ. ತಿಮ್ಮ ತಂದೆಯ ಆ ದವಡೆ ಈ ದವಡೆ ಎರಡಕ್ಕೂ ಒಂದೊಂದು ಬೆಣ್ಣೇ ಮುದ್ದನ್ನು ಒತ್ತಿದ ಕೂಡಲೇ ಅವರು "ಅಹ್ಹಹ್ಹ" ಎಂದು ನಗುತ್ತ, ತಮ್ಮ ಖಾಲೀ ಬಾಯಿಯ ಸಪ್ಪೆ ಮುತ್ತನ್ನು ತಿಮ್ಮನ ಎರಡು ದವಡೆಗಳಲ್ಲಿಯೂ ಒತ್ತಿ, ಅವನ ಹೊಟ್ಟೆಗೂ ಒಂದು ಮುತ್ತನ್ನು ಕೊಡುತ್ತಾರೆ. ಹೊಟ್ಟೆಗೆ ಮುತ್ತು ಬಿದ್ದ ಕೂಡಲೇ ತಿಮ್ಮನಿಗೆ ದೊಡ್ಡ ದೊಡ್ಡ

* ಕುತ್ತಟ್ಟ= ಅಡುಗೆ ಮನೆಯ ಮೇಲಿನ ಅಟ್ಟ.

ನಗು ಹಾರಿ ಹಾರಿ ಬರುತ್ತದೆ. ಆ ನಗುವಿನೊಂದಿಗೆ ತಂದೆಯ ನಗುವೂ ಬೆರೆಯುತ್ತದೆ. ಹೀಗೆ ನಗು ನಿಂತ ಮೇಲೆ ತಿಮ್ಮ—"ಅಪ್ಪಾ, ಅಮ್ಮ ಬೆಣ್ಣೆ ಇಷ್ಟೇ ಕೊಟ್ಟದ್ದು" ಎಂದು ಚಿಕ್ಕ ಮುಖ ಮಾಡುವನು. "ಆಂ? ಹೌದೊ? ಎಲ್ಲಿ ನೋಡುತ್ತೇನೆ ಎಷ್ಟು ಕೊಟ್ಟಿದ್ದಾಳಂತ?" ಎಂದು ತಂದೆ ಕುಮಾರನನ್ನು ತನ್ನ ಸಟ್ಟೆಐರಿನಲ್ಲಿ ಎತ್ತಿ ಸಿಲ್ಲಿಸಿಕೊಂಡು ಅವನ ಹೊಟ್ಟೆಯನ್ನು ತಟ್ಟಿಯೂ ಸೆಡಿದೂ, ಪಕ್ಕೆಗಳನ್ನು ಕೊಂಚ ಅಮುಕಿ ಕಿಚಗುಳಿ ಮಾಡಿ ನಗಿಸಿಯೂ, "ಓಹೋ! ತುಂಬ ಕಡಿಮೆಯೇ ಕೊಟ್ಟಿದ್ದಾಳೆ ನಮ್ಮ ತಿಮ್ಮಗೆ" ಎಂದು ಒಳಕ್ಕೆ ಕೇಳಿಸುವಂತೆ ಗಟ್ಟಿಯಾಗಿ "ಇಕೊಳೇ! ನಾಳೆ ತಿಮ್ಮೂಗೆ ಇನತ್ತು ಕೊಟ್ಟಷ್ಟೇ ಬೆಣ್ಣೆ ಕೊಡಬೇಕು ತುಂಬ! ಕೇಳಿತೆನೇ?" ಎಂದು ಕನ್ನಡ ದಲ್ಲೇ ಹೇಳುವರು. ಅವರು ಜಲಜಮ್ಮನೊಡನೆ ಹೆಚ್ಚಾಗಿ ತುಳುವಿನಲ್ಲೇ ಮಾತಾಡುವುದು ವಾಡಿಕೆ. ಆದುದರಿಂದ ಕನ್ನಡದಲ್ಲಿ ತಾಯಿಯೊಡನೆ ಮಾತಾಡಿದುದನ್ನು ಕೇಳಿದರೆ ತಿಮ್ಮನಿಗೊಂದು ವಿಶೇಷದ ಹಾಗೆ. ನಾಳೆ ಹೆಚ್ಚು ಬೆಣ್ಣೆ ಸಿಕ್ಕುತ್ತದೆಂದು ಆನಂದ.



ಆ ಮೇಲೆ ಬೆಳಗಾಗುವುದಕ್ಕೇನೂ ಹೆಚ್ಚಿಗೆ ಹೊತ್ತಿಲ್ಲ. ತಿಮ್ಮನು ತಂದೆಯ ಹಾಸುಗೆಯಲ್ಲಿ ಅವರೊಂದಿಗೆ ಕುಸ್ತಿ ಮಾಡುತ್ತ ಅವರ ಕಾಲ ಮೇಲೆ ಏರಿ, "ಚಾಂಚೂಲ್ ಧಸಲ್" ಎಂದು ನೀರು ಮೊಗೆಯುವಾಟ ವಾಡುತ್ತ "ಕತೆ ಹೇಳಿ, ಕತೆ ಹೇಳಿ" ಎಂದು ಕಾಡಿಸಿ ಪೀಡಿಸಿ ಕತೆ ಹೇಳಿಸಿ ಕೊಳ್ಳುತ್ತ ಕಾಲ ಕಳೆಯುತ್ತಿರಲು, ಬೆಳಗಾಗಿ ಹೋಗುತ್ತದೆ. ಆಗ ತಾಯಿ ಯು ಸೆಗಣಿ ಹಚ್ಚಿ, ದನಕ್ಕೆ ಕಲಗಚ್ಚು ಇಟ್ಟು, ಹುಲ್ಲುಹಾಕಿ, ತಂಬಿಗೆ ಕವುಳಿಗೆಗನ್ನು ಬೆಳಗಿಸಿಕೊಂಡು, ಕರೆಯುವ ಬಿಂದಿಗೆಗೊಂದಿಷ್ಟು ತುಪ್ಪವನ್ನೊ ಬೆಣ್ಣೆಯನ್ನೊ ಹಚ್ಚಿಕೊಂಡು, ಗೋಮಾತೆಯನ್ನು ಕರೆಯುವದಕ್ಕಾಗಿ ಹಟ್ಟಿ ಯೊಳಗೆ ಹೋಗುತ್ತಾಳೆ. ಆ ಸಮಯದಲ್ಲಿ ತಿಮ್ಮನಿಗೆ ಹಲ್ಲುಜ್ಜಿಸುವುದು, ಮುಖ ತೊಳೆಸುವುದು, ಎಲ್ಲಾ ತಂದೆಯೇ.

ಬೆಳಗ್ಗೆ ಎದ್ದು ಹಾಸಿಗೆ ಮಡಚಿಟ್ಟು ಹೊರ ಜಗಲಿಯಲ್ಲಿ ಕುಳಿತ ಕೂಡಲೇ ಪದ್ಮನಾಭಯ್ಯ ವೀಳ್ಯ ಹಾಕಿಕೊಳ್ಳುವ ಕ್ರಮವುಂಟು. ಆಗ ಅವರು ತಿಮ್ಮನನ್ನು ನೋಡಿ, "ಬಾರಾ ತಿಮ್ಮೂ! ನಾನೂ ನೀನೂ ಎಲೆ ತಿಂಬ ಬಾಬ್ಬಾಬ್ಬಾ" ಎಂದು ಒಂದು ಬಗೆಯ ರಾಗದಿಂದ ಹೇಳುತ್ತಾ, ಚಕ್ಕಂದದಿಂದ ನೋಡುವರು. ಒಡನೆಯೇ ನಾಯಿಯನ್ನು ಓಡಿಸಿಕೊಂಡು, ಆಡುತ್ತಿದ್ದ ತಿಮ್ಮ ಓಡಿಬಂದು, ಗುಡುಗುಡನೆ ದಳಿಗಳ ಮೇಲೇರಿ, ಮಾಡಿನ

ಬದಿಯಲ್ಲಿರುವ ಎಲೆದಟ್ಟೆಯನ್ನು ತೆಗೆದು ತಂದೆಯ ಮುಂದಿಟ್ಟು ಅವರ ತೊಡೆಯ ಮೇಲೇರಿ ಕುಳಿತುಕೊಳ್ಳುತ್ತಾನೆ. ಅವರು ಅಡಿಕೆಲೆ ತಟ್ಟೆಯಿಂದ ಎಲೆಯನ್ನು ತೆಗೆಯುವಾಗ, ಅದನ್ನು ತೊಡೆಗೆ ಒರಸಿಕೊಳ್ಳುವಾಗ, ಅದಕ್ಕೆ ಸುಣ್ಣ ಹಚ್ಚುವಾಗ, ಸುರುಳಿ ಮಾಡುವಾಗ, ಬಾಯಿಗೆ ಹಾಕುವಾಗ ಒಂದು ಹಾಡು ಹೇಳಲಿಕ್ಕುಂಟು. ಇದು ಪದ್ಮನಾಭಯ್ಯನೇ ಕಟ್ಟಿದ ಪದ. ಇದನ್ನು ತಿಮ್ಮನೂ ಹೇಳುವನು.

"ನಾನೂ ನೀನೂ ಎಲೇ ತಿಂಬ
ಅಮ್ಮನಿಗಿಲ್ಲಾ-ಮಣ್ಣು !
ಎಲೇ ಎತ್ತಿ ತೊಡೆಗೆ ತಿಕ್ಕಿ
ಸುಣ್ಣಾ ಹೀಗೆ ಹಚ್ಚಿ,
ಸುರುಳೀಮಾಡಿ ಸುತ್ತಿ,
ಅಪ್ಪನ ಬಾಯಿಗೆ ಎತ್ತಿ,
ಹಲ್ಲಿನಾಚೆಗೆ ಒತ್ತಿ,
ಅಡಿಕೆ ಹೋಳು ಬಿಸುಡುವಾ!"

ಎಂಬುದು ಹಾಡು. ಹಾಡಿಗೆ ಸರಿಯಾಗಿ ವೀಳ್ಯದ ಮಡಿಕೆಯನ್ನು ತಂದೆಯ ಬಾಯಿಯೊಳಗೆ ಹಲ್ಲುಗಳ ಎಡೆಯಿಂದ ತೂರಿಸಿ, ಅಡಿಕೆಯ ಹೋಳುಗಳನ್ನು ಎಸೆದು ಮುಗಿಸುವುದೆಲ್ಲಾ ತಿಮ್ಮನೇ. ಆ ಮೇಲೆ ತಂದೆ ಅತ್ಯಾನಂದದಿಂದ, ಎರಡು ಕೈಗಳಿಂದಲೂ ತಿಮ್ಮನನ್ನು ಬಾಚಿ ಎತ್ತಿ, ಅವನ ಮೈತುಂಬ ಮೊಗದುಂಬ ಮುದ್ದುಗಳನ್ನು ಒತ್ತುವರು.

ಹೀಗೆ ತಿಮ್ಮಣ್ಣನ ಅಚ್ಚು ಮೆಚ್ಚಿನ ತಂದೆ ಎಲ್ಲಿಗಾದರೂ ಹೊರಟರೆಂದರೆ, ತಿಮ್ಮ "ನಾನೂ ಬರುತ್ತೇನೆ" ಎಂದು ಎದ್ದು ನಿಲ್ಲುವನು. ಅವರಿಗೂ ಅವನು ಹಾಗೆ ಹೇಳುವುದೇ ಬೇಕಾಗಿತ್ತು. ಅವನನ್ನು ಎತ್ತಿಕೊಂಡು ಹೋಗುವುದೆಂದರೆ ಪದ್ಮನಾಭಯ್ಯನಿಗೆ ಪರಮೋತ್ಸಾಹ. ಎಷ್ಟು ದೂರವೇ ಇರಲಿ, ಸ್ವಲ್ಪ ದೂರ ತಿಮ್ಮನನ್ನು ನಡೆಯಿಸಿ, ಅನಂತರ ಅವನನ್ನು ಹೊತ್ತುಕೊಂಡೇ ನಡೆಯುವರು. ಹಾಗೊಮ್ಮೆ ಕೂಳೂರು ಹೊಳೆ ದಾಟಿ ಹತ್ತು ಮೈಲು ದೂರವಿರುವ ಮಂಗಳೂರಿನ ವರೆಗೆ ತಿಮ್ಮನ ಹೊರೆಯೊಂದಿಗೇ ಹೋಗಿ,—ಅಕೋ ಅದು ನೋಡು, ಅಕೋ ಇದು ನೋಡು" ಎಂದು ಉಲ್ಲಾಸದಿಂದ ನಗರ ದೃಶ್ಯವನ್ನು ಮಗನಿಗೆ ತೋರಿಸುತ್ತಾ, ಅನಂತರ ಕತ್ತಲಾಗುವಾಗ ಮನೆಗೆ ವಾಪಾಸು ಬಂದಿದ್ದಾರೆ. ತಂದೆಯೊಂದಿಗೆ ದಿನಾಲೂ

ಸಾಯಂಕಾಲ ಗುಡ್ಡೆಯಂಗಡಿಗೆ ಹೋದಾಗಲೆಲ್ಲಾ ಅಂಗಡಿ ಭಂಡಾರಿ ತಿಮ್ಮ ನಿಗೆ ಎರಡು ಬಾಳೆ ಹಣ್ಣುಗಳನ್ನು ಇನಾಮಾಗಿ ಕೊಡದಿರುವುದೇ ಇಲ್ಲ. ಆ ಭಂಡಾರಿ ಮಾಡಿಟ್ಟ ಅಭ್ಯಾಸದಿಂದಲೋ ಏನೋ, ತಿಮ್ಮನಿಗೆ ಈಗಲೂ ಬಾಳೆಯ ಹಣ್ಣೆಂದರೆ ಬಲು ಇಷ್ಟ. ಅಪ್ಪ ಹೊರಟರೆ ಅವರ ಹೆಗಲಮೇಲೆ ಮಗನೂ ತಯಾರು. ಬೀದಿಯಲ್ಲಿ ಆಗ ಅಪರೂಪವಾಗಿ ಓಡುತ್ತಿರುವ ಮೋಟಾರು ಬಸ್ಸು ಕಣ್ಣಿಗೆ ಬಿದ್ದ ಕೂಡಲೇ ತಂದೆ "ಸಲಾಂ ಮಾಡು" ಎನ್ನು ವರು. ಮಗನು ಕೂಡಲೇ ಬಸ್ಸಿಗೆ ಸಲಾಂ ಹೊಡೆಯುವನು.

೧೨

ಪದ್ಮನಾಭಯ್ಯನು ಒಳ್ಳೆಯ ಧೈರ್ಯಶಾಲಿ ಮನುಷ್ಯರು. ಆದರೆ ನೋಟಕ್ಕೆ ಧಾಂಡಿಗರ ಹಾಗೇನೂ ಕಾಣಿಸುವುದಿಲ್ಲ. 'ಸ್ಯಾಕಲ್ಲು' ಹಗುರ ವಾದರೂ ಗಟ್ಟಿಯಾಗಿರುವ ಹಾಗೆ, ಗಟ್ಟಿಮುಟ್ಟಾದ ಎಲುಬುಗಳ ಗಂಟು- ಕೀಲುಗಳಿಂದೊಪ್ಪುವ ತೆಳ್ಳಗಿನ ಮೈ. ಎಣ್ಣೆಗಪ್ಪಿಗೆ ಇನ್ನಷ್ಟು ಮಸಿ ಬೆರಸಿ ಪೂಸಿದ ಹಾಗಿನ ಮೈಬಣ್ಣ; ಬರೀ ಮಸಿಯಲ್ಲ, ಕಣ್ಣು ಸರ್ವದಾ ತುಸು ಕೆಂಪು. ಅಂದರೆ ಹೆಂಡಗಿಂಡ ಕುಡಿಯುವರೇನೋ ಎಂದು ತಿಳಿದು ಬಿಡ ಬೇಡಿ! ಆ ಕೆಂಪು ಕ್ರೌರ್ಯ ಸೂಚಕವೂ ಅಲ್ಲ; ಧೈರ್ಯ ಸೂಚಕ. ಸ್ವಾಭಾವಿಕವಾಗಿಯೇ ಕೆಂಗಣ್ಣು. ಕೋಪ ಬಂದರೆ ಮಾತ್ರ ಆ ಕಣ್ಣನ್ನು ನೋಡುವುದೇ ಕಷ್ಟವಾದೀತು! ಆದರೆ ಅವರಿಗೆ ಕೋಪವು ಬರುವುದೆಂದರೆ ಅಪರೂಪವೇ. ಹೆಚ್ಚಾಗಿ ಸುಹಾಸವದನರಾಗಿಯೇ ಇರುತ್ತಾರೆ. ಸಂಸಾರ ತಾಪತ್ರಯಗಳ ನಡುವಿನಲ್ಲಿ ಸವೆಯುವವರಾದರೂ, ಆ ಸುಹಾಸವು ಅವ ರನ್ನು ಬಿಟ್ಟುಹೋಗುವುದಿಲ್ಲ. ಈ ಸುಹಾಸವೇ ಅವರಿಗೆ ಧೈರ್ಯೋತ್ಪಾ ದಕವಾದ ಮದ್ದಾಗಿದ್ದಿತು. ಅವರ ಧೈರ್ಯವೆಂದರೆ, ಎಂತಹ ಕಗ್ಗತ್ತಲೆ ಯಲ್ಲಿಯೇ ಆಗಲಿ, ಸೂಟೆ—ದೀಪ ಯಾವುದೂ ಇಲ್ಲದೆ ಏಕಾಂಗಿಯಾಗಿ ಗುಡ್ಡೆಗಾಡಿನ ದಾರಿಯಲ್ಲಿ ಕೂಡಾ ನಡೆಯುತ್ತಿದ್ದರು. ಆ ಸಮಯದಲ್ಲಿ ಬಡಿಗೆಯೇ ಅವರ ದೀಪ. ಕಣ್ಣು ಕಾಣದ ಕತ್ತಲೆಯಲ್ಲಿ ಆ ಬಡಿಗೆಯನ್ನು ಕುರುಡನ ಹಾಗೆ ಕುಟ್ಟುತ್ತಾ 'ಕುಶಾಲಾಗಿ' ನಡೆಯುವರು. ಆ ಬಡಿಗೆಯ 'ಟಕ್ಕು ಟಕ್ಕೆ'ಂಬ ಕುಟ್ಟು ದನಿಗೆ, ದಾರಿಯಲ್ಲಿರುವ ಹಾವು ಹರಣೆಗಳು ಬದಿಗೆ ಸರಿದೋಡುವುವೆಂದು ಅವರ ನಂಬುಗೆ. ಹಾಗೂ ದಾರಿಯಲ್ಲಿರುವ

ಫಿರು ತಗ್ಗುಗಳೂ ಅವರಿಗೆ ತಿಳಿಯುತ್ತದೆ. ಅಂತೆಯೇ ಬಡಿಗೆಗೆ 'ಕುರುಡನ ದೀಪ' ಎಂದು ಅವರಿಟ್ಟ ಹೆಸರು.

ಒಮ್ಮೆ ಈ ಕುರುಡನ ದೀಪದ ಧೈರ್ಯದಿಂದ 'ಬಿಸುಗಲ್ಲಿ'ಗೆ ಹೋದವರು ಅಲ್ಲಿ ಪಂಚಾತಿಗೆ ಹೊಡೆಯುತ್ತಾ ಎಷ್ಟೋ ಹೊತ್ತು ಕುಳಿತುಬಿಟ್ಟರು. ರಾತ್ರಿಯಾಗಿ ಹೋಯಿತು. ಮನೆಗೆ ಹಿಂದಿರುಗಬೇಕಾದರೆ ದೊಡ್ಡದೊಂದು ಪೊದರುಗುಡ್ಡವನ್ನು ದಾಟಬೇಕಾಗಿತ್ತು. ಅಂದು ಅಮಾವಾಸ್ಯೆ. ಆಕಾಶದಲ್ಲಿ ಮೋಡ ಬೇರೆ ಮುಚ್ಚಿಗೆ ಹಾಕಿತ್ತು. ಇಂತಹ ಸಮಯದಲ್ಲಿ ಅವರು ಬಿಸುಗಲ್ಲಿನಿಂದ ಹಿಂದಿರುಗುವೆನೆನ್ನುವಾಗ "ಇಷ್ಟು ಕಗ್ಗತ್ತಲೆಯಲ್ಲಿ ಗುಡ್ಡ ದಾಟಿ ಹ್ಯಾಗೆ ಹೋಗುತ್ತೀರಿ? ಹುಡುಗ ಬೇರೆ ಇದ್ದಾನೆ; ಬೇಡ ಪದ್ಮನಾಭೈಯ್ಯ, ಈ ದಿನ ಇಲ್ಲೇ ಉಂಡು ಮಲಗಿ, ನಾಳೆ ಹೋಗಿ" ಎಂದರು ಬಿಸುಗಲ್ಲು ರಾಮಾಚಾರ್ರು. "ಇಲ್ಲ, ಹೋಗಿಯೇ ತೀರಬೇಕು; ಈ ಕುರುಡನ ದೀಪ ಉಂಟಲ್ಲಾ? ಏನೂ ಭಯವಿಲ್ಲ." ಎಂದು ಪದ್ಮನಾಭೈಯ್ಯ ಖಂಡಿತವಾಗಿ ಹೇಳಿ, ತಿಮ್ಮನನ್ನು ಹೆಗಲಮೇಲೆ ಕೂಡಿಸಿ, ಹೊರಟೇಬಿಟ್ಟರು. ರಾಮಾಚಾರ್ರು ಒತ್ತಾಯ ಮಾಡಿ ಅವರ ಕೈಯಲ್ಲೊಂದು ಸೂಟಿಯನ್ನು ಹಚ್ಚಿಕೊಡದೆ ಬಿಡಲಿಲ್ಲ. ಬಲಗೈಯಲ್ಲಿ ಸೂಟಿ, ಎಡಗೈಯಲ್ಲಿ ದಂಟೆ; ಹೆಗಲಲ್ಲಿ ಅವರ ತಲೆಯನ್ನು ಎರಡು ಕೈಗಳಿಂದಲೂ ಸುತ್ತಿ ಗಟ್ಟಿಯಾಗಿ ಹಿಡಿದುಕೊಂಡ ತಿಮ್ಮಣ್ಣ. ಹೀಗೆ ಗುಡ್ಡೆಯ ದಾರಿಯಲ್ಲಿ ಕ್ರಮಿಸುತ್ತಿರುವಾಗ, ಆ ಸೂಟಿಯಿಂದ ಉಪದ್ರವೇ ಆಯಿತಲ್ಲದೆ ಉಪಕಾರವಾಗಲಿಲ್ಲ. ಅದೇನೋ ಹಾಳೋ ಹಸಿಯೋ ಒದ್ದೆಯೋ, ಬೀಸಿದಾಗ ಭಗ್ಗನೆ ಉರಿದು ಕೂಡಲೇ ಆರಿ ಆರಿ ಹೋಗುತ್ತಿತ್ತು. ಕಗ್ಗತ್ತಲೆಗೂ ಸೂಟಿಯ ಬೆಳಕಿಗೂ ಜಗಳವಾಗುವ ಹಾಗೆ ತೋರಿತು. ಸೂಟಿ ಆರಿದ ಕೂಡಲೇ ಭಯಾನಕವಾಗಿ ಕಗ್ಗತ್ತಲೆ ಮುಂದೊತ್ತಿ ಬರುತ್ತಿತ್ತು. ಮುಂದೆ ನಡೆಯಬೇಕಾದರೆ ಕಣ್ಣೇ ಕಟ್ಟಿದ ಹಾಗಾಗುತ್ತಿತ್ತು. ನಿಮಿಷ ನಿಮಿಷಕ್ಕೂ ನಿಲ್ಲಲೇ ಬೇಕಾಗುತ್ತಿತ್ತು. ಅದರೊಂದಿಗೆ ಬಡಿಗೆಯ ಕೈಯನ್ನು ಉಪಯೋಗಿಸೋಣವೆಂದರೆ, ಆ ಕೈ ತಿಮ್ಮಣ್ಣನನ್ನು ಆದರಿಸಿಕೊಂಡಿತ್ತು. ದಾರಿಯೋ ಗುಡ್ಡದ ಓರೆಕೋರೆಯಾದ ಕಾಲುದಾರಿ. ದಾರಿಯನ್ನು ಬಿಟ್ಟು ಕಾಲಿಟ್ಟಲ್ಲಿ ಮುಳ್ಳುಕಲ್ಲು ಹೊದರಗುಂಪು. ಆ ಸೂಟಿಯ ಅಸ್ಥಿರವಾದ ಪ್ರಕಾಶಾಂಧಕಾರದ ದ್ವಂದ್ವಾವಸ್ಥೆಯಿಂದ ಒಳ್ಳೆ ಇಕ್ಕಟ್ಟಿನಲ್ಲಿ ಸಿಕ್ಕಿಕೊಂಡ ಹಾಗೆ ಆಯಿತು. ಕೋಪ

ದಿಂದ ಸೂಟಿಯನ್ನು ಒಯ್ದು ದೂರ ಬಿಸುಟುಬಿಟ್ಟರು. ಅದು ಕತ್ತಲೆಯ ಗುಂಪುಗಳಿಗೆ ಆಹಾರವಾಗಿ ಬಿದ್ದಲ್ಲಿ ಭಯಂಕರವಾಗಿ ಕಂಡಿತು.

ಕತ್ತಲೆಯಲ್ಲೇ ನಿಂತು ನೋಡಿದರು ಪದ್ಮನಾಭೈಯ; ದಾರಿ ತಪ್ಪಿರುತ್ತದೆಂದು ತಿಳಿಯಿತು. ಅತ್ತ ಮೂಲೆಯಲ್ಲಿ ಕರಿಯ ರಾಶಿಯಂತೆ ಕಾಣುವ ಬಿಸುಗಲ್ಲು ಮನೆಯ ಮರಗಳ ಗುಂಪಿನಿಂದ ದಿಕ್ಕನ್ನು ಗೊತ್ತುಮಾಡಿಕೊಂಡರು. ಸೂಟಿಯ ಉಪದ್ರ ತಪ್ಪಿದುದರಿಂದ ತುಸು ಹೊತ್ತಿಗೆಲ್ಲಾ ಕಣ್ಣು ಸ್ವಚ್ಛವಾಗಿ ರಾತ್ರಿ ಪ್ರಕೃತಿಯ ಸ್ವರೂಪವು, ಅಲ್ಲೊಂದು ಇಲ್ಲೊಂದು ಮಿನುಗುವ ನಕ್ಷತ್ರಗಳ ಹೊಳಪಿನ ಸೇರಿಕೆಯ ಬೆಳಕಿನಿಂದ ಮುಸಮುಸಕಾಗಿ ತೋರುತ್ತಿತ್ತು. ಅವರು ಸೂಟಿಯನ್ನು ಶಪಿಸುತ್ತಾ ಬಡಿಗೆಯನ್ನು ಕುಟ್ಟುತ್ತಾ, ಮುಳ್ಳುಕಲ್ಲುಗಳನ್ನು ತುಳಿಯುತ್ತಾ ಸರಿಯಾದ ದಾರಿಯ ಕಡೆಗೆ ಹೋಗುವಾಗ ಕಾಲಿಗೊಂದು ಮುಳ್ಳು ಕಂತಿತು. ಆ ಬಾಧೆಗೆ ಒಗ್ಗಾಲಿನಿಂದ ಕುಂಟಿಕೊಂಡು ಬಡಿಗೆಯ ಗುರಿತಪ್ಪಿ ಯಾವುದೋ ಒಂದು ಗುಂಡಿಯೊಳಗೆ ಬುಡುಕ್ಕನೆ ಬಿದ್ದರು! ಇದು ಮುಳ್ಳಿಗಿಂತ ದೊಡ್ಡ ಅಪಾಯವೆಂದು ಅರಿಯುತ್ತಲೆ ಮುಳ್ಳಿನ ನೋವು ಎಲ್ಲಿ ಹೋಯಿತೋ ಏನೋ! ತಿಮ್ಮಣ್ಣ ಹೆದರಿ "ಕಿರ್ರನೆ" ಕಿರಚಿದನು. ಆದರೆ ಹಕ್ಕಿಯಂತೆ ಲಾಘವಶಾಲಿಗಳಾದ ಪದ್ಮನಾಭೈಯ ಮುಗ್ಗುರಿಸಿ ಬಿದ್ದುಹೋಗದೆ, ನೇರಾಗಿ ಗುಂಡಿಯೊಳಗೆ ನಿಂತಿದ್ದರು! ಹೆಗಲು ಜಾರದಂತೆ ಮಗನನ್ನು ಬಲವಾಗಿ ಹಿಡಿದುಕೊಂಡೇ ಇದ್ದರು! ಈ ಗಡಿಬಿಡಿಯಲ್ಲಿ ದೊಣ್ಣೆ ಎಲ್ಲಿ ಹಾರಿಹೋಯಿತೋ ಏನೋ! "ಹೆದರಬೇಡ ತಿಮ್ಮಾ" ಎಂದು ಮಗನಿಗೆ ಧೈರ್ಯವನ್ನು ಹೇಳಿ, ಮೆಲ್ಲನೆ ಅವನನ್ನು ಕೆಳಗಿಳಿಸಿ, ಕೈಯಿಂದ ಪರಡುತ್ತಾ ಆ ಗುಂಡಿಯ ಅಳತೆ ಆಕಾರ ವಿಕಾರಗಳನ್ನು ಅಂದಾಜು ಮಾಡಿಕೊಂಡರು. ಅದು ಯಾವುದೋ ಒಂದು ಪೊಟ್ಟುಬಾವಿ. ಅದೀಗ ಮುಚ್ಚುತ್ತಾ ಬರಾಬರಿ ಒಂದಾಳು ಆಳದಲ್ಲಿ ನಿಂತಿತ್ತು. ಅದರೊಳಗೆ ಬಿದ್ದುದರಿಂದ ಅವರ ದೇಹಕ್ಕೂ ಯಾವುದೋ ತಾಗಿ ಗಾಯವಾಗಿದ್ದಿತು. ರಕ್ತವೂ ಬರುತ್ತಿರಬೇಕು. ಅಳುವ ತಿಮ್ಮನಿಗೆ ಧೈರ್ಯವನ್ನು ಹೇಳುತ್ತಾ, ಆ ಬಾವಿಯಿಂದ ಪಾರಾಗಲು ಉಪಾಯವಿದೆಯೇ ಎಂದು ಬಹಳ ಪ್ರಯತ್ನ ಮಾಡಿ ನೋಡಿದರು. ಮೇಲೆ ಹತ್ತಬೇಕೆಂದರೆ, ಕಾಲಿಟ್ಟಲ್ಲಿ ಜರಿದು ಜರಿದು ಹೋಗುತ್ತಿತ್ತು.

ನೋಡ ನೋಡುತ್ತಿರಲು, ಗಗನವೆಲ್ಲ ಸಂಪೂರ್ಣ ಮೇಘಾವೃತವಾಯಿತು. ಒಂದು ನಕ್ಷತ್ರವಾದರೂ ಕಾಣದೆ ಹೋಯಿತು. ಕೆಳಗೂ

ಮೇಲೆಯೂ ಎಲ್ಲಾ ಒಂದೇ ಬಣ್ಣವಾಯಿತು. ಒಂದು ವೇಳೆ ಬಹಳ ಕಷ್ಟ ಪಟ್ಟು ಆ ಗುಂಡಿಯಿಂದ ಪಾರಾದರೂ ಆ ಕಣ್ಣುಕಟ್ಟುವ ಕಗ್ಗಾನಗತ್ತಲೆಯಲ್ಲಿ, ಆ ಕಲ್ಲು—ಮುಳ್ಳು—ಪೊದರಿನ ಹಳುವು ಕಾಡಿನಲ್ಲಿ, ಅದೂ ದಾರಿ ತಪ್ಪಿದ ಸ್ಥಳದಲ್ಲಿ ನಿರಾಧಾರವಾಗಿ ಕಟ್ಟೆಬೆಟ್ಟೆಗೆ ಮುಟ್ಟುವುದು ಅಪನಂಬುಗೆಯಾಗಿಯೇ ತೋರುತ್ತಿತ್ತು. ಅವರ ಮುಂಬೆಳಕಿನಂತಹ ಆ ದಂಟೆಯಿರುತ್ತಿದ್ದರೆ, ಪೂರ್ಣ ಪ್ರಯತ್ನ ಮಾಡಿ ಹೊರಟೇ ಬಿಡುತ್ತಿದ್ದರು. ಯಶಸ್ವಿಗಳೂ ಆಗುತ್ತಿದ್ದರು. ಈಗ ಉಪಾಯವಿಲ್ಲ; ದೇವರೇ ಗತಿ. "ಗುಡ್ಡದಲ್ಲಿ ಸಿಕ್ಕಿಬೀಳುವುದಕ್ಕಿಂತಲೂ ಗುಡ್ಡದ ಗುಂಡಿಯಲ್ಲಿ ಭದ್ರವಾಗಿರುವುದು ಲೇಸು" ಎಂದು ಗಟ್ಟಿಮಾಡಿಕೊಂಡು ತಿಮ್ಮನನ್ನು ಮಡಿಲಲ್ಲಿ ಕೂಡಿಸಿಕೊಂಡು ಹರಿಸ್ಮರಣೆ ಮಾಡುತ್ತಾ ಆ ಪೊಟ್ಟು ಬಾವಿಯಲ್ಲೇ ಕುಳಿತುಬಿಟ್ಟರು. ಊಟವೂ ಇಲ್ಲ, ನಿದ್ದೆಯೂ ಇಲ್ಲ. ತಿಮ್ಮಣ್ಣ ಮಾತ್ರ ಆಗಾಗ ಜೊಂಪುದೂಗಿ ಬೆದರಿ ಬೀಳುತ್ತಿದ್ದನು. ಪದ್ಮನಾಭೈಯ್ಯ ಮಾತ್ರ 'ಯಾವಾಗ ಬೆಳಗಾಗಿಲ್ಲ, ಯಾವಾಗ ಯಾರಿಗೂ ತಿಳಿಯದಂತೆ ಮನೆಸೇರಿಲ್ಲ,' ಎಂದು ಎಣಿಕೆಹಾಕುತ್ತ, ಪಿಳಿಪಿಳಿ ಆಕಾಶ ನೋಡುತ್ತಿದ್ದರು. ಹರಿಸ್ಮರಣೆಯ ಮಹಿಮೆಯಿಂದಲೋ ಏನೋ ಆಕಾಶವು ಸೋರಿ ಅವರನ್ನು ಪೀಡಿಸಲಿಲ್ಲ. "ಗುಮ್ಮ" ತೋರಿಸಿ ಹೆದರಿಸುವ ಹಾಗೆ, ಆಗಾಗ ಮೋಡವು ಮುಸುಕು ಹಾಕುತ್ತಾ, ಆಗಾಗ ಬಿಟ್ಟು ಹೋಗುತ್ತಾ ಇತ್ತು. ಹೀಗೆಯೇ ಹಾಗೂ ಹೀಗೂ ಹೇಗೂ ಬೆಳಗಾಗುತ್ತಾ ಬಂತು.

ಅದೇ ತಡ, ಪದ್ಮನಾಭೈಯ ಕಚ್ಚೆಗಟ್ಟಿ, ಆ ಗುಂಡಿಯ ಗೋಡೆಯಲ್ಲಿದ್ದೊಂದು ಕಲ್ಲನ್ನು ಎಬ್ಬಿಸಿ, ಕೆಳಗೆ ಹಾಕಿ ಅದರ ಮೇಲೆ ನಿಂತು, ಆ ಕಲ್ಲಿದ್ದ ಸಂದಿಗೆ ಕಾಲುಕೊಟ್ಟು, ತಿಮ್ಮನನ್ನು ಎತ್ತಿ ಮೇಲಿಟ್ಟು ತಾನೂ ಮೇಲೇರಿ ಪಾರಾದರು. ಬೆಳಗಾಗುವಾಗ ಪದ್ಮನಾಭೈಯ ಮನೆಗೆ ಬಂದು ಸೇರಿಬಿಟ್ಟರು.

ಮನೆಯಲ್ಲಿ ಜಲಜಮ್ಮ ರಾತ್ರಿ ಪೂರಾ ಕಾದು ಕಾದು ಬೇಸತ್ತು, ಏನೇನೋ ಸುಪ್ಪದುಷ್ಟ ಯೋಚನೆಗಳಲ್ಲಿ ತೊಳಲಾಡುತ್ತಾ ಕಾಲ ಕಳೆದಳಂತೆ. ಬೆಳಗ್ಗೆ ಪತಿಯನ್ನೂ, ಪುತ್ರನನ್ನೂ ನೋಡಿದ ಮೇಲೆಯೇ ಅವಳಿಗೆ ಜೀವಬಂದ ಹಾಗಾದುದು. ಪತಿಯ ಮೈಯಲ್ಲಿರುವ ಗಾಯಗಳನ್ನು ನೋಡಿ ಬೆಚ್ಚಿಬಿದ್ದಳು. ಸತ್ಯಸಂಗತಿ ಹೇಳಿದರೆ ಅದು ಊರೆಲ್ಲಾ ಗೊತ್ತಾದರೆ ಮುಖ ತಗ್ಗಿಸಬೇಕಾದೀತೆಂಬ ಬಿಂಕದಿಂದ ಪದ್ಮನಾಭೈಯ್ಯ ಏನೇನೋ

ಸುಳ್ಳು ಹೇಳಿ ಹಾರಿಸಿಬಿಟ್ಟರು. ತಿಮ್ಮನಿಗೂ ಹಾಗೆಯೇ ಹೇಳಿಕೊಟ್ಟಿದ್ದರು. ತಿಮ್ಮನು ಹೇಳಿದ್ದೇನೆಂದರೆ "ಅಪ್ಪ ನನ್ನನ್ನು ಎತ್ತಿಕೊಂಡು, ಬೆಳಂಜಾವದಲ್ಲಿ ಹೊರಟು ಬರುವಾಗ, ದಾರಿಯಲ್ಲಿ ಯಾರೋ ಮುಳ್ಳು ಕಡಿದು ಹಾಕಿದ್ದರು. ಅದೇ ಅಪ್ಪನ ಮೈಗೆ ಗಾಯಮಾಡಿತು." ಹೀಗೆ ತಿಮ್ಮನು ಯಾರಿಗೂ ಆ ಗುಟ್ಟು ಹೇಳದಿದ್ದರೂ, ನಮಗೆ ಮಾತ್ರ ಹೇಳಿದುದರಿಂದ ಇದೆಲ್ಲ ನಮಗೆ ಗೊತ್ತಾಯಿತು. ಆ ಮೇಲೆ ಪದ್ಮನಾಭೈಯ್ಯ ಯಾರಿಗಾದರೂ ಏನಾದರೂ ಬುದ್ಧಿ ಹೇಳುವಾಗ, "ಮಂಡೆ ಗಟ್ಟಿಯಿದೆಯೆಂದು ಬಂಡೆಗೆ ಹಾಯಬಾರದು" ಎಂದು ಹೇಳುವುದೊಂದು ವಾಡಿಕೆಯೇ ಆಯಿತಂತೆ.

ಆದರೂ ಅವರ ಆಚರಣೆಯಲ್ಲಿ ಮಾತ್ರ 'ಆ ನೀತಿ ಅಷ್ಟೇನೂ ವ್ಯಕ್ತವಾಗಲಿಲ್ಲ. ಅಗತ್ಯಬಿದ್ದರೆ ಎಂತಹ ರಾತ್ರಿಯಲ್ಲಾದರೂ ಹೊರಡುವವರೇ ಆಗಿದ್ದರು. ಬೈಲಕರೆ ದೊಡ್ಡಮ್ಮನಿಗೆ ಒಮ್ಮೆ 'ಆನುಶಂಕೆ' ಎಂಬ ರೋಗವು ಸುರುವಾಯ್ತು. ನಡು ರಾತ್ರಿಯ ವೇಳೆಯಲ್ಲಿ ರೋಗವು ವಿಕೋಪಕ್ಕೆ ಏರಲು, ಔಷಧಕ್ಕಾಗಿ ಗಜನಿಂಬೆಯ ಹಣ್ಣೊಂದು ಅಗತ್ಯಬಿತ್ತು. ಭೋಜರಾಯರ ಮನೆಯಲ್ಲಿತ್ತು ಆ ಗಜನಿಂಬೇ ಮರ. ಆ ರಾತ್ರಿಯಲ್ಲಿ ಸೋರುತ್ತಿದ್ದ ಚಿರಿಪಿರಿ ಮಳೆಯನ್ನು ಕೂಡಾ ಲಕ್ಷ್ಯ ಮಾಡದೆ, ಅಲ್ಲಿಗೆ ಹೋಗಿ ನಿದ್ದೆಯಲ್ಲಿದ್ದ ಭೋಜರಾಯರನ್ನು ಕೂಗಿ ಎಬ್ಬಿಸಿ ಕೇಳಿ, ಜಾಗ್ರತೆಯಿಂದ, ನೆನೆದು ಜಾರುವ ಆ ಮರವನ್ನೇರಿದರು. ಕಾಲುಜಾರಿದುದರಿಂದಲೋ, ಕತ್ತಲೆಯಲ್ಲಿ ಕಾಣದೆ ಕುಂಬು ಕೊಂಬೆಯನ್ನು ತುಳಿದು ಅದು ಮುರಿದುದರಿಂದಲೋ, ಮರದಿಂದ ಕೆಳಗೆ ಬಿದ್ದುಬಿಟ್ಟರು. ಪುಣ್ಯವಶದಿಂದ ಹುಲ್ಲು ನೆಲದ ಮೇಲೆ ಬಿದ್ದರು. ಸ್ವಲ್ಪ ಪೆಟ್ಟಾದರೂ ಲಕ್ಷ್ಯಮಾಡದೆ ಮತ್ತೊಮ್ಮೆ ಅದೇ ಮರವನ್ನು ಏರಿ, ಗಜನಿಂಬೆಯನ್ನು ಕೊಯ್ದುಕೊಂಡೇ ಬಂದಿದ್ದರು. ಮಗುದೊಮ್ಮೆ ಅವಸರ ಬಿದ್ದ ಕಾರಣ ರಾತ್ರಿಯಿಡೀ ನಿದ್ದೆಗೆಟ್ಟು, ಐನೂರ ಎಪ್ಪತ್ತೆಂಟು ತೆಂಗಿನ ಕಾಯಿಗಳನ್ನು ಬಿಡುವಿಲ್ಲದೆ ಸಿಪ್ಪೆ ತೆಗೆದು ರಾಶಿಹಾಕಿದ್ದಾರೆ. ಕಡಿದಾದ ಕೆಲಸವನ್ನು ಎದೆಗೊಟ್ಟು ಸ್ವತಃ ಮಾಡ ಹೊರಡುವವರೊಳಗೆ ಪದ್ಮನಾಭೈಯನಿಗೇ ಅಗ್ರಗಣ್ಯತೆ. ಖೂನಿ ಕೂಡಾ ಮಾಡುವವರೆಂದು ಪ್ರತೀತಿಯುಳ್ಳ ಭಯಂಕರ ವ್ಯಕ್ತಿಯಾದ ಹರಿವಾರು ಭೂರ್‍ರಾಜಯ್ಯನು ತಿರುವಾಂಕೂರು ಕಡೆಯಿಂದ ತಲವಾರನ್ನು ತರುವ ಧೈರ್ಯವು ಸಾಲದೆ, ಸ್ನೇಹಿತರಾದ ಪದ್ಮನಾಭೈಯ್ಯನಿಗೆ ಹೇಳಿದಾಗ, ಪದ್ಮನಾಭೈಯ "ನಾನು ತರುವೆ"ನೆಂದು ಎದೆತಟ್ಟಿ, ತಿರುವಾಂಕೂರಿನಿಂದ ಬರುವಾಗ ಎರಡು

ತಲವಾರುಗಳನ್ನೂ, ಕೊಚ್ಚಿ ಸೀಮೆಯ ಕತ್ತಿ-ಚೂರಿಗಳನ್ನೂ, ಯುಕ್ತಿಯಿಂದ ಶೋಧಕರ ಕಣ್ಣಿಗೆ ಸಿಕ್ಕಲೀಸದೆ ತೆಗೆದುಕೊಂಡು ಬಂದು ಭೂರಾಜಯ್ಯನಿಗೆ ಕೊಟ್ಟು ಮೆಚ್ಚುಗೆ ಪಡೆದಿದ್ದಾರೆ. ಆ ಸೀಮೆಯ ಕತ್ತಿ ಮೊದಲಾದ ಸಾಮಾನುಗಳನ್ನು ಈ ಸೀಮೆಗೆ ತರಕೂಡದೆಂದು ರಾಜಕೀಯ ನಿರ್ಬಂಧವುಂಟು. ಹಾಗಿರಲು, ಗಂಟು-ಪೆಟ್ಟಿಗೆಗಳನ್ನು ಶೋಧಿಸಿದರೂ, ಅವು ಸಿಕ್ಕದಂತೆ ಎಲ್ಲಿಯೋ ಅಡಗಿಸಿಟ್ಟುಕೊಂಡು ತಂದಿದ್ದರು—ಬಲು ಯುಕ್ತಿಯಿಂದ.

ಇನ್ನು ಪದ್ಮನಾಭೈಯ್ಯನಿಗೆ ಗೊತ್ತಿಲ್ಲದ ಕೈಕೆಲಸವೂ ಇರಲಿಲ್ಲ. ಕುಟುಂಬ ಸಂರಕ್ಷಣೆಗೆ ಬೇಕಾದ ಎಲ್ಲ ವೃತ್ತಿಗಳನ್ನು ಬಲ್ಲರು. ಮನೆ ಕಟ್ಟುವರು, ಬಾವಿಗೆ ಇಳಿಯುವರು, ಏತ ಎಳೆಯುವರು, ತೆಂಗಿನ ಮೇಲೇರುವರು. ತಡಿಕೆ-ಬುಟ್ಟಿ-ಚಲ್ಲಣಗಳನ್ನು ಹೆಣೆಯುವರು. ಬಡಗಿ-ಕಮ್ಮಾರರ ಕೈಕೆಲಸದ *ಕೈಮುಟ್ಟುಗಳೂ ಅವರ ಬಳಿಯಿದ್ದುವು. ಕ್ಷೌರಿಕ ಮೈಂದನು ಬಾರದಿದ್ದರೆ ತಿಮ್ಮನಿಗೆ ಕ್ಷೌರ ಮಾಡುವುದೂ ಅವರೆ. ಅಲ್ಲದೆ ಹೆಂಗುಸರು ಮಾಡುವ ಅಡುಗೆ, ಬೀಸುವಿಕೆ, ಸಾರಿಸುವಿಕೆ, ಕೇರುವಿಕೆ ಮೊದಲಾದುವನ್ನು ಬಲ್ಲರು. ಅವರು ಮಾಡಿದ ಸಾರಿನ ಪರಿಮಳಕ್ಕೆ ಊರೆಲ್ಲಾ ಓಡಿಬಂದೀತು. "ನನಗೆ ಗೆರಸಿ ಹಿಡಿದುಕೊಂಡು ಗೇರಲಿಕ್ಕೆ ಕಲಿಸಿಕೊಟ್ಟದ್ದು ಅವರೇ." ಎಂದು ಜಲಜಮ್ಮ ಹೇಳುತ್ತಾಳೆ.

ಇಷ್ಟೇ ಅಲ್ಲದೆ ಕೆಲವು ಕುಶಲ ವಿದ್ಯೆಗಳೂ ಅವರಿಗೆ ಗೊತ್ತು. ಅವರು ಕುಶಾಲಾಗಿ ಕಟ್ಟುವ ಬಗೆಬಗೆಯ ಆಕೃತಿಯ ಬಣ್ಣದ ಬೀಸಣಿಗೆಗಳು ಊರೆಲ್ಲ ಪ್ರಸಿದ್ಧ. ಬೈಲಾರಿಯ ಆವೇಮಣ್ಣಿನ ಹೆಂಟೆಯಿಂದ ಅಕ್ಕಿ, ಗೋದಿ, ಕಾಯಿಗಳು, ಪಕ್ಷಿ, ಮೃಗ ಮೊದಲಾದ ಬೊಂಬೆಗಳನ್ನು ತಯಾರಿಸಿ ಕಳಾಭೂಷಣೀ ಪಾಠಶಾಲೆಯ ನವರಾತ್ರಿಯ ಪ್ರದರ್ಶನದಲ್ಲಿ ಇಡುತ್ತಿದ್ದರು. ಆಗ ಒಮ್ಮೆ ಕಾಗದದಿಂದ ವಿಮಾನದ ಹಾಗೆ ಮಾಡಿ, ಅದರೊಳಗೊಂದು ಬೆಕ್ಕನ್ನು ಕೂಡಿಸಿ ಬಾನಂಗಳದಲ್ಲಿ ಹಾರಿಸಿದ್ದಾರೆ. ಇಷ್ಟು ಸಾಲದುದಕ್ಕೆ ಸಾಹಿತ್ಯಾಂಗದಲ್ಲಿಯೂ ಅವರದೊಂದು ಭಾಗವಿದ್ದೇ ಇತ್ತು. ಅನೇಕ ಕಥೆಗಳನ್ನೂ ನಾಟಕಗಳನ್ನೂ ಯಕ್ಷಗಾನ ಪ್ರಸಂಗಗಳನ್ನೂ ಸಂಗೀತವನ್ನೂ ಕೈಯಾರೆ ಬರೆದಿಟ್ಟುಕೊಂಡಿದ್ದರು. ಕ್ಷಣಕವಿಯಂತೆ ಹಾಡುಗಳನ್ನು ಕಟ್ಟಿ ಕಟ್ಟಿ ಬಿಸುಡುತ್ತಿದ್ದರು.

* ಕೈಮುಟ್ಟು= ಕೆಲಸಕ್ಕೆ ಉಪಯೋಗವಾದ ಸಾಮಾನು.

ಆದರೆ ಅವೆಲ್ಲಾ ನಿರ್ದುಷ್ಟವಾಗುವಂತೆ ರಚಿಸಿ ಕ್ರಮವಾಗಿ ಬರೆದಿಟ್ಟು ಕೊಳ್ಳಲು, ಸಾಕಷ್ಟು ವ್ಯವಧಾನವು ಅವರಿಗೆಲ್ಲಿ? ಒಂದಲ್ಲೊಂದು ಕೆಲಸವು ಆ ಕರ್ಮಶೀಲರ ಮೈಮೇಲೆ ಮುಗಿಬಿದು ಕೊಂಡೇ ಇತ್ತು. ಕುಟುಂಬ ರಕ್ಷಣೆಯ ಎಲ್ಲ ಭಾರವೂ ಅವರ ಮೇಲೆಯೆ. ಅಜ್ಜ ಕರಿರಾಮಪ್ಪಯ್ಯ ನಂತೆ ಇವರೂ ಮಣ್ಣಿನೊಡನೆ ಹೋರಾಡಿದ್ದೇ ಹೆಚ್ಚು. ಕರಿರಾಮಪ್ಪಯ್ಯನು ತೋಡಿದ ಕೆಲವು ಬಾವಿ-ಕೆರೆ-ಗದ್ದೆಗಳನ್ನು ಇವರು ದುರಸ್ತಿ ಮಾಡಿಸಿದರು. ಆದರೆ ಶಾಪಗ್ರಸ್ತವಾದ ಹಾಳು ಹೆಂಟೆಯಂತೆ, ಕಟ್ಟೆಬೆಟ್ಟನ ಜಾಗದಲ್ಲಿರುವ ಆ ಗುಡ್ಡ, ಆ ಪೊಟ್ಟು ಬಾವಿ, ಕೆಟ್ಟ ಗದ್ದೆ, ಒಣತೋಟ ಇವನ್ನು ನೋಡುವಾಗ ಆ ಪದ್ಮನಾಭಯ್ಯನನ್ನು ನೆನಪಿಗೆ ಬರಿಸುತ್ತ ಪದ್ಮನಾಭಯ್ಯ ಕರಿರಾಮಪ್ಪಯ್ಯನ ಕಿರಿಯ ಅವತಾರವೇನೋ ಎನಿಸುತ್ತದೆ.

ಕರಿರಾಮಪ್ಪಯ್ಯ ಒಂದು ಕೋಣವನ್ನು ನಿಗ್ರಹಿಸಿದಂತೆಯೇ ಪದ್ಮನಾಭಯ್ಯ ಒಂದು ಹರಾಮಿ ಹಸುವನ್ನು ನಿಗ್ರಹಿಸಿದ್ದಾರೆ. ಅದು ಅಕ್ಕತ್ತೆಯ ಹಾಯುವ ದನವೆಂದು ಊರೆಲ್ಲಾ ಪ್ರಸಿದ್ಧಿ. ಅದರ ಬಣ್ಣ ಕಪ್ಪು. ಕರಿಯ ಬಂಡೆಯಂತೆ. ಗುಂಡುಗುಂಡಾದ ದಿಂಡು ಮೈ; ಗೂಟದಂತೆ ಗಿಡ್ಡಗಾದ ಚೂಪಾದ ಕೊಂಬು. ಇದು ಅಕ್ಕತ್ತೆಯ ಹೊರತು, ಮತ್ತೆ ಯಾರನ್ನು ಕಂಡರೂ ಅಟ್ಟಿಸಿಕೊಂಡು ಬಂದು ಹಾಯುತ್ತಿತ್ತು. ಅದನ್ನು ಹೆದರಿಸಲು ಪ್ರಯತ್ನಪಟ್ಟವನಾದರೆ ಅದು ಅವನನ್ನು ಕುಟ್ಟಿ ಕೊಂದು ಹಾಕದೆ ಬಿಡುವುದಿಲ್ಲ. ಆದರೆ ಒಂದು ವಿಶೇಷ ಗುಣವುಂಟು. ಅದು ಓಡಿಸಿಕೊಂಡು ಬಂದು ಸಮೀಪಿಸಿದ ಕೂಡಲೇ ಅದರ ಕಾಲಡಿಯಲ್ಲಿ ಧಢಮ್ಮನೆ ಬಿದ್ದರೆ ಅದು ಕೂಡಲೇ ಶಾಂತವಾಗುತ್ತದೆ. ಶರಣಾಗತ ರಕ್ಷಣೆಯೇ ಪರಮಧರ್ಮವೆಂದು ತಿಳಿದೋ ಏನೊ, ಅಲುಗದೆ ಮಲಗಿದರೆ ಅದು ಏನೂ ಮಾಡುವುದಿಲ್ಲ. ಕೊಂಬಿನಿಂದಲೂ ಮುಖದಿಂದಲೂ ಮೃದುವಾಗಿ ಎರಡು ಮೂರು ಬಾರಿ ತಿರುಗಿಸಿ ಹೊರಳಿಸಿ ಆ ಮೇಲೆ ಅದರ ಪಾಡಿಗೆ ಹೊರಟುಹೋಗುತ್ತದೆ. ಅದು ಕಣ್ಮರೆಯಾದ ಮೇಲೆಯೇ ಬಿದ್ದವನು ಎದ್ದುಹೋಗಬೇಕಷ್ಟೆ.

ಇಂತಹ ಭಯಂಕರವಾದ ಆ ಹಸುವನ್ನು ಅಕ್ಕತ್ತೆ ಯಾವಾಗಲೂ ಕಟ್ಟಿಹಾಕಿಯೇ ಇರುತ್ತಾರೆ. ಒಂದು ದಿನ ತಿಮ್ಮಣ್ಣ ಶಾಲೆಬಿಟ್ಟು ಪಡುಗುಡ್ಡವನ್ನಿಳಿದು ಮನೆಗೆ ಬರುತ್ತಾ ಇರುವ್ವಾಗ, ಆ ಹಸು ಎಲ್ಲಿಂದಲೋ ಬುಸುಗುಟ್ಟುತ್ತಾ ತಿಮ್ಮಣ್ಣನನ್ನು ಓಡಿಸಿಕೊಂಡು ಬಂತು. ತಿಮ್ಮಣ್ಣ ಜೀವದಲ್ಲಿ ಜೀವವಿಲ್ಲದೆ ದೊಡ್ಡ ಸ್ವರದಿಂದ ಆರ್ಭಟೆ ಕೊಡುತ್ತಾ ಓಡು

ತ್ತಿರಲು, ಹಸು ಬಾಲವೆತ್ತಿಕೊಂಡು ಅವನನ್ನು ಸಮೀಪಿಸುತ್ತಿತ್ತು. ಆಗ ಅವನ ಪುಣ್ಯದಿಂದ ಅಲ್ಲೆಲ್ಲಿಯೋ ಇದ್ದ ಪದ್ಮನಾಭಯ್ಯ, ಕೈಯಲ್ಲೊಂದು ಗೂಟವನ್ನು ಹಿಡಿದುಕೊಂಡೇ ಚಿಗಿದೋಡಿ ಬಂದು, ಆ ಹರಾಮಿ ಆಕಳಿಗೆ ಇದಿರಾಗಿ, 'ರ್‍ರಂಮ್ಮೆಂ'ದು ಅದರ ಮುಖಕ್ಕೊಂದು ಗೂಟದೇಟನ್ನು ಹಾಕಿ, ಮತ್ತೊಂದಕ್ಕಾಗಿ ಕೈಯೆತ್ತಿದರು. ಅದೇ ತಡ, ಆ ಹಸು ಮುಖವನ್ನು ಅತ್ತಿತ್ತ ಕೊಸರಿಕೊಳ್ಳುತ್ತ ಸುಮಿಸುಮಿದು ಬದಿಗೆ ಸರಿದು ಹಿಂಜರಿದು, ನಾಗಾಲೋಟದಿಂದ ಓಡಿಯೇ ಹೋಯಿತು!

ಆದರೆ ಕರಿ ರಾಮಪ್ಪಯ್ಯನಂತೆ ಪದ್ಮನಾಭೈಯ ತಿಂಡೀಗೂಳಿಯಲ್ಲ. ಮಿತವಾಗಿಯೇ ಉಣ್ಣುವರು. ಉಂಡರೂ ಉಣ್ಣದ ಹಾಗೆಯೇ ಕಾಣುವ ಹಾವಿನ ಹೊಟ್ಟೆ ಅವರದು. ಮಧ್ಯಾಹ್ನ ಒಂದೊಂದು ದಿನ ಜಲಜಮ್ಮನಿಗೆ ಅಡುಗೆ ಮುಗಿಸಲು ಸ್ವಲ್ಪ ಹೊತ್ತಾಗಿ ಹೋಗುವುದುಂಟು. ಆಗ ಪದ ನಾಭೈಯ ಪೂಜೆ—ನಮಸ್ಕಾರಗಳನ್ನು ಮುಗಿಸಿ, ಊಟದ ಬಟ್ಟಲು ಅಲು ಗಾಡುವ ಶಬ್ದವನ್ನು ಇದಿರುನೋಡುತ್ತಾ, ಜಗಲಿಯಲ್ಲಿ ಸುಮ್ಮನೆ ಕಾಲು ಮೇಲೆ ಕಾಲು ಹಾಕಿಕೊಂಡು ಅಂಗಾತ ಬಿದ್ದಿರುವರು. ಹೊಟ್ಟೆ *ಎಕ್ಕಳಿಸಿ ಹೋಗಿ ಆ ಹಳ್ಳದಲ್ಲಿ ಒಂದು ಪಾವು ಅಕ್ಕಿ ಹಿಡಿಯುವಂತಿರುವುದು. ಅವರು ಹೆಚ್ಚು ಹೊತ್ತು ಹಸಿವೆಯನ್ನು ತಾಳಿಕೊಳ್ಳುವವರಲ್ಲ. ಹಾಗೆಂದು ಸಿಕ್ಕಿದ ಹಾಗೆ ಕಾಫಿ—ತಿಂಡಿ—ಫಲಾಹಾರಗಳನ್ನು ಹೊಡೆದುಕೊಳ್ಳುವವರೂ ಅಲ್ಲ. ಬೆಳಿಗ್ಗೆ ಎದ್ದರೆ ಹುಡುಗರಿಗೆಲ್ಲ ಗಂಜಿಯಾಯಿತು; ದೊಡ್ಡವರಿಗೆ ಏನೂ ಇಲ್ಲ. ಮಧ್ಯಾಹ್ನವೂ ರಾತ್ರಿಯೂ ಎರಡು ಬಲವಾದ ಊಟವಲ್ಲದೆ ಪದ್ಮನಾಭೈಯ ಮತ್ತೇನೂ ತಿನ್ನುವುದಿಲ್ಲ.

ಹೀಗೆ ಊಟದ ವೇಳೆ ಆಗ ಆಗುತ್ತ ಬರುವಾಗ, ಹಸಿವೆಯನ್ನು ತಾಳ ಲಾಗದೆ ಹೊಟ್ಟೆಯನ್ನು ಮೇಲಕ್ಕೆ ಮಾಡಿ ಬಿದ್ದುಕೊಳ್ಳುವ ಪದ್ಮನಾಭಯ್ಯ ನನ್ನು ಕರಿರಾಮಪ್ಪಯ್ಯನಿಗೆ ಹೋಲಿಸುವುದೆಂದರೇನು? ಎಂದು ನಿಮಗೆ ತೋರಬಹುದು. ಕರಿರಾಮಪ್ಪಯ್ಯನಿಗೆ ಮೈಬಲವು ಹೆಚ್ಚಾದರೆ, ಪದ್ಮ ನಾಭಯ್ಯನಿಗೆ ಮನೋಧೈರ್ಯವು ಮಿಗಿಲು. ಹಸಿವೆಯನ್ನು ಕಾಪಾಡಿ ಕೊಳ್ಳಲು ಸಾಧ್ಯವಿಲ್ಲದೆ, ಬೆಳಗ್ಗೆ ಕಾಫಿಯಿಂದ ಹಿಡಿದು ರಾತ್ರಿಯ ತನಕ ಆಗಾಗ ಕುಡಿಯುತ್ತಾ ತಿನ್ನುತ್ತಾ ಮೈಹೊಳೆಸಿ ಹಸುವಿಳಿಯಿಸಿಕೊಳ್ಳುತ್ತಿರುವ

---

* ಎಕ್ಕಳಿಸಿ = ಒಳಕ್ಕೆ ಇಳಿದು.

ನವನಾಗರಿಕರಾದ ನವತರುಣರಿಗಿಂತಲೂ, ಹಸಿವೆಯನ್ನು ಕಾಪಾಡಿಕೊಂಡಿರುವ ಪದ್ಮನಾಭಯ್ಯನಿಗೆ ಹೆಚ್ಚಾದ ದೇಹಲಾಘವವಿದ್ದಿತು; ಹೆಚ್ಚಾದ ಮನೋಧೈರ್ಯವಿದ್ದಿತು.

ಬೆಳಗ್ಗಿನಿಂದ ತೋಟದ ಕೆಲಸವೇ ಮೊದಲಾದ ಕಷ್ಟ ಕೃಷೀಕೃತ್ಯಗಳನ್ನೆಸಗಿ, ದಣಿದು ಮಧ್ಯಾಹ್ನದ ಹಸಿವೆಯ ವೇಳೆಯಲ್ಲಿ ಶಾಂತ ಭಾವದಿಂದ ಹಾಗೆ ಬಿದ್ದುಕೊಳ್ಳುತ್ತಾರೆ. ಒಳಗೆ ಒಗ್ಗರಣೆ ಹಾಕಿದ "ಝೊಯಿಂ" ಎಂಬ ಶಬ್ದವು ಕೇಳುತ್ತಲೇ ಮೊದಲು ತಿಮ್ಮ ಒಳಗೆ ಓಡುತ್ತಾನೆ ಬಟ್ಟಲುಗಳನ್ನಿಡಲಿಕ್ಕೆ. ಬಟ್ಟಲುಗಳ ಕಣಕಣಾಟವನ್ನು ಕೇಳಿದ ಕೂಡಲೇ ಮನೆ ಬೆಕ್ಕು "ಮ್ಯಾಂವು ಮ್ಯಾಂವು" ಎಂದು ಭೋಜನರಾಗವನ್ನು ಎಡೆಬಿಡದೆ ಪ್ರಾರಂಭಿಸಿ, ಜಲಜಮ್ಮನ ಕಾಲೆಡೆಯಲ್ಲಿ ನುಸುಳಿ ಸುತ್ತಿ, ಜಗಲಿಯ ವರೆಗೆ ಓಡೋಡಿ ಬಂದು, ಅಂಗಳದಲ್ಲಿರುವ ನಾಯಿಗೆ ಎಚ್ಚರಿಕೆ ಕೊಟ್ಟು, ಪುನಃ ಒಳಗೆ ಓಡಿ ಮತ್ತೆ ಹೊರಗೆಬಂದು ಪರಮಾನಂದಯೋಗ ಬಂದಿರುವುದನ್ನು ಸೂಚಿಸುತ್ತದೆ. ಈ ಸೂಚನೆಯನ್ನರಿತು ಅಂಗಳದ ಮೂಲೆಯಲ್ಲಿರುವ ಬೊಗ್ರನಾಯಿ ಮೈಕೊಡರಿ ಜಾಡಿಸಿಕೊಂಡು ಬಂದು ಜಗಲಿಯ ಮೆಟ್ಟಲಿನ ಮೇಲೆ, ಕಿವಿ, ಮೂಗು, ಕಣ್ಣುಗಳನ್ನು ಚುರುಕು ಮಾಡಿಕೊಂಡು ಉಪಸ್ಥಿತವಾಗುತ್ತದೆ. ಅದು ಬೆಕ್ಕಿನ ಹಾಗೆ ಮನೆಯ ಒಳಗೆ ಪ್ರವೇಶವಿಲ್ಲದ ಪಂಚಮ ಜಾತಿಯ ಪ್ರಾಣಿ. ಪಾಪ, ಮತ್ತೇನು ಮಾಡೀತು?

ಈ ಸುಲಕ್ಷಣಗಳನ್ನು ಮನಗಂಡ ಮೇಲೆ ಪದ್ಮನಾಭಯ್ಯ "ನಾರಾಯಣ" ಎಂದು ಎದ್ದು ಒಳಗೆ ಬಂದು ದೇವರ ಕೋಣೆಯಿಂದ ತೀರ್ಥದ ಪಂಚಪಾತ್ರೆಯನ್ನು ಎತ್ತಿಕೊಂಡು,

"ಶರೀರೇ ಜರ್ಜರೀಭೂತೆ ವ್ಯಾಧಿಗ್ರಸ್ಥೆ ಕಲೇವರೆ
ಔಷಧಂ ಜಾಹ್ನವೀ ತೋಯಂ, ವೈದ್ಯೋನಾರಾಯಣೊಹರಿಃ"

ಎಂದು ಮುಂತಾಗಿ ಮಂತ್ರೋಚ್ಚಾರಣೆ ಮಾಡುತ್ತ, ಊಟದ ಕೋಣೆಗೆ ಬಂದು ಅನ್ನದ ಪಾತ್ರೆಗೆ ತುಲಸೀ ತೀರ್ಥವನ್ನು ಹಾಕುವರು. ಕೂಡಲೇ ಜಲಜಮ್ಮ ಹಸಿವೆಯಿಂದ ಕೂಗಾಡುತ್ತಿರುವ ಬೆಕ್ಕಿನ ಕಿರಿಚಲನ್ನು ಕೇಳಲಾರದೆ—"ಇಕೋ! ತಿಂದು ಸಾಯಿ!" ಎನ್ನುತ್ತಾ ಅದರ ಮೂಲೆಯ ಸ್ಥಳದಲ್ಲಿ ಒಂದು ಸಟ್ಟುಗ ಅನ್ನವನ್ನು ಹಾಕುತ್ತಾಳೆ. ಆದರೆ ಬೆಕ್ಕು ಕೂಡಲೇ ಅದನ್ನು ತಿನ್ನುವುದಿಲ್ಲ; ಕೂಗುವುದನ್ನು ನಿಲ್ಲಿಸಿ, ತಿಮ್ಮನ ಮುಖವನ್ನು ಟಕ

ಮಾಕನೆ ನೋಡುತ್ತದೆ. ಆಗ ತಿಮ್ಮನು ತೆಂಗಿನೆಣ್ಣೆಯ ಕಂಚಿಯಿಂದ ಒಂದು ಸಕ್ಕಣ ಎಣ್ಣೆಯನ್ನು ಆ ಬೆಕ್ಕಿನ ಅನ್ನಕ್ಕೆ ತೊಡಕಿಸುತ್ತಾನೆ. ಆಗತಾನೇ ಬೆಕ್ಕು ಅದನ್ನು ತಿನ್ನತೊಡಗುತ್ತದೆ. ಹೀಗೆ ಬೆಕ್ಕಿಗೆ ಮೊದಲು ತೀರ್ಥೋದಕ ಕೊಟ್ಟಮೇಲೆ, ಉಳಿದೆಲ್ಲರಿಗೂ ತೀರ್ಥವನ್ನು ಕೊಟ್ಟು ಪದ್ಮನಾಭೈಯ ಊಟಕ್ಕೆ ಕುಳಿತುಕೊಳ್ಳುವರು. ಅನ್ನದ ಮೇಲೆ ಎಣ್ಣೆಯನ್ನು ತೊಟಕಿಸಿದ ಮೇಲೆ ತಿಮ್ಮ ತಂಪೆಯ ಬದಿಯ ಬಟ್ಟಲಿಸ ಮುಂದೆ ಊಟಕ್ಕೆ ಕೂಡುತ್ತಾನೆ.

ಈ ವಿಧಾನವನ್ನೆಲ್ಲಾ ಶಬ್ದ ಮಾತ್ರದಿಂದ ಊಹಿಸುತ್ತಾ, ಹೊರಗೆ ಮೆಟ್ಟಲಿನ ಮೇಲೆ ಬಿದ್ದಿರುವ ಬೊಗ್ರ, ಒಳಗೆ ಮಜ್ಜಿಗೆಯನ್ನ ಸುರಿಯುವ ಶಬ್ದ ಕೇಳುವಾಗ ಮೆಟ್ಟಲಿನಿಂದ ಅಂಗಳಕ್ಕಿಳಿದು ಬಹು ತೀವ್ರ ಲಕ್ಷ್ಯದಿಂದ ಕುಳಿತುಕೊಳ್ಳುತ್ತದೆ. ತಿಮ್ಮ ಊಟ ಮುಗಿಸಿ ಕೈತೊಳೆಯಲಿಕ್ಕೆ ಬಾವಿಕಟ್ಟೆಗೆ ಬರುವಾಗ, ಬೊಗ್ರ ಬಾಲವನ್ನು ಕುಣಿಸುತ್ತ ಅವನ ಹಿಂದೆಯೇ ಹೋಗುತ್ತದೆ. ಅವನು ಕೈತೊಳೆದು ಓಡುತ್ತೋಡುತ್ತ ಮನೆಯೊಳಗೆ ಹೋಗುವನು. ಬೊಗ್ರ ಅವನು ಹೊಕ್ಕ ಬಾಗಿಲನ್ನೆ ದಿಟ್ಟಿಸುತ್ತಾ ನಿಂತಿರುತ್ತದೆ. ತಿಮ್ಮ ಒಂದು ಬಾವಡೆಯಲ್ಲಿ ಗಂಜಿಯನ್ನು ಎತ್ತಿಕೊಂಡು ಹೊರಗೆ ಬರುತ್ತಾನೆ. ಬೊಗ್ರ ಆನಂದದಿಂದ ಕುಣಿಕುಣಿಯುತ್ತ ಅವನ ಹಿಂದೆಯೂ ಮುಂದೆಯೂ ಓಡಾಡುತ್ತ ಹೋಗಲು, ತಿಮ್ಮನು ಮನೆಯ ಪಾರ್ಶ್ವದ ಗೋಡೆಯ ಬದಿಯಲ್ಲಿ ಬೊಗ್ರನಿಗಾಗಿ ಹುಗಿದಿಟ್ಟ ಓಡಿನ ಪಾತ್ರೆಯೊಳಗೆ ಆ ಗಂಜಿಯನ್ನು ಸುರಿಯುತ್ತಾನೆ. ಕೂಡಲೇ ಬೊಗ್ರ ಅದನ್ನು ತಿನ್ನಲಿಕ್ಕಾಗಿ ಮುಂದಕ್ಕೆ ಹಾಯುವುದು, ತಿಮ್ಮನು "ತಡಿ, ನಿಲ್ಲು" ಎಂದು ತಡೆಯುವುದು, ತಿಮ್ಮನ ಆಜ್ಞೆಯ ಕಟ್ಟಿನಿಂದ ಬೊಗ್ರ ಬಾಯಿಯಲ್ಲಿ ನೀರಿಳಿಸುತ್ತಾ ತಿಮ್ಮನನ್ನು ನೋಡಿ ಅಂಗಲಾಚುವುದು, ತಿಮ್ಮ "ಸೆಕೆಂಡ್ ಕೊಡು" "ಹರ ಕೊಂಡು ಬಾ" "ತಲೆಬಗ್ಗಿಸು" ಎಂದು ಹೇಳಿ ಅವನಿಂದ ಆ ವಿದ್ಯೆಗಳನ್ನು ಮಾಡಿಸಿ ನಂತರ ಗಂಜಿ ತಿನ್ನಲಿಕ್ಕೆ ಬಿಡುವನು. ಆಗ ಕೆಲವು ಬಾರಿ ಪದ್ಮನಾಭೈಯ—"ಹಾಗೆ ತಡೆಯಬೇಡವೋ" ಎಂದು ಅವನನ್ನು ನಿಷೇಧಿಸುವುದುಂಟು.

ಊಟವಾದ ಮೇಲೆ ಪದ್ಮನಾಭೈಯ ಕೋಣದ ಹಾಗೆ ಬಿದ್ದುಕೊಂಡು ನಿದ್ರಿಸುವುದಿಲ್ಲ. ಏನೋ ಕೊಂಚ ವಾಮಕುಕ್ಷಿ ಮಾಡಿದ ಹಾಗೆ ಇದ್ದು, ಅಡಕೆಲೆಯ ತುಂಬುಲವನ್ನು ಒಂದೆರಡು ಬಾರಿ ಉಗುಳಿ ತಲೆಗೆ ಬಟ್ಟೆಯನ್ನು ಕಟ್ಟಿಕೊಂಡು, ಕಟ್ಟಿಗೆ ಒಡೆಯಲಿಕ್ಕೋ ತೋಟವನ್ನು ಅಗೆಯಲಿಕ್ಕೋ

ಮತ್ತೇತಕ್ಕೋ ಟೊಂಕ ಕಟ್ಟಿ ನಿಲ್ಲುವರು. ಹಲಸಿನ ಹಣ್ಣಿನ ಕಾಲವಾದರೆ ತೋಟದ ಹಲಸಿನ ಮರಕ್ಕೆ ಹತ್ತಿ ಹಣ್ಣುಗಳನ್ನೋ ಕಾಯಿಗಳನ್ನೋ ಹಗ್ಗ ಹಾಕಿ ಕೆಳಗಿಳಿಸುವ ಸಮಯವು ಅದೇ. ಹಲಸಿನ ಹಣ್ಣು ಎನ್ನುವಾಗ ಒಮ್ಮೆ ಆ ಪದ್ಮನಾಭೈಯ್ಯ ಮಾಡಿದ ಕಳ್ಳತನದ ನೆನಪು ಬರುತ್ತದೆ.

೧೩

ಕಟ್ಟೇಬೆಟ್ಟು ಮನೆಯ ಹಿಂದೆ ಒಂದು ಹಲಸಿನ ಸಸಿ ಇತ್ತು. ಅದು ಹೊಸತಾಗಿ ಆ ವರ್ಷವೇ ಫಲಬಿಟ್ಟಿತ್ತು; ಕೇವಲ ಒಂದೇ ಒಂದು ಕಾಯಿ ಮಾತ್ರ. ಅದು ಬೆಳೆದು ಹಣ್ಣಾಗಲಿಕ್ಕೂ ತಯಾರಾಗಿತ್ತು. ಬಲು ದೊಡ್ಡದೂ ಅಲ್ಲ, ತೀರ ಸಣ್ಣದೂ ಅಲ್ಲ; ನಡೂತರದ್ದು. ಆ ಹೊಸಹಣ್ಣಿನ ರುಚಿ ಹೇಗುಂಟೆಂದು ನೋಡಲಿಕ್ಕೆ ಎಲ್ಲರೂ ಬಾಯಿ ತೆರೆದು ಕಾದುಕೊಂಡಿದ್ದರು. ತಿಮ್ಮನಿಗಂತೂ ಹಲಸಿನ ಹಣ್ಣೆಂದರೆ ಪಂಚಪ್ರಾಣ. ಮನೆಯಲ್ಲಿ ಹಣ್ಣು ಗುಜ್ಜೆಯಿದ್ದರೆ, ಅವನು ಶಾಲೆಗೇ ಹೋಗುವುದಿಲ್ಲವೆಂದು ಹಟ ಮಾಡುವನು. ಅವನಿಲ್ಲದಾಗ ಎಲ್ಲಿ ಗುಜ್ಜೆ ಹಚ್ಚುತ್ತಾರೋ ಎಂದು. ತಾಯಿ ಗದರಿಸಿ ಬೆದರಿಸಿ ಶಾಲೆಗೆ ಕಳುಹಿಸಿದರೂ, ಅವನು ಶಾಲೆಯಿಂದ ಮನೆಗೆ ಬಂದ ಮೇಲೆಯೇ, ಅವನಿದಿರೇ ಹಣ್ಣು ಹಚ್ಚಬೇಕಷ್ಟೆ. ಹಚ್ಚುವಾಗ ಅವನೂ ಅಲ್ಲೇ ಇದ್ದು ಅದರ ರಚ್ಚೆ ಕಣ್ಣಾರೆ, ಹುಲ್ಲುಗಳನ್ನು ಕೂಡಾ ತಿಂದರೇನೇ ಅವನಿಗೆ ತೃಪ್ತಿ. ಹೀಗಿಲ್ಲದೆ ಅವನ ಪರೋಕ್ಷದಲ್ಲಿ ಹಚ್ಚಿದರಂತೂ ಅವನ ಕೋಪಾಟೋಪಗಳಿಗೆ ತುದಿಮೊದಲಿರದು. ಸಮಾಧಾನ ಮಾಡಬೇಕಾದರೆ ಇನ್ನೊಂದು ಗುಜ್ಜೆಯನ್ನೇ ಹಚ್ಚಿ ಬಲಿಕೊಡಬೇಕಾಗುತ್ತಿತ್ತು.

"ಹೊಸ ಗುಜ್ಜೆ ಹಣ್ಣಾಗುತ್ತದೆ, ತಿಂದು ರುಚಿ ನೋಡಬೇಕು" ಎಂದು ಎಲ್ಲರಂತೆ ಅವನೂ ಬಾಯಿಯಲ್ಲಿ ನೀರಿಳಿಸಿಕೊಂಡಿರುವಾಗ, ಒಂದು ದಿನ ಬೆಳಗ್ಗೆ ನೋಡಲು ಆ ಹಲಸಿನ ಕಾಯಿಯೇ ಮರದಿಂದ ಮಾಯವಾಗಿತ್ತು. ಯಾರೋ ಕಳ್ಳರು ಕದ್ದುದೆಂದೇ ತಿಳಿದು ಎಲ್ಲರೂ ಹಳಹಳಿಸಿದರು. ಪದ್ಮನಾಭೈಯು ಕೂಡಾ ಕೋಳಿ ನುಂಗಿದ ಕಳ್ಳನ ಹಾಗೆ ಗುಜ್ಜೆ ಕಳ್ಳನನ್ನು ಹುಡುಕಲು ಬಹಳ ಪ್ರಯತ್ನಪಟ್ಟರೂ ಪ್ರಯೋಜನವಾಗಲಿಲ್ಲ. ಬೈಲಕರೇ ದೊಡ್ಡಮ್ಮ ಪಶ್ಚಾತ್ತಾಪದಿಂದ "ನಿನ್ನೆ ನೋಡಿದಾಗ ಕಾಯಿ *ಬೋಳಕ್ಕಾರು

---

* ಬೋಳಕ್ಕಾರು= ಹಣ್ಣಿನ ಪ್ರಾರಂಭ ಸ್ಥಿತಿ.

ಆಗಿತ್ತು. ತೆಗೆಯಲಿಕ್ಕೆ ಹೇಳಬೇಕಂತ ಇದ್ದೆ. ಅಷ್ಟರಲ್ಲಿ ಕಳ್ಳನಿಗೆ ಜೀವ ಎಳೀತಲ್ಲ!" ಎಂದು ಮರುಗಿದರು.

ಮತ್ತೆ ಎರಡು ದಿನದಲ್ಲಿ ಮನೆಯೊಳಗೆಲ್ಲಾ ಗುಜ್ಜೇ ಪರಿಮಳವು ಇಡುಗಿತು. ಎಲ್ಲರ ಮೂಗಿಗೂ ಗಮ ಗಮ ಗಮ! "ಎಲ್ಲಿ? ಎಲ್ಲಿ?" ಎಂದು ಎಲ್ಲರಿಗೂ ಹುಡುಕುವುದೇ ಕೆಲಸ. ಮನೆಯ ಪಕ್ಕದಲ್ಲಿರುವ ಹಲಸಿನ ಕಾಯಿ ತುಂಬಿರುವ ಎರಡು ಮರಗಳಿಗೂ ಹತ್ತಿ ಯಾವ ಕಾಯಿ ಹಣ್ಣಾಗಿದೆ? ಯಾವುದನ್ನು ಕಾಗೆ *ಕೂಂಪಿದೆ? ಎಂದು ಹುಡುಕಲಾರಂಭಿಸಿದರು. ಪದ್ಮನಾಭೈಯನೇ ಮರ ಹತ್ತಿ ಹತ್ತಿ ಹುಡುಕಿದರು; ಎಲ್ಲಿಯೂ ಹಣ್ಣು ಗುಜ್ಜೆ ಇರಲಿಲ್ಲ.

ಮೂರನೇ ದಿನ ಸಂಜೆಯಲ್ಲಿ ಒಮ್ಮಿಂದೊಮ್ಮೆಗೇ ಆ ಸುವಾಸನೆ ಮಾಯವಾಗಿ ಹೋಯಿತು. ಆಗ ಎಲ್ಲಿಯೋ ಅಡಗಿದ್ದ ಪದ್ಮನಾಭೈಯ ರಾತ್ರಿ ಊಟಕ್ಕೆ ಕುಳಿತುಕೊಂಡು, ಜಲಜಮ್ಮ ಒಂದೇ ತುತ್ತು ಅನ್ನ ಬಡಿಸುವುದರೊಳಗೆ "ಸಾಕು" ಎಂದು ಕೈಯಡ್ಡ ಹಿಡಿದರು. "ಇದೇನು ಹುಚ್ಚು ಸಣ್ಣ ಮಗುವಿನ ಹಾಗೆ? ಮಧ್ಯಾಹ್ನ ಉಂಡ ಮೇಲೆ ಏನೂ ತಿಂದಿಲ್ಲಾ? ಏನಾಯಿತು? ಹೊಟ್ಟೆ ಸರಿಯಿಲ್ಲವೇ?" ಎಂದು ಜಲಜಮ್ಮ ಆಶ್ಚರ್ಯದಿಂದ ಕೇಳಿದಳು.

"ಒಂದು ಇಡೀ ಗುಜ್ಜೆ ತಿಂದೆ ಗೊತ್ತೊ?" ಎಂದರು ಪದ್ಮನಾಭೈಯ ಜಲಜಮ್ಮನ ಮುಖನೋಡಿ ಮುಗುಳ್ನಗುತ್ತಾ.

"ಎಲ್ಲಿ?"—ಜಲಜಮ್ಮ ಬೆರಗಾಗಿ ಬಾಯಿಬಿಟ್ಟಳು.

"ಕುತ್ತಟ್ಟದಲ್ಲಿ! ನಮ್ಮ ಮನೆಹಿಂದಿನ ಮರದ್ದು! ಹೊಸ ಫಲ! ಕತ್ತಲೆಯಲ್ಲೇ ಬಗೆದು ತಿಂದು ತೀರಿಸಿದ್ದು!"

"ಆಂ? ಉಂಟೇ ಹಾಗಾದರೆ! ಹೀಗೂ ಮೋಸ ಮಾಡುವುದಾ?"

"ಉಂಟುಂಟು! ಕುತ್ತಟ್ಟದ ಮೂಲೆಯಲ್ಲಿ ಗಡಿಗೆಯೊಳಗೆ ಮುಳ್ಳು ರಚ್ಚೆಯೂ ಗೂಂಜಿಯೂ ಉಂಟು. ನೀವೆಲ್ಲಾ ಬೇಕಾದರೆ ದೀಪವನ್ನು ತಕ್ಕೊಂಡು ಹೋಗಿ ಸೀ ಕಣ್ಣಾರೆ ಇದ್ದರೆ ಹರಿದು ತಿಂದು ಉಳಿದದ್ದು ದನಕ್ಕೆ ಹಾಕಿ!"—ಎಂದರು ಪದ್ಮನಾಭೈಯ.

"ರಚ್ಚೆ! ಹುಲ್ಲು! ಹಃ! ಯಾರಿಗದು ಸೋಳೆ ಇಲ್ಲದಿದ್ದರೆ?"

* ಕೂಂಪು = ಕುಕ್ಕು = ತೂತು ಮಾಡು.

"ಸೋಳೆ ಬೇಕೊ? ಒಂದೇ ಒಂದು ಮಾತ್ರ ತಿಂದು ಹೆಚ್ಚಾಯ್ತು. ಅದೂ ಒಂದು ತುತ್ತು ಅನ್ನ ಉಣ್ಣಬೇಕೆಂತಲೂ, ನಮ್ಮ ತಿಮ್ಮೂಗೆ ಒಂದಾದರೂ ಇರಲೆಂತಲೂ ಹೆಚ್ಚಾದದ್ದು. ಇಕೋ ತಿಮ್ಮೂ. ತಿಂದುಬಿಡು." ಎಂದು ಪದ್ಮನಾಭೈಯ ಕೈಯಲ್ಲಿ ಮುಚ್ಚಿಹಿಡಿದಿದ್ದ ಒಂದೇ ಒಂದು ಸೋಳೆಯನ್ನು ತಿಮ್ಮೂಗೆ ಕೊಟ್ಟರು.

ಈ ಮಾತುಕತೆ ಕೇಳುತ್ತ ಬಾಯಿಯಲ್ಲಿ ನೀರೂರಿಸಿಕೊಂಡಿದ್ದ ತಿಮ್ಮಣ್ಣ, ತಂದೆ ಕೊಟ್ಟ ಆ ಸೋಳೆಯನ್ನು ಗಬಕ್ಕನೆ ಬಾಯಿಯೊಳಗೆ ತೂರಿಸಿಕೊಂಡು ಬಿಟ್ಟನು. ಆದರೆ ಹಲ್ಲಿನೆಡೆಗೆ ಅದು ಹೋಗುವುದರೊಳಗೆ ಜಲಜಮ್ಮ ಲಗುಬಗೆಯಿಂದ–"ತಿಮ್ಮು ಮಾತ್ರ ರುಚಿನೋಡಿದರೆ ಆಯಿತೇನೇ? ಪುಟ್ಟ–ಕಮಲೆಯರು ಮಕ್ಕಳಲ್ಲವೊ? ಉಳಿದವರಿಗೆಲ್ಲಾ ಬಾಯಿ ಇಲ್ಲವೊ?" ಎನ್ನುತ್ತೆನ್ನುತ್ತಾ, ಬೆರಳನ್ನು ಕೊಕ್ಕೆಯ ಹಾಗೆ ತಿಮ್ಮನ ಬಾಯಿಯೊಳಗೆ ಹೊಗಿಸಿ, ಆ ಸೋಳೆಯನ್ನು ಕಿತ್ತುಕೊಂಡು ಬಿಟ್ಟಳು. ಹಾಗು ಅದನ್ನು ತೊಳೆದು ಶುದ್ಧಮಾಡಿ ನಾಲ್ಕಾಗಿ ಸೀಳಿ, ಒಂದನ್ನು ಪುಟ್ಟನಿಗೂ ಇನ್ನೊಂದನ್ನು ಕಮಲೆಗೂ, ಮತ್ತೊಂದನ್ನು ತಿಮ್ಮಣ್ಣನಿಗೂ ಕೊಟ್ಟು, ಮಗುದೊಂದನ್ನು ತಾನು ಬಾಯಿಗೆ ಹಾಕಿಕೊಳ್ಳಲು ಸಿದ್ಧಳಾದಳು. ಅದು ತಿಮ್ಮನಿಗೆ ಸಹಿಸಲಿಲ್ಲ. ಕೈಗೆ ಬಂದುದು ಬಾಯಿಗೆ ಬಿದ್ದರೂ, ಹಲ್ಲಿನೆಡೆಗೆ ಹೋಗುವುದರೊಳಗೆ, ಅದರ ಗತಿ ತುಂಡು ತುಂಡಾಯಿತಲ್ಲಾ, ಎಂದು ಅವನು ಹಟ ಹಾಗೂ ಅಳುವಿನೊಂದಿಗೆ ಬಟ್ಟಲನ್ನು ಒದ್ದು ಜಾಡಿಸಿ ಕೂಗಲಾರಂಭ ಮಾಡಿದನು. ಪಕ್ಕದಲ್ಲಿ ಕೊಂಡಾಟದ ತಂದೆ ಇರುವರೆಂತಲೇ ಊಟದ ಬಟ್ಟಲನ್ನು ಒದೆದು ತಳ್ಳುವಷ್ಟು ಧೈರ್ಯವು ಅವನಿಗೆ ಬಂದಿತು. ತಾಯಿಯೊಬ್ಬಳೇ ಆಗಿರುತ್ತಿದ್ದರೆ ಅವನ ಆ ಅಪರಾಧಕ್ಕೆ ಕಸಬರಿಕೆಯನ್ನೆ ಅವನ ಬೆನ್ನಮೇಲೆ ಆಡಿಸುತ್ತಿದ್ದಳು. ಆದರೆ ಅಪ್ಪನ ಪಕ್ಷವು ಮಗನ ಕಡೆಗೇ ಎಂಬುದು ಜಲಜಮ್ಮನಿಗೂ ಗೊತ್ತಿದ್ದುದರಿಂದ, ಅವನ ಕೂಗಾಟವನ್ನು ಮುಂದುವರಿಸಲೀಯದೆ, ತಾನು ಬಾಯಿಗೆ ಹಾಕಿಕೊಳ್ಳಲಿಕ್ಕಿದ್ದ ಹಲಸಿನ ಸೋಳೆಯ ಸೀಳನ್ನೇ ಇನ್ನೊಂದು ಸೀಳು ಮಾಡಿ ತಿಮ್ಮನಿಗೊಂದು ಹೆಚ್ಚಿಗೆ ಕೊಟ್ಟಳು. ಅಷ್ಟರಲ್ಲಿ ತಿಮ್ಮನ ದೊಡ್ಡಮ್ಮ ಚಿಕ್ಕಮ್ಮ ದೊಡ್ಡಪ್ಪ ಮದ್ರಾಮಣ್ಣ ಮೊದಲಾದವರೆಲ್ಲರೂ ಒಳಗೆ ಬಂದು ಗುಂಪುಗೂಡಿದರು. ಹಾಗು ಆ ಹೊಸ ಹಲಸಿನ ಹಣ್ಣಿನ ಕತೆಯನ್ನು ಕೇಳಿ ಅವರೆಲ್ಲ ಮೂಗಿನ ಮೇಲೆ ಬೆರಳಿಟ್ಟುಕೊಂಡಾಗ ಪದ್ಮನಾಭೈಯ ಹೊಟ್ಟೆಯಲ್ಲಿದ್ದ ಗುಜ್ಜೆ ಸೋಳೆಗಳೆಲ್ಲ ಜೀರ್ಣವಾಗುವ ಹಾಗೆ

ನಗುತ್ತಿದ್ದರು. ಕುಸುರಿ ತಿಂದ ತಿಮ್ಮಣ್ಣನೂ ಕಿಲಕಿಲನೆ ನಕ್ಕನು. ಜಲಜಮ್ಮನ ಕೈಯಲ್ಲಿದ್ದ ಸೋಳೆಯ ಚೂರು ತಲೆಗೂದಲಿನಷ್ಟು ಸೀಳುಗಳಾಗಿ ಎಲ್ಲರೂ ರುಚಿ ನೋಡಿಯೂ ನೋಡದಂತಾಯಿತು.

ಒಂದು ಚೂರು ತಿನ್ನುವುದಾದರೂ ಇನ್ನೊಬ್ಬರಿಗೆ ಕೊಟ್ಟೇ ತಿನ್ನುವ ಪದ್ಮನಾಭೈಯ ಆ ಹೊಸ ಗುಜ್ಜೆಯನ್ನು ಕದ್ದು ತಾನೇ ಇಡೀ ತಿಂದುದೇಕೆ? ಎಂಬ ರಹಸ್ಯವನ್ನು ಅವರೇ ಒಡೆದು ಹೇಳಿದರು. ಬೈಲಕರೇ ದೊಡ್ಡಮ್ಮನ ಮಾತನ್ನು ಸುಳ್ಳು ಮಾಡಬೇಕೆಂದು ಹಾಗೆ ತಿಂದರಂತೆ. ಆಗ ಆ ದೊಡ್ಡಮ್ಮ ಕಟ್ಟಬೆಟ್ಟನಲ್ಲಿಯೇ ವಾಸವಾಗಿದ್ದರು. ನಾಲ್ಕು ದಿವಸಗಳ ಮೊದಲು ಒಮ್ಮೆ ಆ ದೊಡ್ಡಮ್ಮ ಆ ಹೊಸ ಹಲಸಿನ ಕಾಯಿಯನ್ನು ನೋಡುತ್ತ—"ಹೂಂ, ಅದರೊಳಗೆ ಸುಮಾರು ಐವತ್ತು ಅರುವತ್ತು ಸೋಳೆ ಇದ್ದೀತು. ಆಚೆ ಮನೆಗೊಂದು ಹತ್ತು, ಈಚೆ ಮನೆಗೊಂದು ಹತ್ತು; ಉಳಿದದ್ದು ನಮ್ಮ ಮನೆಯಲ್ಲಿ ಒಬ್ಬೊಬ್ಬರಿಗೆ ನಾಲ್ಕು ನಾಲ್ಕು ಬಂದೀತು." ಎಂದು ಲೆಕ್ಕ ಹಾಕಿದರಂತೆ.

ಆಗ ಅಲ್ಲೇ ಇದ್ದ ಪದ್ಮನಾಭೈಯ–"ನಾಲ್ಕು ಸೋಳೆ ನನಗೆಲ್ಲಿ ಸಾಕು? ನಾನು ನನ್ನ ತಂದೆಗೆ ಕೊಂಡಾಟದ ಕಡೇ ಮಗನಾದ್ದರಿಂದ ನನಗೆ ನಾಲ್ಕು ಸೋಳೆ ಹೆಚ್ಚಿಗೆ ಬರಬೇಕು ನ್ಯಾಯ ಪ್ರಕಾರ" ಅಂದರಂತೆ. ಅದಕ್ಕೆ ದೊಡ್ಡಮ್ಮ—"ಛೇ ಛೇ! ಕಡೇ ಮಗನಾದ್ದರಿಂದಲೇ ನಾಲ್ಕೇ ಅನ್ನುವುದು. ಸಣ್ಣವರು ಹೆಚ್ಚಿಗೆ ಗುಜ್ಜೇ ಸೋಳೆ ತಿಂದರೆ ಅಜೀರ್ಣವಾದೀತು-ಅಜೀರ್ಣ! ಮತ್ತೆ ಪದ್ಮಾಪನಿಗೆ ಗುಜ್ಜೆ ತಿಂದು ಹೊಟ್ಟೆ ಹಿಡಕೊಂಡಿತೂ ಅಂತ ಊರೆಲ್ಲ ಅತ್ತೀತು" ಎಂದು ಉದ್ದದ ರಾಗವನ್ನು ಎಳೆದರಂತೆ. "ನೋಡಿಬಿಡುವ ಹಾಗಾದರೆ ಹೊಟ್ಟೆ ನೋವು ಬರುವುದು ಯಾರಿಗೆ ಅಂತ!" ಎಂದು ಪದ್ಮನಾಭೈಯ ಒಂದು ಗೂಟ ಹೊಡೆದೇ ಇಟ್ಟಿದ್ದರಂತೆ ಮೊದಲೇ. ಅಂತೂ ಈ ಪಂಥದಲ್ಲಿ ಪದ್ಮನಾಭೈಯರೇ ಗೆದ್ದರು. ಅವರಿಗೆ ಅಜೀರ್ಣವೂ ಆಗಿಲ್ಲ-ಗಿಜೀರ್ಣವೂ ಆಗಿಲ್ಲ; ಹೊಟ್ಟೆ ನೋವು ಬಂದದ್ದು, ಆ ಹೊಸ ಫಲದ ರುಚಿಯನ್ನು ನೆನೆದು "ಹಾ!" ಎಂದು ಬಾಯಿಬಿಟ್ಟವರಿಗೆ.

ದೊಡ್ಡಮ್ಮ ಗಟ್ಟಿಯಾದ ದನಿಯಿಂದ ತಿಮ್ಮನನ್ನು ಕುರಿತು, ತಿಮ್ಮೋ! ನಿನ್ನಪ್ಪ ಗುಜ್ಜೆ ಕದ್ದು ಯಾರಿಗೂ ಕೊಡದೆ ತಿಂದರೆಂತ ಒಂದು ಪದಾ ಮಾಡಿ ಕಟ್ಟು ಅವರ ಕುತ್ತಿಗೆಗೆ! ಬಿಡಬೇಡ ಕಳ್ಳನ್ನಾ!" ಎಂದರು. ತಿಮ್ಮನು ಹಿಂದಿನ ಜನ್ಮದಲ್ಲಿ ಕವಿ-ಗಿವೀ ಆಗಿದ್ದೋ, ಮುಂದಿನ ಜನ್ಮದಲ್ಲಿ ಮಹಾ

ಕವಿಯೇ ಆಗುವ ಲಕ್ಷಣವು ಇಂದಿನ ಜನ್ಮದ ಆ ಚಿಕ್ಕಂದಿನಲ್ಲಿಯೇ ಇದ್ದು ದನ್ನು ಆ ದೊಡ್ಡಮ್ಮ ಕಂಡು ಹಿಡಿದಿದ್ದರು. ಅದಕ್ಕೇ ಬೈಲಕರೇ ದೊಡ್ಡಮ್ಮ ಅವನನ್ನು "ಕವಿ ತಿಮ್ಮ" ಎನ್ನುವರು. ಹಾಗೆ ದೊಡ್ಡಮ್ಮನ ಪ್ರೇರಣೆಯಾದ ಕೂಡಲೆ, ತಿಮ್ಮಣ್ಣ ಒಂದು ಪದ್ಯ ಕಟ್ಟಿಯೇ ಬಿಟ್ಟನು. ಅದನ್ನು ಅವನ ತಂದೆಯೇ ಸರಿಮಾಡಿಕೊಂಡು ತಮ್ಮ ಕೊರಳಿಗೆ ತಾವೇ ಕಟ್ಟಿಕೊಂಡರು, ದೊಡ್ಡಮ್ಮನ ಶಿಕ್ಷೆ ಎಂಬ ಹಾಗೆ.

"ದೊಡ್ಡಮ್ಮಾ ನಮ್ಮಪ್ಪನ ಕೂಡಾ ಮಾಡಿಕೊಂಡ ಪಂಥ!
ಕುತ್ತಟ್ಟದ ಮೂಲೇಲಿಕುಂತಾ ಇಡೀ ಗುಜ್ಜೇತಿಂತಾ!
ಗುಜ್ಜೆ ಕದ್ದು ತಿಂದದ್ದೆಂತ ಕಳ್ಳಾ ಹೆಸರೂ ಬಂತಾ
ತಿಮ್ಮ ಕಟ್ಟಿದ ಪದಹೀಗಂತ-ದೊಡಮಾ ಹೇಳಿದ್ದೆಂತಾ ॥

೧೪

ಆ ಮೇಲೆ ಯಾವಾಗ ನೋಡಿದರೂ ತಿಮ್ಮಣ್ಣನ ಬಾಯಿಯಲ್ಲಿ ಅದೇ ಹಾಡು. ಅದು ತಂದೆಯಿಂದ ತಿದ್ದಲ್ಪಟ್ಟ ಅವರ ಕಳ್ಳತನದ ಪದ್ಯವೆಂದು ಅವನಿಗೊಂದು ಹೆಮ್ಮೆ. ತಾನು ಯಾರಿಗೂ ಸಾಧ್ಯವಿಲ್ಲದ ದೊಡ್ಡವರು ಮೆಚ್ಚುವಂತಹ ಹಾಡೊಂದನ್ನು ಕಟ್ಟಬಿಟ್ಟೆನಲ್ಲಾ, ಎಂದೊಂದು ಉಬ್ಬು. ಈ ಬಗೆಯ ಹೆಚ್ಚಳಿಕೆಯಿಂದ ಬಂದವರ ಇದಿರಿಗೆಲ್ಲಾ ಆ ಪದ್ಯವನ್ನು ಹೇಳುತ್ತ, ಅದರ ಕತೆಯನ್ನು ವಿವರಿಸುತ್ತ ತಂದೆಯ ಕೀರ್ತಿಯನ್ನು ಬಿತ್ತರಿಸುತ್ತಿದ್ದನು. ಮನೆಗೆ ಬಂದು ಹೋಗುವ ನೆಂಟರಿಷ್ಟರೂ ಹೆಚ್ಚಲಾರಂಭಿಸಿದರು. ಏಕೆಂದರೆ ಶ್ರೀಮದ್ರಾಮಾಯಣನಿಗೆ ಮದುವೆಯ ಮುಹೂರ್ತವು ಸಮೀಪವಾಗುತ್ತಾ ಇದ್ದಿತು. ತಿಮ್ಮಣ್ಣನಿಗೆ ಒಬ್ಬಳು ಅತ್ತಿಗೆ ಬರಲಾರಂಭಿಸಿದ್ದಳು.

ಶ್ರೀಮದ್ರಾಮಾಯಣನು ತಿಮ್ಮಣ್ಣನ ಖಾಸ ಅಣ್ಣನಲ್ಲ; ರಾಮಪ್ಪಯ್ಯನ ಮಗ. ತಿಮ್ಮಣ್ಣನಿಗಿಂತ ೧೫ ವರ್ಷಕ್ಕೆ ಹಿರಿಯನು. ಆದುದರಿಂದ ಮನೆಗೆಲ್ಲ ಅವನು ದೊಡ್ಡಣ್ಣ.

ಕಟ್ಟೇಬೆಟ್ಟು ಮನೆತನದಲ್ಲಿ ಈ ದೊಡ್ಡಣ್ಣನೇ ಪುತ್ಥಳೀ ಬಣ್ಣದವನಾಗಿ ಹುಟ್ಟಿದ ಮಗ. ಬಣ್ಣಕ್ಕೆ ಒಪ್ಪುವಂತಹ ಮಾಟವಾದ ಮುಖ; ಬಂಧುರವಾದ ದೇಹ; ವಿಶಾಲವಾದ ಕಣ್ಣುಗಳು; ನೀಳವಾದ ಮೂಗು; ಮುದ್ದಾದ

ಬಾಯಿ, ದೃಢವಾದ ಕೈಕಾಲು, ಮೈಕಟ್ಟುಗಳು, ಉತ್ಕೃಷ್ಟವಾದ ಲಕ್ಷಣ ಮೊದಲಾದ ಶುಭ ಚಿಹ್ನೆ ವಿಷಯಗಳಿಂದ ಕೂಡಿದ ಸುಂದರ ಸುಕುಮಾರನೇ ಶ್ರೀಮದ್ರಾಮಾಯಣ.

ಶ್ರೀಮದ್ರಾಮಾಯಣ — ಇದು ಹೆತ್ತವರಿಟ್ಟ ಹೆಸರಲ್ಲ. ಹಿರಿಯರ ಹೆಸರಾದ "ಮುದ್ದಣ" "ರಾಮಣ್ಣ" ಎಂಬ ಜಂಟಿ ಹೆಸರುಗಳು ಇಡಲ್ಪಟ್ಟಿದ್ದುವು. ಹೆತ್ತವರು ಆ ಜಂಟಿಯನ್ನು ಒಂಟಿಮಾಡಿ, "ಮುದ್ರಾಮಾ" ಎಂದು ಕರೆದರು. ಬೇರೆಯವರು ಮುದ್ರಾಮಯ್ಯ ಎಂದು ಕೂಗಿದರು, ಕ್ರಮೇಣ ಅವನು ಹುಡುಗರಿಗೆಲ್ಲಾ ದೊಡ್ಡಣ್ಣನಾದಾಗ "ಮುದ್ರಾಮಣ್ಣ"ನೆಂದು ಮನೆಯಲ್ಲಿಯೂ, "ಮುದ್ರಾಮಯ್ಯಣ್ಣ"ನೆಂದು ಊರಲ್ಲಿಯೂ ಆದನು. ಬಳಿಕ ಅವನು ತಿರುವಾಂಕೂರಿಗೆ ಹೋಗಿ, ಸಂಗೀತ ವಿದ್ವಾಂಸನಾಗುತ್ತಿರುವಾಗ, "ಮುದ್ರಾಮಯ್ಯಣ್ಣನ್" ಆಗಿದ್ದನಂತೆ. ವಿದ್ವಾಂಸನಾದ ಕೂಡಲೇ ಆ ಹೆಸರಿನ ತಲೆಗೆ "ಶ್ರೀ" ಮುಕುಟವು ಸೇರಿತು. ಪ್ರವೀಣನಾಗಿ ಊರಿಗೆ ಹಿಂದಿರುಗುವಾಗ, "ಸಂಗೀತಂ ಶ್ರೀಮದ್ರಾಮಾಯಣಂ ಭಾಗವತಾರ್" ಎಂದು ವಿಖ್ಯಾತ ನಾಮಧೇಯನಾದನು. ಆಗ ಸಿನೇಮಾದ ಪ್ರಖ್ಯಾತಿ ಇದ್ದಿಲ್ಲವಾಗಿ, ಶ್ರೀಮದ್ರಾಮಾಯಣನ ದಾರಿ ಬದಲಾಯಿತು. ಇಲ್ಲದಿದ್ದರೆ ಇಷ್ಟು ಹೊತ್ತಿಗೆ ಅವನ ಇನಿಗೊರಳು ಸಿನೇಮಾ ಪ್ರಪಂಚದಲ್ಲಿ ಮೊಳಗದಿರುತ್ತಿದ್ದಿಲ್ಲ. ಹೀಗೆ ಅವನನ್ನು ಸಂಗೀತ ಸಾಹಿತ್ಯದಲ್ಲಿ ಪ್ರವೀಣನನ್ನಾಗಿಸಿದ ಕೀರ್ತಿ ಅವನ ತಂದೆ ರಾಮಪ್ಪಯ್ಯನಿಗೆ ದೊರೆಯಲಿಲ್ಲ; ಅವನ ಚಿಕ್ಕಪ್ಪ ಪದ್ಮನಾಭೈಯನಿಗೇ ದಕ್ಕಿತ್ತು.

ಹೌದು, ಅಣ್ಣನ ಮಗನ ಮೇಲೆ, ಪದ್ಮನಾಭೈಯ್ಯನಿಗೆ ಸ್ವಂತ ಮಗ ತಿಮ್ಮನ ಮೇಲಿದ್ದುದಕ್ಕಿಂತಲೂ ಪ್ರೀತಿ ಮಿಗಿಲಾಗಿತ್ತು. ಆಗ ತಿಮ್ಮಣ್ಣ ಹುಟ್ಟಿರಲಿಲ್ಲವಾದುದರಿಂದಲೇ ಹಾಗಾಗಿರಬಹುದು. ಮುದ್ರಾಮನೆಂದರೆ ಪದ್ಮನಾಭೈಯ್ಯನಿಗೆ ಜೀವ. ಅವನ ವಿದ್ಯಾಭ್ಯಾಸದ ಉಮೇದಿನಲ್ಲಿ ರಾಮಪ್ಪಯ್ಯ ಮೂಕಭಾವವನ್ನು ತಾಳಿದರೂ, ಪದ್ಮನಾಭೈಯ ತುಂಬ ಮುಂದಾಳಾಗಿ ನಿಂತು ಅವನನ್ನು ಮ್ಯಾಟ್ರಿಕ್ ವರೆಗೆ ಓದಿಸಿ, ಬಳಿಕ ಸಂಗೀತಕ್ಕೆ ತಿರುಗಿಸಿದರು. ಅವನ ಕಂಠವು ಅದಕ್ಕೆ ಅನುಕೂಲವಾಗಿದ್ದಿತು. ಬಳಿಕ ಬಹಳ ಪಾಡುಪಟ್ಟು ಮುದ್ರಾಮನನ್ನು ತಿರ್ವಾಂಕೂರಿಗೆ ಕರೆದೊಯ್ದು, ಅಲ್ಲಿ ಸಂಗೀತಪಾಠಕ್ಕೆ ಏರ್ಪಾಡು ಮಾಡಿಸಿದವರೂ ಅವರೆ. ಅವನು ಸಂಗೀತ ವಿದ್ವಾಂಸನಾಗಿ ಬಂದಮೇಲೆ ಪದ್ಮನಾಭೈಯ ಅವನಿಗೆ "ಜಾಂಬಳೇ ಜವಿನಾಂದಾರರ" ಮನೆಯಲ್ಲಿ ಸಂಗೀತ ಗುರುಪದವಿಯ ಉದ್ಯೋಗವನ್ನೂ ಕೊಡಿಸಿ

ಆ ಜಮೀಂದಾರರೊಡನೆ--"ನಮ್ಮ ಹುಡುಗ ಚಿಕ್ಕವನು; ಇವನಿಗೆ ಊಟೋಪ ಚಾರಕ್ಕೇನೂ ಕಡಿಮೆಯಾಗಬಾರದು; ಬೆಳಿಗ್ಗೆ ಗಂಜೀತುಪ್ಪ; ಮಧ್ಯಾಹ್ನವೂ ರಾತ್ರಿಯೂ ಹೊತ್ತು ತಪ್ಪದ ಹಾಗೆ ಮೃಷ್ಟಾನ್ನದೂಟ. ಎಡೆಹೊತ್ತಿನಲ್ಲಿ ತಣ್ಣಗೆ ಮೊಸರನ್ನ. ರಾತ್ರಿ ಮಲಗುವಾಗ ಹಾಲು, ಮಧ್ಯಾಹ್ನದ ಊಟಕ್ಕೆ ಬೆಣ್ಣೆ—ಮೊಸರು. ಇವಿಷ್ಟು ಈ ವಿದ್ವಾಂಸನಿಗೆ ತಪ್ಪಲೇ ಕೂಡದು." ಎಂದು ಕಟ್ಟುನಿಟ್ಟು ಮಾಡಿ, ಈ ಕಟ್ಟುಪಾಡು ಸರಿಯಾಗಿ ನಡೆಯುವುದೋ ಇಲ್ಲವೋ ಎಂದು, ಆಗಾಗ ಜಾಂಬಳೆಗೆ ಹೋಗಿ ನೋಡಿಕೊಂಡೂ ಬರುತ್ತಿದ್ದರು. ಅವನ ತಂದೆ ರಾಮಪ್ಪಯ್ಯ ಯಾವ ಚಿಂತೆಯೂ ಇಲ್ಲದವರು; ಮದ್ರಾಮನನ್ನು ಹೆತ್ತಕೂಡಲೇ, ಅವರ ಹೆಂಡತಿ ತೀರಿಹೋದ ಆ ವಿರಹ ತಾಪ ಸಂಜಾತವಾದ ವೈರಾಗ್ಯದಿಂದಲೋ ಏನೋ, ಅವರು ಎಲ್ಲಾ ಭಾರವನ್ನೂ ತಮ್ಮನಾದ ಪದ್ಮನಾಭೈಯನ ಮೇಲೆಯೇ ಹೊರಿಸಿ, ತಾವು ಉದಯರಾಗ, ಸ್ನಾನ—ಸಂಧ್ಯಾ, ಸೂರ್ಯನಮಸ್ಕಾರ—ಪೂಜೆ—ಪಾರಾಯಣ ಇತ್ಯಾದಿ ಪುಣ್ಯ ಕಾರ್ಯಗಳಲ್ಲೇ ಕಾಲವನ್ನು ಕಳೆಯುತ್ತಿದ್ದರು. ಅಂತೆಯೇ ಶ್ರೀಮದ್ರಾಮಾಯಣನ ಮದುವೆಯಲ್ಲಿಯೂ ಪದ್ಮನಾಭೈಯನದೇ ಮುಂದಾಳ್ತನ.

ಆಗ ಕಟ್ಟೇಬೆಟ್ಟಿನಲ್ಲಿ ಹೇರಳವಾದ ಸಾಲವಾಗಿತ್ತು. ಈ ಸಾಲಕ್ಕೆಲ್ಲಾ ಜವಾಬುದಾರರಾದವರು ಪದ್ಮನಾಭೈಯ ಒಬ್ಬರೇ. ಕೆಲಸ ಜಾಣ-ಹುರುಪಿನ ಗಂಡುಸಾದ ಪದ್ಮನಾಭೈಯ ಎಷ್ಟು ಸಾಧಕರಾದರೂ ಕಲ್ಲಿನಲ್ಲಿ ಎಣ್ಣೆಯನ್ನು ತೆಗೆಯುವಂತೆ, ಗುಡ್ಡ-ಗಾಡುಗಳನ್ನು ಗದ್ದೆ—ತೋಟಗಳಾಗಿ ಮಾಡಬೇಕೆಂದು ಸಾಧನೆ ಮಾಡಿದುದೇ ಸಾಲಕ್ಕೆ ಕಾರಣವಾಯಿತು. ಪಾಪ! ಅವರು ತಮ್ಮ ಆಯುಷ್ಯವನ್ನು ಗಟ್ಟಿಯಾಗಿಯೇ ನಂಬಿರಬೇಕು! ಆದರೆ ನಿರ್ಭಾಗ್ಯರಾದ ಅವರ ಆಯುಃಸೂತ್ರವು ಆಕಸ್ಮಿಕವಾಗಿ ಹರಿದುಹೋದುದರಿಂದ "ಸಾಲಮಾಡಿ ಸತ್ತ" "ಬುದ್ಧಿವಂತಿಗೆ ಹೆಚ್ಚಾಯ್ತು" "ಎಲ್ಲಾ ಬಲ್ಲವನಿಂದ ಒಂದೂ ಆಗದು" ಎಂಬ ಕಳಂಕಗಳು ಅವರ ಹೆಸರಿಗೆ ಹತ್ತಿಕೊಂಡುವು. ಶ್ರೀಮದ್ರಾಮಾಯಣನ ಮದುವೆಯಾದರೂ ಅವರು ನೆನೆಸಿದಂತೆ ಆಗಿಬಿಡುತ್ತಿದ್ದರೆ ಆ ಕಳಂಕಗಳಿಗೆ ಅವಕಾಶವಾಗಿರುತ್ತಿದ್ದಿಲ್ಲ. ಅಯ್ಯೊ! ಯಾರು ಕಾಣುವರು ಅದೃಶ್ಯವಾಗಿ ಅವಿತಿರುವ ಆ ಭವಿಷ್ಯವನ್ನು?

ವರನಾದರೋ ಶ್ರೀಮದ್ರಾಮಾಯಣ! ಸಂಗೀತ ವಿದ್ವಾನ್! ಸಂಪಾದಿಸುವ ಉದ್ಯೋಗಿ! ಹರೆಯದ ಸ್ಫುರದ್ರೂಪಿ! ಇಂತಹ ವರನಿಗೆ ಕನ್ಯೆಯ

ಅಭಾವವಾದೀತೆ? ಎಂತೆಂತಹರೋ ಅವನಿಗೆ ಕನ್ಯೆಯನ್ನು ಕೊಡಲು ಒಂಟಿ ಗಾಲಿನಿಂದ ಕಾದಿದ್ದರು. ಆದರೆ ಸಾಲಗಾರರಾದ ಪದ್ಮನಾಭೈಯನ ಕಣ್ಣು, ಬರೀ ಕನ್ಯೆಯ ಮೇಲಿರದೆ, ಕನ್ಯೆಯೊಂದಿಗೆ ಬರುವ ಧನಸಂಪತ್ತಿನ ಅಳತೆಯ ಮೇಲೆಯೇ ಇತ್ತು! ಉಳಿದುದೆಲ್ಲಾ ಗೌಣವಿಷಯ. ಆದರೆ ಮಾಡುವು ದೇನು? ಎಲ್ಲಿ ರೂಪಸಂಪತ್ತಾದ ಕನ್ಯೆಯುಂಟೋ ಅಲ್ಲಿ ಧನಸಂಪತ್ತು ಲೋಪ! ಆದುದರಿಂದಲೇ ಕನ್ಯಾಶೋಧನೆ ಸ್ವಲ್ಪ ಉದ್ದವೇ ಆಯಿತು!

ಬೈಲಗುಡ್ಡೇ ಗ್ರಾಮಕ್ಕೆ ಹನ್ನೆರಡು ಮೈಲು ದೂರದಲ್ಲಿರುವ ಜಾವೆಟ್ಟೆ ನಲ್ಲಿದ್ದಾರೆ ಗುಂಟಾಚಲ ವೆಂಕುಪಂಡಿತರು, ಭಾರಿಯ ಶ್ರೀಮಂತರು. ವಯಸ್ಸು ೬೦ರ ಮನೆಗೆ ಬಂದ ಮುದುಕರು. ಅವರಿಗೆ ಗಂಡು ಸಂತತಿ ಯಿಲ್ಲ. ಮದುವೆಯ ಈಡು ಬಂದಿರುವ ಒಂದೇ ಒಂದು ಹೆಣ್ಣು ಮಾತ್ರವೇ ಅವರಿಗೆ. ಆದರೆ ಪಾಪ, ಆ ವಧು ಸ್ವಲ್ಪ ಕುರೂಪಿಯಂತೆ! ಆ ವಧುವನ್ನು ನೋಡಲು ಬರುವ ವರರ ಗಡಣವು ಮೂಗುಮುರಿದುಕೊಂಡು ಹಿಂದಿರುಗಿ ಹೋಗುತ್ತಿದ್ದಿತಂತೆ! ಆ ಏಕಮಾತ್ರ ತಂತುವನ್ನು ಯೋಗ್ಯ ಪಾತ್ರಕ್ಕೆ ಸಮ ರ್ಪಣೆ ಮಾಡಿ ತಾವು ಮುಕ್ತರಾಗಬೇಕೆಂದು ವೆಂಕುಪಂಡಿತರ ಕೋರಿಕೆ. ಆ ಸುತ್ತುಮುತ್ತಣ ವಠಾರದೊಳಗೆ ನಮ್ಮ ಶ್ರೀಮದ್ರಾಮಾಯಣನಂತಹ ಶ್ರೇಷ್ಠ ವರನು ಬೇರೊಬ್ಬನಿರಲೂ ಇಲ್ಲ. ಇದನ್ನರಿತು ತಂತ್ರಿ ಪಂಡಿತರು ಅವನಿಗೆ ತಮ್ಮ ಮಗಳನ್ನು ತಗಲಿಸಬೇಕೆಂದುಕೊಂಡು, ಮೂರನೆಯವರ ಮೂಲಕ ವಾಗಿ, ಈ ವಿಷಯವನ್ನು ಪದ್ಮನಾಭೈಯ್ಯನ ಕಿವಿಗೆ ಬೀಳಿಸಿದರು. ಕನ್ಯೆ ಯೊಂದಿಗೆ ಅವರ ಸರ್ವಾಸ್ತಿಯೂ ವರನ ಪಾಲಿಗೇ ಸೇರುವುದೆಂಬ ಸೂಚನೆ ಯನ್ನು ತಿಳಿಸಲಿಕ್ಕೂ ಮರೆಯಲಿಲ್ಲ. ಇಂತಹ ಸಂಬಂಧವನ್ನಲ್ಲವೇ ಪದ್ಮ ನಾಭೈಯ ಹೊಂಚುಹಾಕುತ್ತಿರುವುದು? ಈ ಶುಭವಾರ್ತೆ ಶ್ರೀಮದ್ರಾಮಾ ಯಣನನ್ನೂ ಆನಂದದ ಗಾಳಿಯಲ್ಲಿ ತೇಲಾಡಿಸಿತು. ಇಬ್ಬರೂ ಹೋಗಿ ಕನ್ಯೆಯನ್ನು ನೋಡಿ ಮಾತಾಡಿ ಬಂದುದೂ ಆಯಿತು. ಧನಾಗಮನದ ಸಂತೋಷದಲ್ಲಿ ಕನ್ಯೆ ಹೇಗೆ ಬೇಕಾದರೂ ಇರಲೆಂದುಕೊಂಡರು.

ಆದರೂ ಪದ್ಮನಾಭೈಯ ಅಲ್ಲಿಂದ ಹಿಂದಿರುಗುವಾಗ ವರನ ಮನೋ ಗತದೊಳಗೆ ಇಣಿಕಿ ಹಾಕದೆ ಬಿಡಲಿಲ್ಲ. "ಏನೋ ಮದ್ರಾಮಾ? ಮುಂದು ವರಿಸಬಹುದಷ್ಟೆ?"

"ಓಹೋ! ನನ್ನದೇನೂ ಆಕ್ಷೇಪವಿಲ್ಲ ಚಿಕ್ಕಪ್ಪಾ."

"ಹಾಗಲ್ಲ ನೋಡೊ; ಹುಡುಗಿ ಅಂದವಾಗಿಲ್ಲಾಂತ ಏನಾದರೂ—"

"ಹಾಗೇನೂ ಇಲ್ಲ. ನೀವು ಮುಂದುವರಿಸಿ."

"ಹಾಗನ್ನು! ಮಗನೆಂದರೆ ಹೀಗಿರಬೇಕು. ಭಾಗ್ಯವು ಬಂದು ಮನೆ ಬಾಗಿಲು ತಟ್ಟುವಾಗ ಹುಡುಗಿ ಚೆಂದವಿಲ್ಲವೆಂದು ಹಿಂದೆ ಮುಂದೆ ನೋಡಿದರೆ ಆಗುತ್ತದೆಯೇ? ಹೆಸರಿಗೊಂದು ಹೆಂಡತಿಯಾಯಿತೋ ಇಲ್ಲವೊ? ಹಾಗೂ ಮುಂದೆ ನಿನಗೆ ಚೆಂದಕ್ಕೆ ಬೇಕಾದರೆ, ಮಲೆಯಾಳೀ ನಾಯ್ಮಾರೀ ಸುಂದರಿಯನ್ನು ಸಂಬಂಧ ಮಾಡಿಕೊಂಡರಾಯಿತು, ಬಿಡು!"

"ಹಿ:! ಹಿ:! ಹಿ:!" ಎಂದು ಶ್ರೀಮದ್ರಾಮಾಯಣನು "ಅಷ್ಟೇ ಸರಿ" ಎಂಬ ಭಾವದಿಂದ ನಕ್ಕನು.

ಸರಿ. ಜಾತಕ ಈ ಮೊದಲೇ ಕೂಡಿಕೊಂಡಿತ್ತು. ಇನ್ನು ಮುಹೂರ್ತ ನಿಶ್ಚಯ ಆಗುತ್ತದೆ–ಆಗಿಲ್ಲ ಎನ್ನುವಷ್ಟರಲ್ಲಿ, ಅದೇನೋ ದೈವವು ಬೀಸುವ ಪ್ರತಿಕೂಲವಾತವೋ ಎನ್ನುವಂತೆ—

"ಹೌದೋ ಪದ್ಮಪ್ಪಯ್ಯಾ! ಆ ವೆಂಕು ಪಂಡಿತರ ವಿಚಾರ ಕೂಲಂಕಶವಾಗಿ ತಿಳಿದಿದ್ದೀರಾ? ಮುದುಕ ಸಾಮಾನ್ಯನಲ್ಲ! ಪಕ್ಕಾ ಪಾತಾಳ ತಂತ್ರಿ! ಅವನು ಮುತ್ತೊಟ್ಟಿ ಸುಬ್ಬಣ್ಣಯ್ಯನ ಮಗನನ್ನು ದತ್ತಕ್ಕೆ ಸ್ವೀಕರಿಸಿಕೊಂಡಿದ್ದಾನಂತಲ್ಲಾ? ಅಲ್ಲದೆ ಆಸ್ತಿ ಕೂಡಾ ಅವನ ತಂಗೀ ಮಕ್ಕಳಿಗೆ ಸೇರುವ ಹಾಗೆ ವಿಲ್ಲು ಕೂಡಾ ಬರೆದಿಟ್ಟದ್ದಾನಂತೆ! ನೋಡಿಕೊಳ್ಳೀ ಸ್ವಲ್ಪ ಆಳವಾಗಿ ಪುತ್ಥಳೀಯಂಥಾ ಶ್ರೀಮದ್ರಾಮಾಯಣನಿಗೆ *ಒಟ್ಟೆತೊಟ್ಟಿ ಹಿಡಿದ ಕುರೂಪಿ ಹೆಣ್ಣು ಸಿಕ್ಕಬಾರದೆಂತಲೇ ನಾನು ಎಚ್ಚರಿಸುವುದು" ಎಂದು ಸುಕ್ಕಾಡಿ ಸೀನಪ್ಪಯ್ಯ ಕಿವಿಬದಿಯಲ್ಲಿ ಬಾಯಿಹಾಕಿ ಗುಸುಗುಟ್ಟಿದುದನ್ನು ಕೇಳಿ ಪದ್ಮನಾಭೈಯ "ಹಾಗೊ?" ಎಂದು ಬೆಪ್ಪು ಬಿದ್ದು ಯೋಚನೆಗೆ ಉರುಳಿದರು.

ಆಗ ಅದೇ ಸೀನಪ್ಪಯ್ಯ—"ನನಗೆ ತೋರುತ್ತದೆ ಪದ್ಮಪ್ಪಯ್ಯಾ, ಗುಡ್ಡೇ ಕಿಟ್ಟಯ್ಯನವರಿಗೂ ಒಬ್ಬಳೇ ಮಗಳು ನೋಡಿ; ಕಿಟ್ಟಯ್ಯ ವೆಂಕು ಪಂಡಿತರಷ್ಟು ಆಸ್ತಿವಂತರಲ್ಲದಿದ್ದರೂ ಐವತ್ತು ಮುಡಿ ಹುಟ್ಟುವಳಿಗೇನೂ ಮೋಸವಿಲ್ಲ. ಹುಡುಗಿ ಕೂಡಾ ಆ ಪಂಡಿತರ ಕನ್ಯೆಗಿಂತ ಎಷ್ಟೋ ವಾಸಿ-" ಎಂದು ಉರುಳಿದವರಿಗೆ ತಮ್ಮ ಕೈಯನ್ನೆ ಕೊಟ್ಟರು.

ವಿಚಾರಾಂತದಲ್ಲಿ ಪದ್ಮನಾಭೈಯ,—"ಓ:! ಹೊ:! ಇರಲಿ ಸೀನಪ್ಪಯ್ಯ! ಆ ವೆಂಕುಪಂಡಿತನಲ್ಲಿಗೆ ಹೋಗಿ ಒಮ್ಮೆ ಖಾಡಾಖಾಡಿ ಮಾತಾಡಿ

---

* ಒಟ್ಟೆತೊಟ್ಟಿ = ಓಲೆಯಿಂದ ಹೆಣೆದ ತೂತಾದ ತುಕ್ಕೆ.

ಬರುತ್ತೇನೆ. ಇದರಲ್ಲಿ ಮುಚ್ಚುಮರೆಯೇಕೆ?" ಎಂದು ಸೀನಪ್ಪಯ್ಯನಿಗೆ ಅರ್ಧ ವಿರಾಮಕೊಟ್ಟು, ಸೀದಾ ಜಾವೆಟ್ಟಿಗೆ ನಡೆದು, ವೆಂಕುಪಂಡಿತರ ಇದಿರಿನಲ್ಲಿ ನಿಂತು, ತಮ್ಮ ಸಂದೇಹವನ್ನು ಬಿಚ್ಚಿ,—"ಏನಿದು ಪಂಡಿತರೆ? ಹೀಗೆಲ್ಲಾ ಸಮಾಚಾರವುಂಟಲ್ಲಾ! ಇದರ ತಥ್ಯ-ಮಿಥ್ಯವೇನು?" ಎಂದು ಕೇಳಿದರು.

"ಛೀ! ಛೀ! ಹಾಗೇನೂ ಇಲ್ಲವಲ್ಲ! ಯಾರೋ ನನಗಾಗದ ಪುಂಡರು ಹುಟ್ಟಿಸಿದ ಸುದ್ದಿಯದು.—" ಎಂದು ಬೆಚ್ಚಿಬಿದ್ದ ವೆಂಕುಪಂಡಿತರು ನಡುಗು ದನಿಯಿಂದ ಹೇಳುತ್ತಿರಲು, ಪದ್ಮನಾಭೈಯ—"ಅದೆಲ್ಲಾ ಹೋಗಲಿ ಪಂಡಿತರೇ; ಸಂದೇಹವಿಟ್ಟುಕೊಂಡು ಇಂತಹ ಶುಭಕೆಲಸಗಳನ್ನು ಮಾಡಲೇ ಬಾರದು. ನಿಮ್ಮ ಸರ್ವಾಸ್ತಿಯನ್ನೂ ಮೊದಲು ಹುಡುಗನ ಹೆಸರಿಗೆ ರಿಜಿಸ್ತ್ರಿ ಮಾಡಿಸಿಕೊಡಿರಿ. ಆ ಮೇಲೆಯೇ ಮದುವೆ. ಸಾಧ್ಯವೋ ಹೇಳಿರಿ."

"ಅಲ್ಲ-ಅದು-ಈಗ-ಅಷ್ಟು-ಅಲ್ಲಲ್ಲ-ಅಂದರೆ-ಬೇಕಾದರೆ......" ಎಂದು ಪಂಡಿತರು ತುಂಡು ತುಂಡಾಗಿ ತಡವರಿಸುವಾಗ, ಸರಿ ಬಿಡಿರಿನ್ನು! ನಿಮ್ಮ ಸಂಬಂಧ ಮುರಿಯಿತು" ಎಂದಂದು ಪದ್ಮನಾಭೈಯು ಅಲ್ಲಿಂದ ಹೊರಟೇ ಬಿಟ್ಟರು.

ಅಯ್ಯೋ! ಶ್ರೀಮದ್ರಾಮಾಯಣನಂತಹ ವರನು ತಪ್ಪುತ್ತಿರುವನಲ್ಲಾ ಎಂಬ ಕಸಿವಿಸಿಯಿಂದ ಪಂಡಿತರು—"ಓಯ್ ಪದ್ಮನಾಭಯ್ಯ! ಅಲ್ಲಾ ನಿಲ್ಲಿ ನಿಲ್ಲಿ! ಬೇಕಾದರೆ ವರದಕ್ಷಿಣೆ! ಐನೂರು ರೂಪಾಯಿ!—" ಎಂದು ಕೂಗಿದುದು ಪದ್ಮನಾಭೈಯನ ಕಿವಿಗೆ ಬಿತ್ತು. ಅದನ್ನು ಕೇಳಿ ತನ್ನೊಳಗೆ—"ಸರಿಯೇ! ವಾರ್ತೆ ಸುಳ್ಳಲ್ಲ. ವೇಷ ಬಯಲಾಯ್ತು! ಫುಃ! ವ-ರ-ದ-ಕ್ಷಿ-ಣೆ!" ಎಂದು ಪಂಡಿತರನ್ನು ತಿರಸ್ಕರಿಸಿಕೊಳ್ಳುತ್ತಾ ಹೊರಟೇ ಹೋದರು ಪದ್ಮನಾಭೈಯ.

ಅಲ್ಲಿಂದ ಹೊರಟವರು ನೆಟ್ಟಗೆ ಬಂದು ಮುಟ್ಟಿದುದು ಗುಡ್ಡೇ ಕಿಟ್ಟಯ್ಯನ ಮನೆಗೇ. ಇಲ್ಲಿಂದ ಕಟ್ಟೇಬೆಟ್ಟಿಗಿರುವುದು ಒಂದೇ ಮೈಲು. ಅಂತೆಯೇ ಸಂದೇಹಕ್ಕೇನೂ ಇಂಬಿಲ್ಲ. ಆ ಸಂಬಂಧವೇ ಶ್ರೀಮದ್ರಾಮಾಯಣನಿಗೆ ನಿಶ್ಚಯವಾಯ್ತು. ಮುಹೂರ್ತವೂ ಇಟ್ಟಿತು. ಇಲ್ಲಿ ಈ ವಧುವಿನ ಸೌಂದರ್ಯವು ಹೇಗೋ ಏನೋ ಎಂದು ಓದುಗರಿಗೆ ಸಂದೇಹವಾಗಬಹುದು. ಆದರೆ ಅದು ಮದ್ರಾಮ--ಪದ್ಮನಾಭರಿಗೇ ಮುಖ್ಯ ವಿಚಾರವಲ್ಲವಿರುವಾಗ ನಮಗೇನು ಹೇಳಿ? ಹೇಗಿದ್ದರೂ ಮದುವೆಯಲ್ಲಿ ವಧುವನ್ನು ನೋಡಿಯೇ ನೋಡುವಿರಿ!—

ಎಲ್ಲರಿಗೂ ದೊಡ್ಡಣ್ಣನಾಗಿರುವ ಶ್ರೀಮದ್ರಾಮಾಯಣನ ಮದುವೆಯೇ, ಮೊದಲನೇ ಮುಖ್ಯ ಮದುವೆಯಾದುದರಿಂದ, ಲಾಭದಾಯಕವಾದ ದೊಡ್ಡ ಸಂಬಂಧವೂ ಆದುದರಿಂದ, ಮನೆಯಲ್ಲಿ ವೈಭವಸನ್ನಾಹವೇ ನಡೆಯುತ್ತಿತ್ತು. ಹೆಚ್ಚಿನ ವೈಭವ ವಿಶೇಷಗಳೆಲ್ಲ ವಧುವಿನ ಮನೆಯವರಿಗೇ ಆದರೂ, ವರನ ಮನೆಯಲ್ಲಿಯೂ ಮಾಡಿದರೆ ಎಷ್ಟೋ ಮಾಡಬಹುದಲ್ಲವೆ? ಅಂತೆಯೆ ಕಟ್ಟಿಬೆಟ್ಟು ಮನೆಯಲ್ಲಿ ಚಪ್ಪರವಾಯಿತು, ತೋರಣವಾಯಿತು, ಜವುಳೀ ಸಾಮಾನು ಬಂತು, ಊಟದ ಜೀನಸುಗಳು ಬಂದುವು, ಒಕ್ಕಲುಗಳಿಂದಲೂ ಊರವರಿಂದಲೂ ಹೊರೆಗಳು ಬರುತ್ತಲೇ ಇವೆ. ಮಂಗಳ ದ್ರವ್ಯಗಳೂ ಬಂದಾಯಿತು. ಲೆಕ್ಕಪಟ್ಟಿಗಳು ಉದ್ದುದ್ದವಾಗುತ್ತಾ ಇದ್ದುವು. ನೆಂಟರು ಇಷ್ಟರು ಬಂದು ಬಂದು ಧಿಮಿಧಿಮಿ ಕೂಡುತ್ತಲೇ ಇದ್ದಾರೆ.........

ಇನ್ನೇನು ಮದುವೆಗೆ ಮೂರೇ ದಿನ ಎಂಬಷ್ಟರೊಳಗೆ, ಯಾರಿಗೆ ಗೊತ್ತಿತ್ತು ಈ ಸಾವಿನ ಸಮಸ್ಯೆ? ಬಂತೊಂದು ದೊಡ್ಡ ಮರಣದಂಡ! ಕಲ್ಲು ಗುಂಡಿನ ಹಾಗೆ ಗಟ್ಟಿಮುಟ್ಟಿಯಾಗಿದ್ದ ಆ ಕನ್ಯೆಯ ಚಿಕ್ಕಪ್ಪ, ಆಕಸ್ಮಿಕವಾಗಿ ಕಾಲುಜಾರಿ ದೇವಸ್ಥಾನದ ಕೆರೆಯೊಳಗೆ ಬಿದ್ದು, ಈಜುಬಾರದೆ ಮುಳುಗಿ, ಆ ಹಚ್ಚಹಗಲು ಮಧ್ಯಾಹ್ನದ ವೇಳೆಯಾದರೂ, ಯಾರಿಗೂ ಆ ಸಂಗತಿ ಗೊತ್ತಾಗದೆ ಹೋಗಿ, ಪ್ರಾಣವನ್ನು ಬಿಟ್ಟರು. ಕನ್ಯೆಯ ಮನೆಗೆ ಸೂತಕ ಬಂತು. ನಿಶ್ಚಿತಾರ್ಥವಾದ ಮೇಲೆ ಸಾವು ಬಂದರೆ ಆ ಮನೆಯ ಕನ್ಯೆಯನ್ನು ತರುವುದು ಅಮಂಗಲವಂತೆ; ಇದೊಂದು ರೂಢಿ. ಆದುದರಿಂದ ಬೇಸಿಗೆ ಯಲ್ಲಿ ಬಿದ್ದ ಸಿಡಿಲಿನ ಹಾಗೆ ಮದುವೆ ಗಪ್ಪನೆ ನಿಂತುಹೋಯಿತು. ದೇವ ಸ್ಥಾನದ ಕೆರೆಯಲ್ಲೇ ಹಾಗಾಗಬೇಕಾದರೆ ಅದು ದೈವಚಿತ್ತವಲ್ಲದೆ ಬೇರೇನಿದೆ?

೧೫

ಮುಂದಾಗಿಯೇ ಇದನ್ನು ಅಪಶಕುನವೂ ಸೂಚಿಸಿತ್ತೆಂದು ಆ ಮೇಲೆ ಗೊತ್ತಾಯಿತು. ವರನು ಕನ್ಯೆಯನ್ನು ನೋಡಲು ಕಿಟ್ಟಯ್ಯನವರಲ್ಲಿಗೆ ಹೋದಾಗ ಆ ಹುಡುಗಿ ಊಟಮಾಡುತ್ತಿದ್ದಳಂತೆ. ಮತ್ತೊಂದು ಬಾರಿ ಎಣ್ಣೆ ಹಚ್ಚಿಕೊಳ್ಳುತ್ತಿದ್ದಳಂತೆ. ಈ ಕೆಟ್ಟ ಶಕುನಗಳನ್ನು ಲಕ್ಷಿಸದೆ ಕೆಲಸ ಮುಂದುವರಿಸಿದುದೇ ಮೋಸವಾಯಿತಂತೆ. ಪದ್ಮನಾಭಯ್ಯನಿಗೆ ದೊಡ್ಡ ಪೇಚಾಟಕ್ಕಿಟ್ಟಿತು. ಮದುವೆಯನ್ನು ನಿಲ್ಲಿಸಿ ಮುಂದೆ ನಿಧಾನವಾಗಿ ಮಾಡೋಣವೆಂದರೆ ಎಷ್ಟು ನಷ್ಟ? ಆ ಪಲ್ಯಕಾಯಿಗಳ ರಾಶಿ, ಆ ತುಪ್ಪದ

ಚೆರಿಗೆ, ಆ ಎಣ್ಣೇಡಬ್ಬಿ, ಸಕ್ಕರೆಯ ಸಂಚಿ, ಧಾನ್ಯಗಳ ಮೂಟೆ, ಬಾಳೆ ಯೆಲೆಯ ಕಟ್ಟು, ಜವುಳಿಸಾಮಾನು ಇನ್ನೆಷ್ಟೊ ಚಿಲ್ಲರೆ—ರಖಮುಗಳು! ಇವನ್ನೆಲ್ಲಾ ಏನು ಮಾಡುವುದು? ಯಾವ ವಿವಾಹೋದ್ಯೋಗಿಗಳಿಗೆ ಕೊಡು ವುದು? ಸಾಲದ ತಲೆಹೊರೆಯ ಮೇಲೆ ಈ ಸಾಮಾನಿನ ನಷ್ಟವನ್ನು ಹೇಗೆ ತರಹರಿಸುವುದು? ಅಣ್ಣ ರಾಮಪ್ಪಯ್ಯ ತಮ್ಮನನ್ನು ನೋಡಿ—"ನಾನೊಂದೂ ಅರಿಯೆ, ಪದ್ಮನಾಭಾ! ನೀನೇ ಏನಾದರೂ ನಿವೃತ್ತಿ ಮಾಡೋ!" ಎಂದು ತಮ್ಮನ ಮೇಲೆಯೇ ಭಾರವನ್ನು ಬಿಟ್ಟು, ಜಗಲಿಯ ಬದಿಯಲ್ಲಿ ತಲೆಯ ಮೇಲೆ ಕೈಯಿಟ್ಟುಕೊಂಡು ಕುಳಿತುಬಿಟ್ಟರು.

"ಈ ಹುಟ್ಟು—ಸಾವಿನ ರಗಳೆಗಾಗಿಯೇ ಮದುವೆ ಮುಂಜಿಗೆಲ್ಲಾ ಎಂಟು ದಿನಗಳ ಮುಂಚೆಯೇ ನಾಂದಿ ಇಡಬೇಕಂತ ಮಾಡಿರೋದು ಹಿರಿ ಯರು! ನಾನೆಷ್ಟು ಬಡಕೊಂಡೇ ನಾಂದಿ ಇಡೀ ಇಡೀ ಅಂತ! ಕೇಳಿದಿರಾ? ಅವರೂ ಕೇಳಲಿಲ್ಲ, ಇವರೂ ಕೇಳಲಿಲ್ಲ; ಅಪಶಕುನ ನಾನೂ ಗಣ್ಯ ಮಾಡ್ಲಿಲ್ಲಾ! ದೇವರನ್ನೆ ಗಂಟಿನಲ್ಲಿ ಹಾಕಿ ಮೂಲೇಲಿಟ್ಟ ಹಾಗೆ ನಾಂದಿ ಬೇಡ, ಗೀಂದಿ ಬೇಡ; ಎಲ್ಲಿಯೂ ಹಡಿಯೋದಿಲ್ಲ, ಯಾರೂ ಸಾಯೋದಿಲ್ಲ, ಅಂತ ಹಾರಿಸಿಬಿಟ್ಟಿರಿ ನನ್ನ ಮಾತ; ಈಗ ಗೊತ್ತಾಯ್ತಾ ಇಲ್ಲ?"—ಎಂದು ಬೈಲಕರೇ ದೊಡ್ಡಮ್ಮ ತಮ್ಮ ಸಹಜ ತೀಕ್ಷ್ಣವಾದ ಬಿಗಿಲ ಸ್ವರದಿಂದ ಉದ್ದ ವಾದ ರಾಗಾಲಾಪನೆ ಮಾಡಿದರು.

"ನಿಮ್ಮ ನಾಲಗೆ ಕೆಟ್ಟ ನಾಲಗೆ ಸೇದಿಹೋಗ!" ಎಂದು ಅದನ್ನು ಅಬ್ಬರದಿಂದ ಪ್ರತಿಭಟಿಸಿದಳು ತುಂಗಕ್ಕ.

ಅಷ್ಟರಲ್ಲಿ ಇಂತಹದು ಎಷ್ಟೋ ನೋಡಿ ಕೇಳಿ ಅನುಭವಶಾಲಿಗಳಾದ ಅಕ್ಕತ್ತೆ, ನಿಜವಾದ ಗುಟ್ಟನ್ನು ಹೀಗೆಂದು ರಟ್ಟು ಮಾಡಿದರು--ತಮ್ಮ ಸಹಜ ವಾದ ಶಾಂತರಾಗದ ದನಿಯಿಂದ-"ಮದುವೆ ಅಂದರೇ ನಾವು ಮಾಡೋದೂ ಅಲ್ಲಾ ನೀವು ಮಾಡೋದೂ ಅಲ್ಲಾ ಯಾರು ಮಾಡೋದೂ ಅಲ್ಲಾ! ನಾವೆಲ್ಲಾ ಒಂದೊಂದು ಬೊಂಬೆಗಳ ಹಾಗೆ ಓಡಾಡಿಕೊಂಡಿರುವಾಗ, ಆ ಬ್ರಹ್ಮ ಬರೆದ ಲಿಪೀ ಹಾಗೆ ಕೂಡಿಕೊಂಡು ಬರಬೇಕು ಯೋಗ! ಶ್ರೀಮದ್ರಾ ಮಾಯಣನ ಕೈ ಹಿಡಿಯುವ ಪುಣ್ಯಾತ್‌ಗಿತ್ತಿ ಇನ್ನೊಬ್ಬಳು ಯಾರೋ ಎಲ್ಲಿಯೋ ಮಾಲೆ ಹಿಡಿದುಕೊಂಡು ಕಾದಿರುವಾಗ ಈ ಕಿಟ್ಟಯ್ಯ ವೆಂಕು ಪಂಡಿತರ ಮಕ್ಕಳಿಗೆಲ್ಲ ಹ್ಯಾಗೆ ಬಂದೀತು?"

ಇಂತು ಅನೇಕ ವಿಧವಾಗಿ ಮಾತಾಡಿಕೊಳ್ಳುತ್ತಿರುವಾಗ, ಕೆಲವರು ಹಿಂದಿನಿಂದ ಆಚೀಚೆ ಕುಚಕುಚನೆ—"ಅಷ್ಟೀಪಾಷ್ಟೀ ಅಂತ ಅತ್ಯಾಶೆಗೆ ಹೋದರೆ ಆಗುವ ಗತಿ ಹೀಗೆಯೇ!" ಎಂದು ಕಿವಿಕಚ್ಚಾಡುತ್ತಿದ್ದರು.

ಯಾರೇನೆಂದರೇನು? ಪದ್ಮನಾಭೈಯನ ಚಿಂತೆಗೆ ಮೇರೆಯೇ ಇಲ್ಲ. ತಯಾರಾಗಿರುವ ಈ ಸಾಹಿತ್ಯ ಸರಂಜಾಮುಗಳ ನಷ್ಟಕ್ಕೆ ಏನು ದಾರಿ? ಎಲ್ಲ ಭಾರ ಅವರ ಮೇಲೆ ಬಿದ್ದು—

ಕಟ್ಟಕಡೆಗೆ ಪದ್ಮನಾಭೈಯು ದೃಢಸ್ವರದಿಂದ ಬಾಯಿಬಿಟ್ಟು "ಹು, ಬುದ್ಧಿ ಬಂತು! ಅತಿಯಾಸೆ ಗತಿಗೇಡು! ಏನೇ ಆಗಲಿ! ಇಟ್ಟ ಮುಹೂರ್ತಕ್ಕೆ ತಪ್ಪದೆ ಶ್ರೀಮದ್ರಾಮಾಯಣನಿಗೆ ಮದುವೆ ಮಾಡಿಯೇ ತೀರಬೇಕು" ಎಂದು ಪಣ ತೊಟ್ಟುಬಿಟ್ಟರು. ಇದನ್ನು ಕೇಳಿ ರಾಮಪ್ಪಯ್ಯ—"ಆದರೆ ತಮ್ಮಾ, ಕನ್ಯೆ ಪಕ್ಕನೆ ಎಲ್ಲಿ ಸಿಕ್ಕೀತು? ಇನ್ನಿರುವುದು ಮೂರೇ ದಿನ!" ಎಂದರು ನಿರಾಶೆಯಿಂದ.

ಈ ಸಂಘದ ಸುಳಿವನ್ನು ತಿಳಿದು, ನಸ್ಯವನ್ನು ಎಳೆದು ಮೂಗನ್ನು ಉಜ್ಜಿಕೊಳ್ಳುತ್ತಾ ಎದ್ದು ಬಂದ, ಕಚ್ಚೀಮನೆ ಭಟ್ಟಾಚಾರ್ಯರು ತಮ್ಮ ನಿಜವಾದ ಅಚ್ಯೊತ್ತಿದಂತಹ ಸ್ವರದಿಂದ—"ಓಯ್ ಪದ್ಮನಾಭೈಯ! ಹುಡುಗಿ ಸಿಕ್ಕುವದಿಲ್ಲವೆಂದರೇನಯ್ಯ ಮನ್ಮಥನಂಥಹ ಶ್ರೀಮದ್ರಾಮಾಯಣನಿಗೆ? ಯಾರಾದರೂ ತಂದು ಧಾರೆ ಎರೆದು ಕೊಟ್ಟಾರು ತಂದು! ಮುಖ್ಯ ಜಾತಕದಲ್ಲಿ ಆಗಿರಬೇಕು ಅಷ್ಟೇ!" ಎಂದು ಪದ್ಮನಾಭೈಯನ ಬೆನ್ನನ್ನು ತಡವಿದರು.

ಇದನ್ನು ನೋಡಿ ಅಲ್ಲಿಯೇ ಆಚೆ ವೀಳ್ಯದ ತಟ್ಟೆಯ ಮುಂದೆ ಕುಳಿತಿದ್ದ ಭಪ್ಪಾರೀ ಗೋವಿಂದ್ರಾಯರು, ವೀಳ್ಯದ ಬಾಯಿಯೊಳಗೆ ಎರಡು ಅಡಿಕೇ ಹೋಳುಗಳನ್ನೆಸೆದುಕೊಂಡು, ಮತ್ತೊಂದು ವಿಳ್ಯದೆಲೆಯನ್ನು ತೊಡೆಗೆ ಒರೆಸಿಕೊಳ್ಳುತ್ತಾ ಎದ್ದು, ಸುಣ್ಣದ ಚಿಹ್ನೆಯ ಬೆರಳಿನಿಂದ ಅಭಿನಯ ಮಾಡುತ್ತ, ಅಡಿಕೆಯ ಹೋಳಿನಿಂದ ನಾಲಗೆ ತಡವರಿಸಲು,—"ಜಾಟಕ್ಕಕ್ಕೇಣಯ್ಯಾ ಟ್ಟಾಮ? ಣಮ್ಮ ಅಯಗಂಡ ಮಾಟ್ರಲ್ಲಿಗೆ ಓಡ್ರೆ ಣೂರಾರು ಜಾಟಕ ಬಿಡ್ಡಡೇ" ಎಂದು ಮುಖ್ಯ ಸೂಚನೆಯಿತ್ತರು.

"ಸರಿ. ಹಳಗಂಡ ಮಾಸ್ತರ್ರನ್ನು ಕಂಡುಬಿಟ್ಟರೆ ಮದುವೇ ಚಪ್ಪರದಲ್ಲಿ ಪರಮಾನ್ನ ಹರಿಯೋದೇ ಸರಿ" ಎಂದು ಪದ್ಮನಾಭೈಯನಿಗೂ ಖಚಿತವಾಯಿತು. ಹೋಯಿತು ಪದ್ಮನಾಭೈಯನ ಮುಖಂಡತ್ವದಲ್ಲಿ ಹಳಗಂಡ ಮಾಸ್ತರ್ರ ಮನೆಗೆ ಸಣ್ಣದೊಂದು ಹುರುಪಿನ ಗುಂಪು.

"ಹಳಗಂಡ" ಮಾಸ್ತರ್ ಎಂದರೆ, ಪುರೋಹಿತರನ್ನು ಬಿಟ್ಟರೆ ಅವರೇ ಆ ಪ್ರಾಂತಕ್ಕೆಲ್ಲಾ ಗುರು. ಈಗ ಪ್ರಚಲಿತರಾಗಿರುವ ಮಾಸ್ತರ್-ಹೆಡ್ಮಾಸ್ತರ್ರಿಗೆಲ್ಲಾ ಅವರೇ ಮೂಲ ಮಾಸ್ತರ್. ಈಗ ಅವರು ಮುದುಕರಾದರೂ ಕಳಾಭೂಷಣೀ ಪಾಠಶಾಲೆ ಹುಟ್ಟುವುದಕ್ಕೆ ಮೊದಲು, ಮೊತ್ತ ಮೊದಲು ಗ್ರಾಮಶಾಲೆಯನ್ನು ತೆರೆದವರೇ ಅವರು. ಅವರ ಸ್ವಂತ ಹೆಸರು ಏನೋ ಅವರಿಗೇ ಗೊತ್ತು. ಅವರು ಕನ್ನಡ ಭಾಷೆಯಲ್ಲಿ ನುರಿತ ಪಂಡಿತರಾದುದರಿಂದ ಆಗ "ಕನ್ನಡ ಮಾಸ್ತರು" ಎಂದು ಕರೆಯಲ್ಪಟ್ಟರು. ಅನಂತರ ಕಳಾಭೂಷಣೀ ಪಾಠಶಾಲೆ ಪ್ರಾರಂಭವಾಗಿ ಅಲ್ಲಿ ತಮ್ಮ ಹಳೇ ವಿದ್ಯಾರ್ಥಿಗಳ ಗುರುಪದವಿಯನ್ನು ನೋಡುತ್ತಾ ಗೌರವಾರ್ಹರಾಗಿದ್ದರು. ಆಗ ಅವರ ಹೆಸರು ತನ್ನಂತಾನೇ ಹಳೆಗನ್ನಡ ಮಾಸ್ತರು ಎಂದು ಬದಲಾವಣೆ ಹೊಂದಿತು. ಈ ಹಳೆಗನ್ನಡ ಮಾಸ್ತರೇ ಊರವರ ಬಾಯಿಯಲ್ಲಿ ಹಳಗಂಡ ಮಾಸ್ತರ್ ಆಗಿ ಮೆರೆಯುತ್ತಿದ್ದಾರೆ.

ಅವರು ಬರಿಯ ಮಾಸ್ತರ್ ಮಾತ್ರರೂ ಅಲ್ಲ; ಮಂತ್ರವಾದಿಗಳು, ಜೋಯಿಸರು, ಘಟಕರು, ಕೋರ್ಟು ಕಾನೂನಿನ ಒಕ್ಕಣೆ—ಲೆಕ್ಕಣೆಗಳನ್ನು ಬಲ್ಲವರು; ಯಕ್ಷಗಾನ ಪ್ರಸಂಗಿಗಳು; ಹಾಡುಗಾರರು; ಕತೆಗಾರರು, ಕವಿ! ಕಳಾಭೂಷಣೀ ಪಾಠಶಾಲೆಗೆ ಬೇಕಾದ ಹಾಡುಗಳನ್ನು ಅವರೇ ಕಟ್ಟಿ ಹೊಸದು ಹೇಳಿಸಿಯೂ ಕೊಡುವವರು. ಅವರು ಯಾವಾಗಾದರೊಮ್ಮೆ ಕಳಾಭೂಷಣೀ ಶಾಲೆಗೆ ಬಂದರೆ, ಏನಾದರೊಂದು ಹಾಡನ್ನು ಅಭಿನಯ ಪೂರ್ವಕವಾಗಿ ಹುಡುಗರಿಂದ ಹೇಳಿಸದೆ ಬಿಡುವುದೇ ಇಲ್ಲ. ನಮ್ಮ ತಿಮ್ಮನು ಕೊಡೆಯನ್ನು ವೀಣೆಯಂತೆ ಹೆಗಲಿಗಾನಿಸಿ ಹಿಡಿದುಕೊಂಡು"ಪೂನಾದಿಂದ ನಾನೂ ತಂದ, ವೀಣೇ ಕಾಣೀರೋ! ಒಳ್ಳೆ—ವೀಣೇ ಕಾಣೀರೋ!" ಎಂದು ರಾಗ ಎಳೆದು ಇದು ಹಳಗಂಡ ಮಾಸ್ತ್ರು ಹೇಳಿ ಕೊಟ್ಟದ್ದು ಅನ್ನುತ್ತಾನೆ.

ಇಷ್ಟು ಮಾತ್ರವೂ ಅಲ್ಲ, ಊರಿಗೆಲ್ಲ ಅವರು ಪರೋಪಕಾರಿಗಳು. ಊರೊಳಗಿನ ಗತಿಹೀನರಾರಾದರೂ ಪರದೇಶದಲ್ಲಿ ಸತ್ತು ಹೋದರೆ, ಅವರ ಪರವಾಗಿ ಅತ್ತು ಹೊರಡಲು ಯಾರೂ ಇಲ್ಲದಿದ್ದರೆ, ಅತ್ತು ಹೊರಡಲು ದಯಾಘನರಾದ ಹಳಗಂಡ ಮಾಸ್ತರರಿದ್ದಾರೆ. ಕುರುಡಿ, ಕಾಳಿ, ಕುಂಟಿ ಮುಂತಾದ ಗಂಡ ಬಾರದ ಹುಡುಗಿಯರಿಗೆ, ಆ ಕನ್ಯಾಪಿತರು ಸಂಕಟ ಪಡದಂತೆ, ಹಳಗಂಡ ಮಾಸ್ತರು ಘಟ್ಟಬೆಟ್ಟ ನಾಡುಗಳ ಕಡೆಯ ಕರಡುಕೊರಡು

ಮುದುಕರಿಗಾದರೂ ಕಲ್ಯಾಣಕಾರಕರಾಗುತ್ತಾರೆ. ಬೈಲಗುಡ್ಡೆ ಗ್ರಾಮದೊಳಗಿನ ಒಬ್ಬಳು ಬೆದ್ದಕೊಂಞ ಹುಡುಗಿಗೆ ಎಲ್ಲಿಂದಲೂ ಗಂಡಬಾರದೆ, ಚಿಂತೆಗೀಡಾಗಿದ್ದಾಗ, ದಯಾಘನ ಮಹಾಮಾನಸರಾದ ಹಳಗಂಡ ಮಾಸ್ತರು, ತಮ್ಮ ಜಾತಕವನ್ನೂ ಆ ಹುಡುಗಿಯ ಜಾತಕವನ್ನೂ ನೋಡಿ, ಹುಡುಗಿಗೆ ಪುತ್ರ ಸೌಭಾಗ್ಯವಿರುವುದನ್ನು ಮನಗಂಡು, ತಾವೇ ಆ ಹುಡುಗಿಯನ್ನು ಧಾರೆ ಪಡೆದುಕೊಂಡು, ಮರ್ಯಾದೆ ಕಾಪಾಡಿದ್ದಾರೆ. ಈ ಪ್ರಕಾರವಾಗಿ ಅವರಿಗೆ ನಾಮಮಾತ್ರ ಹೆಂಡತಿಯರು ನಾಲ್ಕುಮಂದಿ ಇದ್ದಾರಂತೆ!— ಇಂತಹ ಗ್ರಾಮ ಸ್ನೇಹಿತರಾದ ಆ ಮಹಾಮಹಿಮ ಹಳಗಂಡ ಮಾಸ್ತರ ಮನೆಗೆ, ಆ ಪದ್ಮನಾಭೈಯಾದಿಗಳು ಹೋಗಲು—

ಆಗ ಸಮಯ ಅಪರಾಹ್ನವಾಗಿತ್ತು. ಹಳಗಂಡ ಮಾಸ್ತರು ಜಗಲಿಯಲ್ಲೇ ಕುಳಿತಿದ್ದರು. ತಮ್ಮ ಬಡ ಮನೆಗೆ ನೆಂಟರ ಗುಂಪು ಬಂದದ್ದು ನೋಡಿ, ಗಡಿಬಿಡಿಯಿಂದೆದ್ದು ಚಾವಡಿಯಲ್ಲಿ ಒಂದು ಹಳೆಯ ಚಾಪೆಯನ್ನು ಹಾಸಿ ವೀಳ್ಯದೆಲೆಯ ಹರಿವಾಣವನ್ನು ನಡುವಿನಲ್ಲಿಟ್ಟರು......ಈ ಪ್ರಕಾರ ಪೂರ್ವೋಪಚಾರದ ಮಾತುಕತೆಗಳಾದ ಮೇಲೆ ಅವರ ಆಗಮನದ ಕಾರಣವನ್ನು ತಿಳಿದುಕೊಂಡು, ಮಾಸ್ತರು ತಮ್ಮ ಮೂಗಿನ ಮೇಲೆ ಒಡಕು ಕನ್ನಡಕವನ್ನು ಏರಿಸಿ, ಅದರ ದಾರವನ್ನು ಕಿವಿಗೆ ಸುತ್ತಿಕೊಂಡು, ತಮ್ಮ ದಪ್ತರದ ಕಟ್ಟಿನೊಳಗಿನಿಂದ ಕೆಲವು ಹೆಣ್ಣು ಜಾತಕಗಳನ್ನು ತೆಗೆದು ಬಿಡಿಸಿಕೊಂಡು ಶ್ರೀಮದ್ರಾಮಾಯಣದ ಜಾತಕದೊಡನೆ ಹೋಲಿಸಿ ಪರಿಶೀಲನೆ ಮಾಡುತ್ತಿರುವಾಗ, ಈ ಸಮಾಚಾರ ಪರಂಪರೆಗಳೆಲ್ಲಾ ಹಾಡೀಕಾಡು ಕೇಶವಯ್ಯನವರ ಕಿವಿಗೆ ಅಮೃತಧಾರೆಯಾಗಿ ಸುರಿಯಿತು!

ತತ್‍ಕ್ಷಣವೇ ಕೇಶವಯ್ಯ ಬಾಯಿಬಿಟ್ಟು "ಗಾಳಿ ಬಂದಾಗಲೇ ತೂರಿಕೊಳ್ಳಬೇಕು" ಎಂದು ಗಟ್ಟಿಯಾಗಿ ಕೂಗಿ, ಗೂಟದಲ್ಲಿದ್ದ ಅಂಗವಸ್ತ್ರವನ್ನು ಮೈಮೇಲೆ ಎಳೆದೇರಿಸಿಕೊಂಡು, ಕೈಯಲ್ಲಿ ಮೋಂಟು ದಂಟೆಯನ್ನು ಹಿಡಿದುಕೊಂಡು, ತಮ್ಮ ಮನೆಯಿಂದ ಇಳಿದು, ಬಯಲನ್ನು ದಾಟಿ, ಬೀದಿಗೆ ಹತ್ತಿ, ಬೇಗಬೇಗನೆ ನಡೆದು, ಬೀದಿಯ ಬದಿಯಲ್ಲೇ ಇರುವ ಹಳಗಂಡ ಮಾಸ್ತರ್ರ ಅಂಗಳಕ್ಕೆ ಹೊಕ್ಕು, ದಂಟೆಯನ್ನೊಮ್ಮೆ ಬಲವಾಗಿ ನೆಲಕ್ಕೆ ಕುಟ್ಟಿ, ಚಾವಡಿಗೆ ಹತ್ತಿ, ಮಾಸ್ತರ್ರ ಪಕ್ಕದಲ್ಲಿ ಅವರ ಮೈಗೆ ಮೈ ಹಚ್ಚಿದ ಹಾಗೆ ಕುಳಿತು, ತಮ್ಮ ಉಡಿಯೊಳಗಿಂದ ಒಂದು ಓಲೆಯನ್ನು ತೆಗೆದು, ಮಾಸ್ತರ್ರ ಮುಂದಿಟ್ಟು, ಅಲ್ಲಿ ಹರಡಿರುವ ಜಾತಕದೋಲೆಗಳನ್ನೆಲ್ಲ ದೂರ ಸರಿಸಿ, "ಅದೆಲ್ಲಾ ಸರಿ

ಹೋಗಲಿಕ್ಕಿಲ್ಲಯ್ಯ ಮಾಸ್ತ್ರೆ! ಎಲ್ಲಾ ಮೊದಲೊಮ್ಮೆ ನೋಡಿದ್ದೇ ಅಲ್ಲವೋ? ಈ ಜಾತಕ ನೋಡಿ, ನಮ್ಮ ಶ್ರೀಮದ್ರಾಮಾಯಣಸಿಗೆ ಹ್ಯಾಗಿದೇ ಅಂತ?" ಎಂದರು ತಮ್ಮ ಕಂಚಿನಂಥ ಧ್ವನಿಯಿಂದ! ಎಲ್ಲರೂ ಚುಪ್ಪು! ಬೆರಗು! ಮೂಕು!

ಹಳಗಂಡ ಮಾಸ್ತರು ಒರಿ ಹಚ್ಚಿಹಚ್ಚಿ ಪರಿಶೀಲನೆ ಮಾಡಿದರು. ತಲೆದೂಗಿದರು. ಕಡೆಗೆ "ಇದು ಸರ್ವೋತ್ಕೃಷ್ಟವಾಗಿದೆ" ಎನ್ನುತ್ತಾ ಜಾತಕಗಳನ್ನು ಕೆಳಗಿಟ್ಟು ಮೂಗಿನ ಕನ್ನಡಕವನ್ನು ಜಾರಿಸಿದರು.

ಕೇಶವಯ್ಯನವರು ಗೆಲುನೋಟದಿಂದ ಪದ್ಮನಾಭೈಯನ ಮುಖವನ್ನು ನೋಡುತ್ತ—"ಸರಿ. ಇನ್ನು ತಡವೇಕೆ ಪದ್ಮನಾಬ್ಬಾವಾ? ಶುಭಸ್ಯ ಶೀಘ್ರಂ!" ಎಂದರು.

ಪದ್ಮನಾಭೈಯನಿಗೆ ಸರಿಯಾಗಿ ಅರ್ಥವಾಗದೆ, ಪ್ರಶ್ನಾರ್ಥಕ ದೃಷ್ಟಿಯಿಂದ ಹುಬ್ಬೆತ್ತಿ ಕೇಶವಯ್ಯನನ್ನು ನೋಡಲು, ಛಪ್ಪಾರೀ ಗೋವಿಂದ್ರಾಯರು ಕೇಶವಯ್ಯನನ್ನು ಕುರಿತು, ಮೇಲುದನಿಯಿಂದ—"ಹೌದಾ, ಕೇಶವಯ್ಯ! ನಿಮಗೆ ಪೂರಾ ಗಂಡು ಸಂತತಿಯೇ ಇರುವಾಗ, ಅದು ಎಲ್ಲಿಂದಯ್ಯ ಬಂತು ಧಾರೆಯೆರೆದು ಕೊಡುವ ಅಧಿಕಾರ?"

ಕೇಶವಯ್ಯ ಅದೇ ಕಂಚಿನ ಖಣೀಲೆಂಬ ಧ್ವನಿಯಿಂದ "ಹ್ಯಾಗೆಂದರೆ? ಓಹೋ! ನನ್ನ ಸಾಕು ಹುಡುಗಿಯ ತಂದೆ ಮಲೆಯಾಳದಲ್ಲಿದ್ದಾನೆಂತಲೊ? ಇರಲೀ! ಹುಡುಗಿಯ ತಂದೆ ಮದುವೆ ನಿಶ್ಚಯ ಮಾಡೂ ಅಂತ ನನಗೆ ಕಾಗದ ಬರೆದಿದ್ದಾನೆ ಗೊತ್ತೊ? ಈಗ ಆಕಸ್ಮಾತ್ ಬಂದ ಯೋಗವನ್ನು ಬಿಡಬಹುದೋ ಹೇಳಿ? ಜಾತಕದಲ್ಲಿಯೂ ಹಾಲಿಗೆ ಹೆಪ್ಪು! ಹುಡುಗಿಯೂ ಚಿಂತೆಯಿಲ್ಲ! ಚಿನ್ನಾಭರಣವೂ ಉಂಟು! ಇನ್ನೇನಯ್ಯ ಬೇಕು? ಈಗ ಇಂಥಾ ಸಂದರ್ಭವನ್ನು ಬಿಟ್ಟರೆ ಹುಡುಗಿಯ ತಂದೆ ನನ್ನನ್ನು ಹುಚ್ಚಾ ಅಂದಾನು! ಹುಚ್ಚಾ ಅಂತ!"

ಛಪ್ಪಾರ್ರು ಮತ್ತೂ ಕೆದರಿದರು:—"ಹೌದಯ್ಯಾ ಹುಡುಗಿಯ ತಂದೆ ಬರಬೇಕೋ ಬೇಡವೋ ಮಲೆಯಾಳದಿಂದ? ಅಲ್ಲದೆ ಹುಡುಗಿಯ ತಾಯಿ ತಂದೆ ಅಣ್ಣತಮ್ಮಂದಿರೆಲ್ಲಾ ತೆಂಕಲಾಗಿಯೇ ಇದ್ದಾರಲ್ಲ?"

"ಇದ್ದರೇನಾಯ್ತು? ತಂತಿ ಬಿಡುವಾ! ಹಕ್ಕಿಗಳ ಹಾಗೆ ಹಾರಿಕೊಂಡು ಬರುತ್ತಾರೋ ಬರಲೀ! ಮದುವೆಯೇನೋ ನಮ್ಮ ಪದ್ಮನಾಬ್ಬಾವಾ ಇಟ್ಟ

ಮುಹೂರ್ತಕ್ಕೆ ಜರುಗಿ ಬಿಡಬೇಕು. ಧಾರೆಯೆರೆಯುಲಿಕ್ಕೆ ಹುಡುಗಿಯ ಚಿಕ್ಕಪ್ಪನಾದ ನನಗೂ ಅಧಿಕಾರ ಉಂಟೇ ಉಂಟು! ನಾನೇ ಎರೆಯುವೆ! ಮುಂದೆ ಗಂಡ ಹೆಂಡಿರು ಅಂದ-ಚೆಂದವಾಗಿರುವಾಗ ಅವರೆಲ್ಲಾ ಬಂದು ನೋಡಿ ಸಂತೋಷಪಟ್ಟು ಆಶೀರ್ವಾದ ಮಾಡಲಿ!" ಎಂದರು ಕೇಶವಯ್ಯ ಎದೆಯುಬ್ಬಿಸಿಕೊಂಡು.

"ಶಾಭಾಸ್ ಕೇಶ್ ಭಾವಾ!—"ಎಂದರು ಪದ್ಮನಾಭೈಯ.

"ಹೌದಾ—ಕೇಶವಯ್ಯ! ಸರಿಯಾಗಿ ಯೋಚನೆ ಮಾಡಿದಿರಾ? ಮುಹೂರ್ತಕ್ಕೆ ಇರುವುದಿನ್ನು ಎರಡನೇ ದಿನ, ಮಧ್ಯದಲ್ಲಿ ನೀವು ಸನ್ನಾಹ ಮಾಡುವುದಾದರೂ ಎಂಥದ್ದೈಯಾ ಕೇಶವಯ್ಯಾ? ಅಲ್ಲಾವುದ್ದೀನನ ವಿಚಿತ್ರ ದೀಪದ ಹಾಗೆ ಏನಾದರೂ ಮಂತ್ರಾ-ತಂತ್ರಾ ಉಂಟೋ? ಎಂದರು ಮತ್ತೂ ಛಪ್ಪಾರ್ರು.

"ಮಂತ್ರ! ಮಂತ್ರಕ್ಕೆ ಪುರೋಹಿತರು ಬೇಕಾದರೆ ನನ್ನ ಬಾಯಿಯಲ್ಲೇ ಇದ್ದಾರೆ! ನಾಳೆಯೇ ಬೇಕಾದರೆ ಈಗಲೇ ಮದುವೆ ಮಂಗಳ ಮಾಡಿಸಿ ಬಿಟ್ಟೇನು! ಅಲ್ಲಾ, ನಿಮುಗ್ಯಾಕಯ್ಯಾ ಅದೆಲ್ಲಾ ಪಂಚಾಯಿತಿ? ಓ ಪದ್ಮಾ ಬ್ಬಾವಾ! ನಾಡದು ಮುಹೂರ್ತಕ್ಕೆ ಸರಿಯಾಗಿ ದಿಬ್ಬಣ ತೆಗೆದುಕೊಂಡು ಬನ್ನಿರಿ ನೋಡುವಾ ನನ್ನ ಮನೆಗೆ! ಸಾವಿರ ಜನರ ಸನ್ನಾಹ ಮಾಡುತ್ತೇನೆ!" ಎಂದವರೇ, ಕೇಶವಯ್ಯನವರು ಹುರುಪಿನಿಂದ ದಂಟಿಯನ್ನು ಕುಣಿಸಿಕೊಂಡು ಕುಟ್ಟಿಕೊಂಡು ನಡೆದು, ಬವಿಯಲ್ಲೆ ಗದ್ದೆಯಂಚಿನ ಗುಡಿಸಲಲ್ಲಿದ್ದ ಅವರ ಒಕ್ಕಲು ಕೊರಗನ ಅಂಗಳಕ್ಕೆ ಜಗಿದು,—"ಏ ಕೊರಗ! ಏಳೊ! ಬಾ! ನಡೆ! ಗುಡ್ಡೆಯಂಗಡಿಗೆ! ಮದುವೆ ಸಾಮಾನಾಗಬೇಕಂತ ಅಂಗಡಿ ರಾಮ ಭಂಡಾರಿಗೆ ಹೇಳು. ಅಲ್ಲಿ ಎತ್ತಿನ ಗಾಡಿ ಮಾತಾಡಿ ತಯಾರಾಗಿರು, ನಾನೀಗ ಬಂದೇ —" ಎಂದು! ಅವನನ್ನೂ ಅತ್ತ ಓಡಿಸಿ, ತಮ್ಮ ಮನೆಗೆ ಇನ್ನೊಬ್ಬ ಆಳನ್ನು ಓಡಿಸಿ, ತಮ್ಮ ಮಗನನ್ನು ಬರಮಾಡಿಸಿ, ಜೀನಸಿನ ಸಾಮಾನಿನ ಪಟ್ಟಿಯನ್ನು ಹಾಡು ಹೇಳಿದ ಹಾಗೆ ಹೇಳಿ ಬರೆಯಿಸಿ, ಗುಡ್ಡೆಯಂಗಡಿಗೆ ಅವನನ್ನು ಕಳುಹಿಸಿದರು. ಇನ್ನೊಬ್ಬ ಮಗನ ಕೈಯಲ್ಲಿ ಪೇಟೇ ಸಾಮಾನಿನ ಪಟ್ಟಿಯನ್ನು ನಾಲಗೆಯಿಂದಿಳಿಸಿ ಕೊಟ್ಟು ಮಂಗಳೂರಿಗೆ ಓಡಿಸಿದರು. ಅನೇಕ ಆಳುಗಳನ್ನು ನಿಂತಲ್ಲೇ ಕೂಗಿ ಕರೆದು, ಚಪ್ಪರ ತೋರಣಗಳಿಗೆ ತೊಡಗಿಸಿದರು. ಅಂದಿನಿರುಳೇ ಅವರ ಮನೆಯಲ್ಲಿ ಗ್ಯಾಸುಲೈಟು ಬೆಳಗ

ಲಾರಂಭವಾಯಿತು......ಕೇಶವಯ್ಯನವರೆಂದರೆ ಸಾಮಾನ್ಯರಲ್ಲ, ಪ್ರಚಂಡ ಅನುಭವಿಗಳು! ಹೇಳಿದಂತೆ ಮಾಡುವವರೇ!

ಮದುವೆಯ ದಿಬ್ಬಣವು ವಿಜೃಂಭಣೆಯಿಂದ, ತಳಿರುತೋರಣಗಳಿಂದ ಲಂಕೃತವಾದ ಕೇಶವಯ್ಯನವರ ಚಪ್ಪರವನ್ನು ಹೊಕ್ಕಿತು. ಥಳಥಳಿಸುವ ಧಾರೆಮಂಟಪದಲ್ಲಿ ಮದುಮಗ ಶ್ರೀಮದ್ರಾಮಾಯಣನು ಮೆರೆದನು. ಅಲ್ಲೊಂದು ಕಡೆ ದಾರುಣ ಮರಣದ ಮಹಾಶೋಕವು ರಾತಾರಾತ್ರಿಯಂತೆ ಕವಿದಿರುವಾಗ, ಇಲ್ಲಿ ಶ್ರೀಮದ್ರಾಮಾಯಣನ ಮದುವೆ ನಾಲ್ಕು ದಿನಗಳ ವೈಭವದಿಂದ ನಡೆದೇ ನಡೆಯಿತು. ಯಾರ ಬಾಯಿಯಲ್ಲಿ ನೋಡಿದರೂ ಒಂದೂವರೆ ದಿನದೊಳಗೆ, ಸರ್ವಸಾಧಾರಣವಾದ ಮನೆಯನ್ನು, ದೊಡ್ಡ ಮದುವೆಯ ಪರಮಾನ್ನ ಹರಿಯುವ ಮಂದಿರವನ್ನಾಗಿ ಮಾರ್ಪಡಿಸಿದ ಕೇಶವಯ್ಯನವರ ಅದ್ಭುತ ಸಾಹಸದ ಮಾತೇ ಮಾತು? ಪದ್ಮನಾಭಯ್ಯನ ಹೆಸರೂ ದೊಡ್ಡದಾಗದಿರಲಿಲ್ಲ. ಮೊದಲೇ ಅವರು "ಕೊಟ್ಟಭಾಷೆಗೆ ತಪ್ಪದ ಪದ್ಮನಾಭಯ್ಯ"ನಾಗಿದ್ದರು; ಈಗ "ಇಟ್ಟ ಮುಹೂರ್ತಕ್ಕೆ ಬಿಡದ ಪದ್ಮನಾಭಯ್ಯ"ನಾದರು!

೧೬

"ಕೊಟ್ಟ ಭಾಷೆಗೆ ತಪ್ಪದ ಪದ್ಮನಾಭಯ್ಯ" ಹೇಗೆಂದರೆ, ಅದೊಂದು ಪುಣ್ಯ ಕಥೆ; ಸ್ವಲ್ಪ ಹಿಂದೆ ಜರಗಿದ ಸಂಗತಿ. ಪುರಾಣಕಾಲದ ಅರ್ಜುನನು ಗಯನಿಗೆ ಕೊಟ್ಟ ಭಾಷೆಗೆ ತಪ್ಪದೆ ಹೇಗೆ ಪುಣ್ಯಶಾಲಿಯೂ ಕೀರ್ತಿಶಾಲಿಯೂ ಆದನೋ ಹಾಗಿದ್ದೊಂದು ಸಣ್ಣ ಪುಣ್ಯಕಥೆ. ಹಿಂದಣ ಅರ್ಜುನನಿಗೆ ಕೃಷ್ಣ ದೈವತದ ಸಹಾಯವಿದ್ದುದರಿಂದ ಅವನು ವಿಜಯಶಾಲಿಯಾದನು; ಕಲಿಯುಗದ ಪದ್ಮನಾಭೈಯನಿಗೆ ಹಾಗಾಗಲಿಲ್ಲ. ಆದುದರಿಂದ ಅರ್ಜುನನಿಗಿಂತಲೂ ಪದ್ಮನಾಭೈಯನು ಹೆಚ್ಚಿನವರೆಂದೇ ಯಾಕೆ ಹೇಳಬಾರದು?

ಒಮ್ಮಾನೊಮ್ಮೆ ಪದ್ಮನಾಭೈಯ ಬೇಸಿಗೆಯ ರಣಬಿಸಿಲಿನಲ್ಲಿ ಕೃಷ್ಣಾರಣ್ಯದಿಂದ ತಮ್ಮ ಮನೆಯ ಕಡೆಗೆ ಹೊರಟಿದ್ದರು. ಗುಡ್ಡೆಗಾಡಿನ ಓರೆಕೋರೆಯಾದ ಕಾಲುದಾರಿ. ನೆತ್ತಿಯ ಮೇಲೆ ಪ್ರಜ್ವಲಿಸುವ ಸೂರ್ಯ. ತೀರಕೃಪಣರ ಹಾಗೆ ಆಯಾ ವಸ್ತುಗಳು ತಮ್ಮ ನೆರಳುಗಳನ್ನು ಯಾರ ಉಪಯೋಗಕ್ಕೂ ಕೊಡದೆ, ತಮ್ಮ ತಮ್ಮ ಅಡಿಯಲ್ಲಿಯೇ ಅಡಗಿಸಿ ಕೊಂಡಿದ್ದುವು. ಪುಣ್ಯ ಮರಗಳಾದರೂ ಇರುತ್ತಿದ್ದರೆ, ತಮ್ಮಡಿಗೆ ಬಂದವರಿ

ಗಾದರೂ ನೆರಳನ್ನು ಕೊಡುತ್ತಿದ್ದುವು. ಅಂತಹದೊಂದು ಮರವಾದರೂ ಆ ಹಾಳು ಹಳುವಿನಲ್ಲಿರಲಿಲ್ಲ. ನೀರೆಡೆಯೂ ಇಲ್ಲ. ಮೇಲಿನ ಸೂರ್ಯನ ಬಿಸಿಲಮಳೆ, ಸಾಲದುದಕ್ಕೆ ಹೊಟ್ಟೆಯಲ್ಲಿ ಹಸಿವೆಯ ಬೆಂಕಿಯೂ ಉರಿಯುತ್ತಿತ್ತು. ಅದರಿಂದ ಹೆಚ್ಚಿಕೊಂಡೇ ಬರುತ್ತಿತ್ತು ನೀರಡಿಕೆ.

ಪದ್ಮನಾಭಯ್ಯ ಅತ್ಯಂತ ತಲ್ಲಣಿಸಿಕೊಂಡು ನಡೆಯುತಿದ್ದರು. ಅಂಗಾಲಿಗೆ ಸುಡುವ ಕಲ್ಲುಗಳು ಒತ್ತುತ್ತಿರಲು ತಬ್ಬಿಬ್ಬಾಗಿ ನಡೆಯುತ್ತಿದ್ದರು. ಕಟ್ಟೇಬೆಟ್ಟು ಇನ್ನೂ ಮೂರು ಮೈಲು ದೂರವಿತ್ತು. ಅಲ್ಲಿಗೆ ಮುಟ್ಟುವುದರೊಳಗೆ, ನೀರಿಲ್ಲದೆ ಒಣಗಿ, ಆ ಹಾಳುಗುಡ್ಡದಲ್ಲಿಯೇ ತನ್ನ ಸಮಾಧಿಯಾದೀತೇನೋ ಎಂದು ಸಂದೇಹವಾಯಿತು ಅವರಿಗೆ. ಕಣ್ಣೆತ್ತಿದ್ದಷ್ಟು ದೂರ ನೀರಿದೆಯೇ ಎಂದು ನಿರುಕಿಸುತ್ತ, ಕಾಲೆಳೆದುಕೊಂಡು ನಡೆಯುತ್ತಿರುವಾಗ, ಸ್ವಲ್ಪ ದೂರದಲ್ಲಿ ತುಸು ತಗ್ಗಿನಲ್ಲಿ ಒಂದು ಮಾವಿನ ಮರವೂ, ಅದರ ಬುಡದಲ್ಲಿ ಒಂದು ಗುಡಿಸಲೂ ಕಂಡುಬಂತು. ಅದೊಂದು ಶೂದ್ರ ಕುಟೀರವೆಂದು ನೋಟದೊಂದಿಗೇ ಗೊತ್ತಾಯಿತು.

"ಸರಿ. ಏನಾದರೇನು? ಈಗ ಆಚಾರನೋಡಿವರೆ ಬದುಕಲಾರೆನು!" ಎಂದುಕೊಂಡು, ಇದ್ದ ಶಕ್ತಿಯನ್ನೆಲ್ಲ ಒಂದುಗೂಡಿಸಿಕೊಂಡು ಅಲ್ಲಿಗೆ ಹೋಗಿ, "ಉಸ್ಸೆಂ"ದು ದೊಡ್ಡ ಶ್ವಾಸವನ್ನು ಬಿಟ್ಟು, ಜಗಲಿಯ ಬದಿಯಲ್ಲಿ ಕುಕ್ಕರಿಸಿ "ಒಳಗೆ ಯಾರಿದ್ದೀರಿ ಸ್ವಲ್ಪ ನೀರು" ಎಂದು ಉದ್ಗರಿಸಿದರು. ಆ ಕ್ಷಣದಲ್ಲಿ ಅವರಿಗೆ ತಣ್ಣೆರಳನ್ನಿತ್ತು, ತಂಗಾಳಿಯನ್ನು ಪೂಸಿ ಉಪಚರಿಸಿದುದು ಉಪಕಾರಿಯಾದ ಆ ಮಾವಿನ ಮರ.

ಆ ಸಣ್ಣ ಗುಡಿಸಲಿನ ಗೋಡೆಯೂ ಜಗುಲಿಯೂ ಅಲ್ಲಲ್ಲಿ ಜರಿದು ಹೋಗಿತ್ತು. ಜಗಲಿಯ ಮೂಲೆಯ ಕೋಳಿಯ ಗೂಡಿನೊಳಗೆ ಕೆಲವು ಕೋಳಿಮರಿಗಳಿದ್ದುವು. ಪದ್ಮನಾಭಯ್ಯನನ್ನು ಕಂಡು ಗೂಡಿನೊಳಗಿದ್ದ ಮರಿಗಳು ಕೀಚುದನಿ ಮಾಡಿ ಚಡಪಡಿಸಿದುವು. ಅಂಗಳದಲ್ಲಿ ಕೆದರುತ್ತಿದ್ದ ಹೇಂಟೆ, ಮರಿಗಳ ಚಡಪಡಿಕೆಯನ್ನು ಕೇಳಿ "ಕೊಕ್ಕೊರೊ ಕೊರೊರೋ"—ಎನ್ನುತ್ತ ಗೂಡಿನ ಬಳಿಗೆ ಓಡಿಬಂದು ನಿಂತು ಅತ್ತಿತ್ತ ನೋಡಿತು. ಯಾರು? ಏನು? ಎಲ್ಲಿ?—ಎಂಬ ಭಾವದಿಂದ ಹುಂಜವೀರನು ಅಂಗಳದ ಸುತ್ತು ಒಂದು ತಿರುಗು ಹಾಕಿ, ಹಟ್ಟಿಯ ಜರಿದ ಗೋಡೆಯ ಮೇಲೆ ಹಾರಿ, ಫಡಫಡನೆ ರೆಕ್ಕೆಯನ್ನು ಬಡೆದು, "ಕೊಕ್ಕೊರೋ ಕೋ!" ಎಂದು ಉಚ್ಚಸ್ಥಾಯಿಯಿಂದ ಕೂಗಿತು. ಆ ಕೂಗನ್ನು ಕೇಳಿ ಹಟ್ಟಿಯ ಹಿಂದೆ ಗೊಬ್ಬರ

ಗುಂಡಿಯ ಬಳಿಯಿರುವ ಬೂದಿಯ ರಾಸಿಯಲ್ಲಿ ಸುರುಟಿ ಮಲಗಿದ, ಕಾವಲು ಗಾರ—ನಾಯಿ "ಏನಾಯಿತೊ?" ಎಂದು ಎದ್ದು ಲಟಲಟನೆ ಮೈಯನ್ನು ಕೊಡರಿಕೊಂಡು ಅಂಗಳಕ್ಕೆ ಬಂದು, ಜಗಲಿಯಲ್ಲಿ ಕುಳಿತಿದ್ದ ಪದ್ಮ ನಾಭೈಯನನ್ನು ನೋಡಿ,—"ಇವರಾರು? ನನ್ನನ್ನು ಕೇಳದೆ ಕುಳಿತೇಬಿಟ್ಟರಲ್ಲ ಜಗಲಿಯಲ್ಲಿ? ಕಳ್ಳರೊ? ಒಳ್ಳೆಯವರೊ? ನಾನು ಕೊರೆದು ಗದರಿಸಲೊ?–ಬೇಡವ್ರೋ?"—ಎಂದು ಸಂದೇಹದಿಂದ, ಒಮ್ಮೆಲೇ ಬಗುಳಲು ಧೈರ್ಯ ಬಾರದೆ "ಗುರ್‍ರ್" ಎಂದು ಗಂಟಲಲ್ಲಿಯೇ ಗೋಗರೆಯುತ್ತಿತ್ತು.

ಇಷ್ಟೆಲ್ಲ ಆಗುತ್ತಿರುವಾಗ, ಪದ್ಮನಾಭೈಯನ ಆರ್ತಶ್ವಾಸೋದ್ಗಾರ ಗಳನ್ನು ಕೇಳಿ, ಗುಡಿಸಲಿನೊಳಗಿನಿಂದ "ಯಾರದು?" ಎಂಬ ಪ್ರಶ್ನೆಯೊಂದು ಹೊರಗೆ ಬಂದಿತು. ಪದ್ಮನಾಭೈಯನ ತೇಕುಬಾಯಿಯಿಂದ ಕೂಡಲೇ ಉತ್ತರ ಹೊರಡದಿದ್ದಾಗ, ಕೃಶಾಂಗನಾದ ಶೂದ್ರನೊಬ್ಬನು, ಗಂಜಿಕುಡಿಯು ತ್ತಿದ್ದನೆಂದು ತೋರುತ್ತದೆ—ಎಂಜಲು ಕೈಯನ್ನು ಮುಚ್ಚಿಕೊಂಡು ಹೊರಗೆ ಇಣಿಕಿನೋಡಿ, "ಯಾರು ಸ್ವಾಮಿ? ಏನು?" ಎಂದು ಕೇಳಿ, ಒಳಗಿದ್ದ ಅವನ ಹೆಂಡತಿಯನ್ನು ಕುರಿತು,—"ಇಕ್ಕೊ, ಬ್ರಾಹ್ಮಣರು ಬಂದಿದ್ದಾರೆ, ಬೇಗ ಸ್ವಲ್ಪ ಕಸಉಡುಗಿ ಮಣೆ ಹಾಕು" ಎಂದು ಅಪ್ಪಣೆಕೊಟ್ಟು, ಲಗು ಬಗೆಯಿಂದ, ಅಂಗಳದ ಬದಿಯಲ್ಲಿರುವ ತೆಂಗಿನ ಸಸಿಯ ಕಟ್ಟೆಗೆ ಹೋದನು. ಆಗ ಅವನು ಸಂದೇಹದಲ್ಲಿರುವ ನಾಯಿಯನ್ನು ನೋಡಿ ಏನೋದು? ಸುಮ್ಮ ನಿರು ಎಂದಕೂಡಲೇ ನಾಯಿಗೆ ಸಂದೇಹ ನಿವಾರಣೆಯಾಗಿ, ತೆಂಗಿನಕಟ್ಟೆಯ ಬದಿಗೆ ಹೋಗಿ, ಮೀನಿನ ಚೂರುಗಳನ್ನು ಆರಿಸಿಕೊಳ್ಳಲಾರಂಭಮಾಡಿತು. ಶೂದ್ರನು ತೆಂಗಿನಕಟ್ಟೆಯಲ್ಲಿಟ್ಟಿದ್ದ ಗಡಿಗೆಯಿಂದ ಗೆರಟೆಯಲ್ಲಿ ನೀರನ್ನು ತೋಡಿ ತೆಗೆದು ಪಿಚಪಿಚನೆ ಕೈತೊಳೆದುಕೊಂಡು ಬರುವಾಗ, ಶೂದ್ರಳು, ಜಗಲಿಯಲ್ಲೆಲ್ಲ ತುಂಬಿಹೋಗಿದ್ದ ಕೋಳಿಯ ಕೊಳಕು, ಮೀನಿನ ಚೂರು ಗಳ ಮೇಲೆ ಅವಸರವಸರವಾಗಿ ಒಂದಿಷ್ಟು ಹಿಡಿಸೂಡಿಯನ್ನಾಡಿಸಿ, ಮಾಡಿನ ಸೂರಿನಿಂದೊಂದು ಸಣ್ಣ ಮಣೆಯನ್ನು ತೆಗೆದು ಪದ್ಮನಾಭೈಯನ ಮುಂದೆ ಇಟ್ಟು "ಕೂಡಿ ಸ್ವಾಮಿ" ಎಂದಳು.

"ಮೊದಲು ಸ್ವಲ್ಪ ನೀರು ಕೊಡಿ, ಗಂಟಲು ಒಣಗೇ ಹೊಯ್ತು" ಎಂದರು ಪದ್ಮನಾಭೈಯ.

ಹೀಗೆ ಅವರ ಸಂಭಾಷಣೆ ತುಳುವಿನಲ್ಲಿ ನಡೆದರೂ, ತುಳುವಿನ ಮಾದರಿ ಯನ್ನು ಬಿಟ್ಟು ನಾವು ಕನ್ನಡದಲ್ಲಿ ತರ್ಜುಮೆಮಾಡಿಯೇ ಹೇಳಿದೆವು.

ಅದಕ್ಕೆ ಆ ಶೂದ್ರನು—"ಅಯ್ಯೋ ದೇವರೆ! ಇಲ್ಲಿ ಸಮೀಪ ಬಾವಿ ಕೂಡಾ ಇಲ್ಲವಲ್ಲ? ನಮ್ಮ ಕೈಯ ನೀರು ಹೇಗೆ ಕುಡಿಯುವಿರಿ ಸ್ವಾಮಿ?" ಎಂದು ಚಡಪಡಿಸಿದನು.

"ಪ್ರಾಣ ಹೋಗುವಾಗ ಜಾತಿ ನೋಡಬಾರದು. ಬೇಗ-ಬೇಗ!"-ಎಂದು ಪದ್ಮನಾಭೈಯ ಆತುರದಿಂದ ಕಾತರಿಸಿದರು.

ತಡಮಾಡದೆ ಶೂದ್ರನು ಮಣ್ಣಮಗೆಯೊಂದರಲ್ಲಿ ನೀರು ತಂದಿಟ್ಟನು. ಇನ್ನೊಂದು ಸಂದರ್ಭದಲ್ಲಾದರೆ ಆ ನೀರು ಮತ್ತು ನೀರ ಕುಡಿಕೆ ಅತ್ಯಂತ ಅಸಹ್ಯವಾಗಿ ಕಾಣಬಹುದಿತ್ತು. ಅಂತಹುದೀಗ ಪದ್ಮನಾಭೈಯರಿಗೆ ಅಮೃತ ಕಲಶದಂತೆ ತೋರಿ, ಆನಂದದಿಂದ ಎತ್ತಿಕೊಂಡು ಗಳಗಳನೆ ಕುಡಿದು ಮುಗಿಸಿ—"ಅಬ್ಬ! ಏನು ಸುಖ! ಇನ್ನೊಂದಿಷ್ಟು!" ಎಂದು ಆ ಶೂದ್ರನನ್ನು ಪರಮ ಕೃತಜ್ಞತೆಯಿಂದ ನೋಡುತ್ತಾ ಮಗೆಯನ್ನು ನೀಡಿದರು, ಆಹಾ! ಬಾಯಾರಿದವನಿಗೇ ಗೊತ್ತು ನೀರಿನ ಬೆಲೆ!

ಅನಂತರ ಪದ್ಮನಾಭೈಯ ಆ ಶೂದ್ರನು ಕೊಟ್ಟ ಹರಕು ಬೀಸಣಿಗೆಯಿಂದ ಗಾಳಿ ಬೀಸಿಕೊಳ್ಳುತ್ತಾ ಪರಸ್ಪರ ವಿಚಾರಸಚಾರ ಮಾಡಿಕೊಂಡರು. ಮಧ್ಯಾಹ್ನದ ವೇಳೆಯಲ್ಲಿ ಮನೆಗೆ ಬಂದ ಅತಿಥಿ ಬ್ರಾಹ್ಮಣನಿಗೆ ಬರೇ ನೀರು ಮಾತ್ರ ನೀಡಿ ತೃಪ್ತನಾಗಲು ಆ ಸದ್ಗುಣಿ ಶೂದ್ರನಿಂದಾಗಲಿಲ್ಲ. ಅವನ ಮುರುಕು ಮನೆಯಲ್ಲಿ ಹಣ್ಣುಹಂಪಲಗಳೂ ಇರಲಿಲ್ಲ. ಎಲ್ಲಿಂದಾದರೂ ತರೋಣವೆಂದರೆ ಸಮೀಪದಲ್ಲಿ ಏನೊಂದೂ ಸಿಕ್ಕುವಂತಿಲ್ಲ. ಒಂದಿಷ್ಟು ಹಾಲಾದರೂ ಕೊಡೋಣವೆಂದರೆ ಮಧ್ಯಾಹ್ನ ವೇಳೆಯಲ್ಲಿ ಹಸು ಹಿಂಡಿಸ ಗೊಡದೋ ಏನೊ? ಆದರೂ "ಕರೆದು ನೋಡು" ಎಂದು ಹೆಂಡತಿಯನ್ನು ಹಟ್ಟಿಗೆ ಕಳುಹಿಸಿದನು. ಅವನು ತನಗೆ ನೀರುಕೊಟ್ಟು ಪ್ರಾಣದಾನ ಮಾಡಿದುದೇ ಎಂದೆಂದಿಗೂ ಮರೆಯದ ಮಹೋಪಕಾರವಾಯಿತೆಂದೂ, ಇನ್ನೇನೂ ತನಗೆ ಬೇಡವೆಂದೂ, ಬಿಸಿಲು ಸ್ವಲ್ಪ ತಗ್ಗುವ ವರೆಗೆ ಅಲ್ಲೆ ವಿಶ್ರಮಿಸಿದ್ದು ಅನಂತರ ಸಂತೋಷದಿಂದ ಹೊರಟು ಹೋಗುವೆನೆಂದೂ, ಎಷ್ಟು ಹೇಳಿದರೂ ಕೇಳದೆ, ಅವನು ಹೆಂಡತಿಯನ್ನು ಹಟ್ಟಿಗೆ ಕಳುಹಿಸಿಯೇ ಬಿಟ್ಟನು.

ಆ ಶೂದ್ರನ ಹೆಸರು ಐತಪ್ಪನಂತೆ. ಹುಟ್ಟು ಬಡವ. ಹೊಟ್ಟೆಗಿದ್ದರೆ ಬಟ್ಟೆಗಿಲ್ಲ, ಬಟ್ಟೆಗಿದ್ದರೆ ಹೊಟ್ಟೆಗಿಲ್ಲ. ಪ್ರಕೃತ ಆ ಹಸುವಿನಿಂದಲೇ ಅವನ ಜೀವನವು ಸಾಗುತ್ತಿತ್ತಂತೆ—ಆ ಹಸುವನ್ನು ಅವನು ಐವತ್ತು ರೂಪಾಯಿ

ಸಾಲಮಾಡಿ, ಕೊಂಡು ಕೊಂಡುದಂತೆ. ಆ ಸಾಲವು ಇನ್ನೂ ಹಾಗೆಯೇ ಬಾಕಿಯಿದೆ. ಹಾಲು ಮಾರಿದ ದುಡ್ಡು ಗಂಜಿಗೇ ಸಾಕಾಗದಿರುವಾಗ ಆ ಸಾಲವನ್ನು ಹೇಗೆ ತೀರಿಸಿಯಾನು? ಇದನ್ನೆಲ್ಲಾ ಕೇಳಿ ಪದ್ಮನಾಭೈಯ ಆ ಹಸುವಿನ ಉದ್ದ ಬಾಲ, ಕೆಚ್ಚಲು, ಲಕ್ಷಣ ಮುಂತಾದುವನ್ನು ಗಮನಿಸಿದರು. ಸುಲಕ್ಷಣಯುಕ್ತವಾದ ಗೆಂದೆಹಸು. ಪದ್ಮನಾಭೈಯನಿಗೂ ಒಂದು ಹಸು ಕೊಂಡುಕೊಳ್ಳಬೇಕಾಗಿತ್ತು. ಮಾತಿಗೆ ಮಾತಾಗಿ ಇದನ್ನೀಗ ಮಾರುವ ಆಲೋಚನೆ ಉಂಟೊ?" ಎಂದು ಐತಪ್ಪನನ್ನು ಕೇಳಿದರು.

"ಅಯ್ಯೊ! ಈಗ ಇದನ್ನು ಮಾರಿದರೆ ನಾವು ಉಪವಾಸವೇ ಬೀಳ ಬೇಕಾಗುವುದಲ್ಲ ಸ್ವಾಮೀ!" ಎಂದನು ಐತಪ್ಪ.

ಈ ಮಾತಾಗಿ ಎಂಟೊಂಭತ್ತು ತಿಂಗಳೇ ಸರಿದುಹೋಯಿತು. ಒಂದು ದಿನ ಆ ಐತಪ್ಪನು ಪದ್ಮನಾಭೈಯನನ್ನು ವಿಚಾರಿಸುತ್ತಾ ಕಟ್ಟೆಬೆಟ್ಟಿಗೆ ಬಂದನು. ಪದ್ಮನಾಭೈಯ ಅವನ ದೀನ ಮುಖಮುದ್ರೆಯನ್ನು ನೋಡಿದರು. ಆಪತ್ಕಾಲ ದಲ್ಲಿ ತನ್ನ ಪ್ರಾಣವನ್ನುಳಿಸಿದ ಬಡವನೆಂಬುದನ್ನು ಮರೆಯಲಿಲ್ಲ. ಅವನನ್ನು ಬೆಲ್ಲ—ನೀರು ಕೊಟ್ಟು ಅಡಿಕೆಲೆಯನ್ನು ನೀಡಿ, ಹೊಗೆಸೊಪ್ಪಿನ ಚೂರನ್ನು ಕೊಟ್ಟು, ಉಪಚರಿಸಿ ಬಂದ ಕಾರಣವನ್ನು ವಿಚಾರಿಸಿದರು.

ಆ ಹಸುವಿನ ಮೂಲಕವಾಗಿ ಅವನಿಗೆ ಐವತ್ತು ರೂಪಾಯಿ ಸಾಲ ವಾಗಿದ್ದಿತೆಂದು ಹೇಳಿದ್ದನಷ್ಟೆ? ಆ ಸಾಲವು ಬಡ್ಡಿಕೂಡಿ ಈಗ ೬೦ ರೂಪಾಯಿ ಯಾಗಿತ್ತು. ಸಾಲಿಗರು ದಾವಾ ಮಾಡಿ ಅವನ ಬಡ ಗುಡಿಸಲಿಗೆ ಜಪ್ತಿಗಾಗಿ ಬರಲಿಕ್ಕಿದ್ದಾರೆ. ಆದುದರಿಂದ ಬೇರೆ ನಿರ್ವಾಹವೇ ಇಲ್ಲದೆ ಅವನು ಈಗ ಆ ಹಸುವನ್ನೆ ಮಾರಬೇಕೆಂದಿದ್ದಾನೆ. ಆದರೆ ಎಪ್ಪತ್ತೈದು ಎಂಭತ್ತು ರೂಪಾಯಿ ಬೆಲೆಬಾಳುವ ಆ ಹಸುವನ್ನು ಕೇವಲ ಇಪ್ಪತ್ತೈದು ಮೂವತ್ತು ರೂಪಾಯಿಗೆ ಕೇಳುತ್ತಾರಂತೆ. ಪದ್ಮನಾಭೈಯನು ಹಿಂದೆ 'ನೀನು ಈ ಹಸುವನ್ನು ಮಾರು ವಿಯೊ?' ಎಂದು ಕೇಳಿದುದು ನೆನಪಿಗೆ ಬಂದು ಅವನೀಗ ಇಲ್ಲಿಗೆ ಬಂದಿರು ವನು. ಹಸು ಕುತ್ತಿಹಾಲು ಕರೆಯುವಂತಹುದು. ಈಗ ಕರು ಹಾಕಲು ತಯಾರಾಗಿದೆ. ಬೇಗದಲ್ಲೇ ಕರು ಹಾಕುವ ಸಂಭವವೂ ಉಂಟು.

ಇದೆಲ್ಲವನ್ನೂ ಕೇಳಿ ಪದ್ಮನಾಭೈಯ—"ಒಳ್ಳೇದು. ಐತಪ್ಪ, ನೀನು ಈಗ ಬಂದದ್ದು ಒಳ್ಳೆಯದೇ ಆಯಿತು. ಆ ಆಕಳನ್ನು ನನಗೇ ಕೊಂಡು ಕೊಳ್ಳಬೇಕೆಂದಿತ್ತು. ಆಕಳಿನ ಲಕ್ಷಣವನ್ನು ನಾನು ಬಲ್ಲೆ. ಅದರ ಬೆಲೆ

ಯನ್ನೂ ನಾನು ಬಲ್ಲೆ. ನಿಜವಾಗಿಯೂ ಆ ಚಿಕ್ಕಪ್ರಾಯದ, ಕೆಂಬಿರಿಗೆಚ್ಚಲಿನ ಗೆಂದೆವಸಕ್ಕೆ ಐವತ್ತು ರೂಪಾಯಿ ಕಣ್ಣುಮುಚ್ಚಿ ಕೊಡಬಹುದು. ನೀನು ಹೇಳುವ ಬೆಲೆಯನ್ನು ನಾನು ಕೊಡಲು ಶಕ್ತನಲ್ಲ. ನೀನು ಸಾಲದವನಿಗೆ ಕೊಡಬೇಕಾದ ಅರುವತ್ತು ರೂಪಾಯಿಯನ್ನು ನಾನೇ ಕೊಟ್ಟು ಆ ಆಕಳನ್ನು ಕೊಂಡುಕೊಳ್ಳುತ್ತೇನೆ. ಹೋಗು. ನಾಡದು ಸಂಜೆ ಹಣವನ್ನು ತೆಗೆದುಕೊಂಡು ನಿನ್ನ ಮನೆಗೆ ಬರುತ್ತೇನೆ." ಎಂದು ಮಾತುಕೊಟ್ಟು ಕಳುಹಿಸಿದರು. ಐತಪ್ಪನು ಉತ್ಸಾಹದಿಂದ ಮುಖ ಅರಳಿದವನಾಗಿ ಹೊರಟು ಹೋದನು.

ಹೇಳಿದಂತೆ ಪದ್ಮನಾಭೈಯನು ೬೦ ರೂಪಾಯಿಗಳನ್ನು ಹಿಡಿದುಕೊಂಡು ಐತಪ್ಪನ ಕೊಟ್ಟಿಗೆಗೆ ಹೋದರು. ನೋಡಿದಾಗ ಐತಪ್ಪ ಬಾಡಿದ ಮುಖದಿಂದ ನಿಂತಿದ್ದನು. "ಏನೆ"ಂದು ವಿಚಾರಿಸಲಾಗಿ, "ಏನು ಹೇಳಲಿ ಸ್ವಾಮಿ? ನನ್ನ ಗರಚಾರ! ನೀವೇನೋ ದೊಡ್ಡ ಮನಸ್ಸುಮಾಡಿ ಬಂದಿರಿ! ನನಗೆ ನಿಮ್ಮ ಉಪಕಾರವನ್ನು ಹೊಂದಲು ಭಾಗ್ಯವಿದ್ದರೆ ತಾನೆ? ಸ್ವಾಮೀ! ನಿನ್ನೆ ಈ ದನ ಫಕ್ಕನೆ ಕರುವನ್ನು ಹಾಕಿತು. ಬಹಳ ಕಷ್ಟಪಟ್ಟು ಹಾಕಿತು. ಈಗ ಅದರ ಕರುಳು ಹೊರಗೆ ಬಂದದೆ. ಹಸು ಮಲಗಿದೆ! ಅಯ್ಯೋ! ಬನ್ನಿ ಸ್ವಾಮಿ! ನೋಡಿ! ನನ್ನ ದುರ್ಭಾಗ್ಯ!" ಎಂದು ಐತಪ್ಪ ಮರುಗಿದನು.

ಪದ್ಮನಾಭೈಯ ಹಟ್ಟಿಗೆಹೋಗಿ ಹಸುವಿನ ಶೋಚನೀಯಾವಸ್ಥೆಯನ್ನು ನೋಡಿದರು. ವಜ್ರಾಘಾತವಾದ ಹಾಗಾಯಿತು. ಆ ಮೇಲೆ ಹಸುವನ್ನು ಮಾತಾಡಿಸಿ ನೋಡಿದರು; ದೇಹವನ್ನು ಸವರಿದರು; ಕರುಳನ್ನು ಒಳಗೆ ಒತ್ತಿ ನೋಡಿದರು; ಇಬ್ಬರೂ ಸೇರಿ ಹಿಡಿದು ಎತ್ತಿ ನಿಲ್ಲಿಸಿದರು. ಪುಟ್ಟ ಕರು ಒಂದೆರಡು ಬಾರಿ ಮೊಲೆಯನ್ನು ಚೀಪಿತು. ಪದ್ಮನಾಭೈಯನಿಗೆ ಸ್ವಲ್ಪ ಧೈರ್ಯ ಬಂತು. "ಐತಪ್ಪಾ! ಇದಕ್ಕೇನಾದರೂ ವೈದ್ಯ ಮಾಡಿದ್ದೀಯಾ?" ಎಂದು ಕೇಳಿದರು. "ನನಗೆ ತಿಳಿದದ್ದು ಮಾಡುತ್ತಿದ್ದೇನೆ. ಮುಖ್ಯವಾಗಿ ಬೆಳ್ಳುಳ್ಳಿಯ ಸಿಪ್ಪೆಯ ಹೊಗೆ ಹಾಕುತ್ತೇನೆ."

"ಅದು ಬಹಳ ಒಳ್ಳೆಯದೇ. ಆದರೂ ಪಶುವೈದ್ಯ ಭೀಮಪ್ಪನಿಂದ ಚಿಕಿತ್ಸೆ ಮಾಡಿಸಲೇ ಬೇಕು."

"ನಿನ್ನೆ ಸಂಜೆ ಅವನ ಕಡೆಗೂ ಹೋಗಿದ್ದೆ ಬುದ್ಧಿ. ಅವನು ಇಷ್ಟು ದೂರ ಬರಲಾರೆನೆಂದುಬಿಟ್ಟ. ಮುಖ್ಯ ಅವನಿಗೆ ಹಣದ ಆಸೆ ಕಾಣಲಿಲ್ಲ!"

"ಓಹೊ! ಸರಿ. ಇದಕ್ಕೇನೂ ಹೆದರಬೇಡ. ನಮ್ಮ ಮನೆಗೆ ಸಮೀಪವೇ ಇದೆ ಅವನ ಮನೆ. ಇದಕ್ಕಿಂತ ಕಠಿಣವಾದುದನ್ನೆಷ್ಟೋ ಅವನು ವಾಸಿಮಾಡಿದ್ದಾನೆ. ಇಗೋ ಹಣವನ್ನು ತೆಗೆದುಕೊ. ಇಂದಿನಿಂದ ಈ ಆಕಳು ನನ್ನದು. ಇದನ್ನು ಈ ದಿನವೇ ಹೊರಿಸಿಕೊಂಡು ಒಯ್ಯುವೆನು. ಬಿದಿರಗಳುಗಳನ್ನೂ ಹೊರಲಿಕ್ಕೆ ನಾಲ್ಕು ಮನುಷ್ಯರನ್ನೂ ಕೊಡುವಿಯಾ?"—

ಐತಪ್ಪನು ಬೆಕ್ಕಸಬೆರಗಾಗಿ ಹೋದನು. ಪದ್ಮನಾಭೈಯನು ಉಡಿಯಿಂದ ಸಂಚಿಯನ್ನೆತ್ತಿ ಹಣದ ನೋಟುಗಳನ್ನು ತೆಗೆದು ಅವನ ಕಡೆಗೆ ನೀಡಿದರು.

ಐತಪ್ಪನೆಂದ:—"ಸ್ವಾಮಿ! ನೀವು ಮನುಷ್ಯರಲ್ಲ ದೇವರು!"

"ಅದೇನು?—ಅದೇಕೆ?—ನಾನು ಈ ಹಸುವನ್ನು ಮೊದಲೇ ಕೊಂಡುಕೊಳ್ಳಬೇಕೆಂದಿದ್ದೆ. ನಿನ್ನೆ ಅಲ್ಲ ಮೊನ್ನೆಯೇ ನಾನಿದನ್ನು ಕೊಂಡುಕೊಂಡಿದ್ದರೆ ಈ ಅವಸ್ಥೆ ಬರುವಂಥಾದ್ದು ಬಾರದೆ ಹೋಗುತ್ತದೆಯೊ? ಇಗೋ—ತಗೋ!"—

"ಸ್ವಾಮಿ! ನನ್ನ ಕೈಯಿಂದ ಹೇಗೆ ತೆಗೆದುಕೊಳ್ಳಲಿ? ನನ್ನನ್ನು ಉಳಿಸುವುದಾಗಿ ನೀವು ದಾನಮಾಡುವುದಾದರೆ ನನ್ನ ಸಾಲದವರಿಗೇ ಕೊಟ್ಟುಬಿಡಿ!"

"ಅದೆಲ್ಲಾ ನನಗೇಕೆ ಹೇಳು? ನಾನು ಮೊನ್ನೆ ಹೇಳಿದಂತೆ ಈ ಹಸುವಿನ ಕ್ರಯವನ್ನು ಕೊಡುತ್ತೇನೆ." ಎಂದೆಂದು ಪದ್ಮನಾಭೈಯ ಅರುವತ್ತು ರೂಪಾಯಿಗಳನ್ನು ಅವನ ಕೈಯಲ್ಲಿ ಇಟ್ಟೇಬಿಟ್ಟರು.

ಇನ್ನು ಹೆಚ್ಚಿಗೆ ಹೇಳುವುದೇನಿದೆ? ಆ ಕರುಣಾಜನಕವಾದ ಹಸುವನ್ನೂ ಅದರ ಮಗುವನ್ನೂ ಕಟ್ಟೆಬೆಟ್ಟಿಗೆ ಸಾಗಿಸಲಾಯಿತು. ಪಶುವೈದ್ಯದಲ್ಲಿ ಕೈಗಂಡವನಾದ ಭೀಮಪ್ಪನ ವೈದ್ಯವೂ ನಡೆಯಿತು. "ಏನು ಹುಚ್ಚು ಹಿಡಿದದ್ದು ಈ ಪದ್ಮನಾಭೈಯನಿಗೆ! ಬೇಕಂತ ಹಣಕೊಟ್ಟು ಇಂಥ ಸಾಯುವ ದನವನ್ನು ಯಾರಾದರೂ ತಂದಾರೋ ಬುದ್ಧಿಳಿದ್ದವರು?" ಎಂದು ಎಲ್ಲರೂ ಪದ್ಮನಾಭೈಯ್ಯನನ್ನು ಹಳಿಯುವವರಾದರು. ಆ ಹಸುವಾದರೂ ಪಾಪ!—ಮುಂದೆ ಮೂರೇ ದಿನದಲ್ಲಿ ಸತ್ತುಹೋಯಿತು! ಮತ್ತೆರಡು ದಿನದಲ್ಲಿ ಕರುವೂ ಹೋಯಿತು!

ಈ ವ್ಯಸನದ ಮೇಲೆ ಸುತ್ತುಮುತ್ತಲೂ ಪದ್ಮನಾಭೈಯನಿಗೆ ಮೂದಲಿ
ಕೆಯೇ. ಹೌದು! ಕಲಿಕಾಲ! ಸ್ವಾರ್ಥಪರಾಯಣತೆಯ ಈ ಕಲಿಕಾಲ
ದಲ್ಲಿ ಅಪೂರ್ವವಾಗಿ ಯಾರಾದರೊಬ್ಬನು ಪುಣ್ಯಯುಗದ ಕರ್ಮವೊಂದನ್ನು
ಮಾಡಿದನೆಂದರೆ ಜನರ ಬಾಯಿಯಲ್ಲಿ ಎಗತಾಳಿಯೇ ಸರಿ! ಅಂತೆಯೇ
ಪದ್ಮನಾಭೈಯ ಆಕ್ರಮಿಸಿದ ಚಿಂತೆಯನ್ನು, ಮನೋಧೈರ್ಯದಿಂದ ದೂರಕ್ಕೆ
ಹೊಡೆದೊಡಿಸಿ—"ಯಾರು ಹೇಳಿದ್ದು ನಾನು ಇದಕ್ಕೆ ಕ್ರಯಕೊಟ್ಟಿದ್ದೇ
ನೆಂದು? ಇಂಥಾ ದನಕ್ಕೆ ಕ್ರಯಕೊಡಲಿಕ್ಕೆ ನನಗೇನು ಹುಚ್ಚೇ? ಬುದ್ಧಿ
ಯಿಲ್ಲವೆ?'ಅವನಿಗೆ ಮದ್ದು ಮಾಡಲಿಕ್ಕೆ ಅನುಕೂಲವಿಲ್ಲದ್ದಕ್ಕೆ ಇಲ್ಲಿಗೆ ತಂದದ್ದು.
ಹಸುವಿಗೆ ಗುಣವಾಗಿ ಹಾಲು ನೋಡಿದ ಮೇಲೆ ಹಣವನ್ನು ಕೊಡುವುದಾಗಿ
ಮಾತು." ಎಂದಂದು ತತ್ಕಾಲಕ್ಕೆ ಮಂದಿಯ ಬಾಯಿಯನ್ನು ಜಡಿದು
ಮಲೆಯಾಳದತ್ತ ಕಡೆಗೆ ಹೊರಟುಹೋದರು.

ಆದರೆ ಐತಪ್ಪನು ಬಾಯಿ ಮುಚ್ಚಿಕೊಂಡು ಸುಮ್ಮನೆ ಹೇಗಿದ್ದಾನು?
ತನ್ನನ್ನು ಸಾಲದಿಂದ ಉದ್ಧಾರ ಮಾಡಿ, ಇದ್ದ ಅರೆಗಂಜಿಯನ್ನು ಉಳಿಸಿ
ಕೊಟ್ಟ ಪದ್ಮನಾಭೈಯನ ದೇವತಾಗುಣವನ್ನು ಅವರಿವರೊಡನೆ ಹೇಳಿ
ಕೊಂಡಾಡದಿರಲಿಕ್ಕೆ ಅವನಿಂದಾಗದೆ ಹೋಯಿತು. ಅದರಿಂದ ಕ್ರಮೇಣ
ನಿಜಸಂಗತಿ ಎಲ್ಲರಿಗೂ ಗೊತ್ತಾಗಿ, "ಕೊಟ್ಟ ಭಾಷೆಗೆ ತಪ್ಪದ ಪದ್ಮನಾಭೈಯ"
ಎಂಬ ಬಿರುದನ್ನು ಕೊಡಿಸಿತು. ಅದರೊಂದಿಗೆ ಈಗ "ಇಟ್ಟ ಮುಹೂರ್ತಕ್ಕೆ
ಬಿಡದ"—ಎಂಬುದೂ ಸೇರಿ ಬಿರುದಿನ ಮಾಲೆ ಉದ್ದವಾಯಿತೆಂದು, ತಿಮ್ಮ
ಣ್ಣನಿಗೊಬ್ಬಳು ಅತ್ತಿಗೆ ಬರುವ ದಾರಿಯಲ್ಲಿ ಪುಟ್ಟದೊಂದು ರಾಮಾಯಣವೇ
ಆಯಿತು!

## ೧೭

ಹೊಸ ಅತ್ತಿಗೆಯೊಡನೆ ತಿಮ್ಮಣ್ಣ ಬಲು ಬೇಗನೆ ಪಳಗಿದನು. ಅತ್ತಿಗೆ
ಯೇನೂ ತಿಮ್ಮಣ್ಣನಿಗಿಂತ ಬಹಳ ದೊಡ್ಡವಳಲ್ಲ; ೧೧॥ ವರುಷದ ಆಟದ
ವಯಸ್ಸಿನ ಹುಡುಗಿಯೇ ಆದುದರಿಂದ ತಿಮ್ಮಣ್ಣಾದಿಗಳೊಂದಿಗೆ ಆಟಪಾಠ
ಗಳಲ್ಲೆಲ್ಲಾ ಅವಳೂ ಭಾಗಿಯಾಗುತ್ತಿದ್ದಳು. ಕೆಲವೇ ದಿನದಲ್ಲಿ ಅವಳು
ಹುಡುಗ-ಹುಡುಗಿಯರಿಗೆಲ್ಲ ಮುಂದಾಳೂ ಆದಳು. ಆದರೂ ಅತ್ತೆಯ ಮನೆಗೆ
ಸೊಸೆಯೂ ಆದುದರಿಂದ ಸೊಸೆಯ ಹಾಗೆ ಪಳಗಲೂ ಬೇಕಾಗುತ್ತಿತ್ತು.

ಬೈಲಕರೇ ದೊಡ್ಡಮ್ಮನೇ ಅತ್ತಿಗೆಯ ಮೇಲೆ ಅತ್ತೆಯ ಅಧಿಕಾರವನ್ನು
ನಡೆಸುವವರಾಗಿದ್ದರು. ರಾಮಪ್ಪಯ್ಯ ಹೇಗೂ ಅವಳಿಗೆ ಮಾವ. ರಾಮ

ಪ್ಪಯ್ಯನ ಅಧಿಕಾರವೂ ಅವಳ ಮೇಲೆ ಚೆನ್ನಾಗಿ ಆಗುತ್ತಿತ್ತು. ಆ ಅಧಿಕಾರ ಪ್ರಸಾರಣೆಯ ಕಾಲದಲ್ಲೆಲ್ಲಾ ಅತ್ತಿಗೆ ವಿಧಿಯಿಲ್ಲದೆ ಸೊಸೆಯ ಹಾಗೆ ಕೆಲಸ ಮಾಡುವಳು. ಉಳಿದ ಕಾಲಗಳಲ್ಲೆಲ್ಲಾ ತಿಮ್ಮಣ್ಣ ಕಮಲೆ ಪುಟ್ಟಂದಿರೊಂದಿಗೆ ಆಡುವಳು. ಕಂಬಾಟ–ಕಣ್ಣುಮುಚ್ಚಾಟ, ಕೋಕೋ ಕೂಗಾಟ–ಕಂಡುಹಿಡಿಯುವಾಟ ಇವೇ ಮೊದಲಾದ ಆಟಗಳಾಗಿದ್ದುವು. ಅತ್ತಿಗೆಯ ಬಾಯಿಯಿಂದ ಕಥೆ ಕೇಳುವುದೆಂದರೆ ತಿಮ್ಮಣ್ಣನಿಗೆ ಗುಜ್ಜೆಸಹಾ ಮರೆತು ಹೋಗುತ್ತಿತ್ತು. ಮಲೆಯಾಳದಲ್ಲಿಯೇ ಬೆಳೆದ ಆ ಅತ್ತಿಗೆ, ಆ ದೇಶದ ಮಂತ್ರ—ಮಾಯದ ಚಿತ್ರವಿಚಿತ್ರವಾದ ಕಥೆಗಳನ್ನು ಹೇಳಿ ತಿಮ್ಮಣ್ಣಾದಿಗಳನ್ನು ಆಶ್ಚರ್ಯಾನಂದದಲ್ಲಿ ಕೆಡಹುವಳು.

ಆದರೆ ಯಾವ ಕಥೆಯನ್ನೂ ಅವಳು ಸಂಪೂರ್ಣವಾಗಿ ಹೇಳಿ ಮುಗಿಸಲಿಕ್ಕೆ ಆಗುತ್ತಿದ್ದಿಲ್ಲ. ಅರ್ಧ ಹೇಳುವುದರೊಳಗೆ ಮಾವ ರಾಮಪ್ಪಯ್ಯ ಧುಡುಧುಡು ಬಂದು—"ಇದೇನೇ ಇದು? ಗಂಡುಹುಡುಗರೊಟ್ಟಿಗೆ ಎಂಥ ಆಟವೇ ನಿನಗೆ? ಪ್ರಾತಃರಾಹ್ನಿಕ ಕಲೀ! ಉದಯರಾಗ ಓದೂ! ಲಕ್ಷ್ಮೀ ಶೋಭಾನೆ ಹೇಳೊ! ಮಗ್ಗಿ ಬಾಯಿಪಾಠ ಕಲಿ ಕನ್ನಡ ಕಾಪೀ ಬರೀ! ನಡೀ!" ಎಂದು ಗದರಿಸುತ್ತ ಅತ್ತಿಗೆಯ ಕಿವಿ ಹಿಡಿದು ಎಳೆದುಕೊಂಡು ಹೋಗಿ, ಅವಳ ಕೈಯಲ್ಲಿ ಪುಸ್ತಕ ಕೊಟ್ಟು, ತಮ್ಮ ಕೈಯಲ್ಲಿ ಕೋಲು ಹಿಡಿದುಕೊಂಡು ಅವಳಿಗೆ ವಿದ್ಯೆ ಹೇಳಿಕೊಡುತ್ತಿದ್ದರು. ಅತ್ತಿಗೆ ಶಾಲೆಗೆ ಹೋಗಿ ಕ್ಲಾಸಿನ ಮೇಲೆ ಕ್ಲಾಸು ಕಲಿತವಳಲ್ಲ. ಮಲೆಯಾಳದಲ್ಲಿ ಒಂದನೇ ಕ್ಲಾಸಿಗೆ ಏನೋ ಏರಿದ್ದಳಂತೆ. ಆದುದರಿಂದ ಅವಳಿಗೆ ಕನ್ನಡವೇ ಬಾರದು. ಅಂತೆಯೇ ರಾಮಪ್ಪಯ್ಯ ತಮ್ಮ ಸೊಸೆಯನ್ನು ಕನ್ನಡಾದಿ ವಿದ್ಯೆಯಲ್ಲಿ ಗಟ್ಟಿಗಿತಿಯನ್ನಾಗಿ ಮಾಡಬೇಕೆಂದು ಪ್ರಯತ್ನ ಪಡುತ್ತಾರೆ. ಓದುವಾಗ ಅವಳು ಮುಣು ಮುಣಿಸಿದರೆ, "ದೊಂಡೆಯೊಡೆದು ಓದೇ?" ಎಂದು ಗರ್ಜಿಸುತ್ತಾರೆ. ಆದುದರಿಂದ ಅತ್ತಿಗೆ ಓದುವಾಗ ಆಚೆ ಈಚೆ ಮನೆಗಳಿಗೂ ಸ್ಪಷ್ಟವಾಗಿ ಕೇಳುತ್ತಿತ್ತು. ಅವಳನ್ನು ಕೆಲಸ ಕಾರ್ಯಗಳಲ್ಲಿ ಗಟ್ಟಿಗಿತಿಯನ್ನಾಗಿಸುವ ಹೊಣೆ ದೊಡ್ಡಮ್ಮನದು. ಹೀಗೆ ದೊಡ್ಡತ್ತೆ, ದೊಡ್ಡಾವ ಎಂದರೆ ಅತ್ತಿಗೆಗೆ ಬಹಳ ಅಂಜಿಕೆ.

ಆದರೆ ಸಣ್ಣಾವ ಪದ್ಮನಾಭೈಯನೆಂದರೆ ಅತ್ತಿಗೆಗೆ ಏನೂ ಭಯವಿಲ್ಲ. ಬದಲಾಗಿ ಸಲಿಗೆಯೇ. ಅವರು ಅತ್ತಿಗೆಯೊಂದಿಗೆ ಒಮ್ಮೊಮ್ಮೆ ಹುಡುಗರ ಹಾಗೆ ಆಡುವರು; ನಗುವರು; ನಗಿಸುವರು. ಅವರು ಇಡೀ ಗುಜ್ಜೆ ಕದ್ದು

ತಿಂಮುದಕ್ಕೆ ತಿಮ್ಮಣ್ಣನು ಕಟ್ಟಿದ ಆ ಪದವನ್ನು, ಅತ್ತಿಗೆ ಪ್ರತ್ಯೇಕವಾದ ಉಮೇದಿನಿಂದ ಚೆನ್ನಾಗಿ ಕಲಿತು, ಗಟ್ಟಿಯಾಗಿ ಹಾಡುತ್ತ, ದೊಡ್ಡಮ್ಮ-ದೊಡ್ಡಪ್ಪಾವ ಇಲ್ಲದ ವೇಳೆಯಲ್ಲಿ ಬಹಳ ಗಲಾಟೆ ಮಾಡುತ್ತಿದ್ದಳು. ಅತ್ತಿಗೆಯೊಂದಿಗೆ ತನ್ನ ದನಿಯನ್ನೂ ಸೇರಿಸಿಕೊಂಡು ತಿಮ್ಮಣ್ಣ ಕೈ ತಟ್ಟಿಕೊಂಡು ಕುಣಿಯುತ್ತಿದ್ದನು. ಅವರುಗಳ ದನಿಯೊಂದಿಗೆ ಕಮಲೆಯ ಕೊರಳೂ ಪುಟ್ಟನ ಕೂಗೂ ಬೆರೆತುಕೊಂಡುವು. ಗಾರ್ದಭಾದಿ ಮೃಗಸಂಗೀತದಂತೆ ಅದು ಪ್ರಾರಂಭವಾಗಿತ್ತು!

ಆಗ ಸಂಜೆಯ ಸಮಯವಾಗಿತ್ತು. ಪದ್ಮನಾಭೈಯ ಆಗ ಅಡುಗೆ ಮನೆಯಲ್ಲಿ ಮಡಿಯಾಗಿ ಕುಳಿತುಕೊಂಡು, ಹಿಟ್ಟಿನ ಮುದ್ದೆಯನ್ನು ಅಂಡೆಯಲ್ಲಿ ಹಾಕಿ ಚಕ್ಕುಲಿ ಸುತ್ತುತ್ತಿದ್ದರು. ಜಲಜಮ್ಮ ತೆಗೆತೆಗೆದು ಬಾಣಾಲೆಯ ಕಾದೆಣ್ಣೆಯೊಳಗೆ ಹಾಕಿ ಚಕ್ಕುಲಿ ಕಾಯಿಸುತ್ತಿದ್ದಳು. ಸುವಾಸನೆ ಸುತ್ತಲೂ ಇಡುಗಿತ್ತು.

ಆ ದಿನ ಶ್ರೀಕೃಷ್ಣಾಷ್ಟಮಿ; ಭಾರತಾಂತರಾತ್ಮನ ಜನ್ಮ ದಿನ. ಅಖಿಲ ಭಾರತಕ್ಕೇ ದೊಡ್ಡ ಹಬ್ಬ. ಹಲ್ಲಿಲ್ಲದ ಶಿಶುವಾದ ಶ್ರೀಕೃಷ್ಣಮೂರ್ತಿಗೆ, ಬಗೆಬಗೆಯ ಲಡ್ಡುಂಡೆ-ಚಕ್ಕುಲಿಗಳನ್ನು ಮಾಡಿ ಸಮರ್ಪಿಸಬೇಕಾದ ಪರ್ವ ದಿನ. ಅಂದು ಮುಂಜಾನೆ ಎದ್ದ ಕೂಡಲೇ ಪದ್ಮನಾಭೈಯ—"ಅದ್ಯಸ್ಥಿತ್ವಾ ನಿರಾಹಾರ ಶ್ಶ್ವೋ ಭೂತೇ ಪುರುಷೋತ್ತಮ, ಭೋಕ್ಷ್ಯಾಮಿ ಪುಂಡರೀಕಾಕ್ಷ ಹ್ಯಸ್ಮಿನ್ ಕೃಷ್ಣಾಷ್ಟಮೀ ದಿನೇ" ಎಂದು ಹೇಳಿಸಿ, ಅಷ್ಟಮಿಯನ್ನು ಜ್ಞಾಪಕ ಪಡಿಸಿ, ತಿಮ್ಮಣ್ಣನನ್ನು ಹಗಲಿಡೀ ಉಪವಾಸವಿರುವಂತೆ ಮಾಡಿದ್ದರು. ಆದರೆ ಹೆಸರಿಗೆ ಮಾತ್ರ ಉಪವಾಸವೆಂದು, ಫಲಹಾರಗಳಿಂದ ಉಪಹಾಸ ಮಾಡಿ ಹೊಟ್ಟೆ ತುಂಬಿಸಿಕೊಂಡಿರುವ ತಿಮ್ಮಣ್ಣಾದಿ ಹುಡುಗರು, ಒಳಗಿನಿಂದ ಬರುವ ಉಂಡೆ-ಚಕ್ಕುಲಿಗಳ ವಾಸನೆಯಿಂದ ಮೂಗನ್ನು ಅರಳಿಸಿಕೊಂಡು, ಅಡುಗೆ ಮನೆಯ ಸುತ್ತಲೂ ನಿರ್ಭಯದಿಂದ ಸುತ್ತುವ ಇಲಿಗಳ ಹಾಗೆ ಸುತ್ತುತ್ತ ಬಹಳ ಗಲಾಟೆ ಮಾಡುತ್ತಿದ್ದರು.

ಬರುವುದಾದರೆ ಪದ್ಮನಾಭೈಯನಿಗೆ ಕೋಪವು ಫಕ್ಕನೆ ಬಂದುಬಿಡುತ್ತದೆ. ಮೊದಲೇ ಕೆಸ್ನೀರೊಸರುವ ಅವರ ಕಣ್ಣು ಕೋಪ ಬಂದ ಕೂಡಲೇ ಕೆಂಡದ ಹಾಗಾಗುತ್ತಿತ್ತು. ಆದರೆ ಮಕ್ಕಳ ಮೇಲೆ ಬಂದ ಕೋಪವು ಫಕ್ಕನೆ ಶಾಂತವಾಗಿಯೂ ಹೋಗುತ್ತದೆ. ಆ ಕರ್ಕಶವಾದ

ಗಲಾಟೆಯನ್ನು ಕೇಳಿ ಪದ್ಮನಾಭೈಯನಿಗೆ ಫಕ್ಕನೆ ಸಿಟ್ಟುಬಂತು. ಅವರಿಂದು ಉಪವಾಸ ಬೇರೆ ಮಾಡಿದ್ದ ಕಾರಣ ಕೋಪವು ಕವಕ್ಕನೆ ಏರಿಬಂತು.

"ಛೀ! ಕತ್ತೆಗಳಾ! ಮುಚ್ಚಿರಾ ಬಾಯಿ!" ಎಂದು ಗೋಡೆಗಳು ಅದುರುವಂತೆ ಒಂದು ಹೆಗ್ಗರ್ಜನೆ ಮಾಡಿದರು. ಹೊಗೆಯಿಂದ ಕೆಂಪೇರಿದ ಕೆಂಗಣ್ಣು ಕೋಪದಿಂದ ಕೆಂಡವಾಗಿತ್ತು!

ಆ ಮಹಾ ಗಲಾಟೆ ಗಬಕ್ಕನೆ ನಿಂತುಹೋಯಿತು, ಗಫ್ ಛಿಪ್! ಅಷ್ಟು ಜೋರಿತ್ತು ಅವರ ಆ ಮುಖಭಾವವೂ ಶಬ್ದವೂ!

ಆದರೆ ಅತ್ತಿಗೆ ಮಾತ್ರ ಸ್ವಲ್ಪ ಹೊತ್ತಿನ ಮೇಲೆ ಸಲಿಗೆಯಿಂದ, ಮೆಲ್ಲ ಮೆಲ್ಲನೆ ಪದ್ಮನಾಭೈಯನ ಮುಖಭಾವವನ್ನು ಪರೀಕ್ಷಿಸುತ್ತ, ಹಾವಿನ ಮುಂದೆ ಪುಂಗಿಯ ಧೈರ್ಯದಿಂದ ಆಡುವ ಹಾವಾಡಿಗನಂತೆ, ಧೈರ್ಯಮಾಡಿ—"ಬಾಯಿ ಮುಚ್ಕೋದು ಅಂದರೇನು ಮಾವಾ?" ಎಂದು ಒಯ್ಯಾರದಿಂದ ಕೇಳಿದಳು.

ಕೊಂಚ ಕೊಂಚವಾಗಿ ಶಾಂತಮುಖಿಗಳಾಗುತ್ತಾ ಬರುವ ಪದ್ಮನಾಭೈಯ—"ಬಾಯಿ ಮುಚ್ಕೋದು ಅಂದರೆ ತಂಟೆಗಿಂಟೆ ನಿಲ್ಲಿಸುವುದು." ಅಂದರು.

"ತಂಟೆ—ಗಿಂಟೆ ಅಂದರೆ?"—ಎಂದಳು ಪುನಃ ಅತ್ತಿಗೆ.

ಪದ್ಮನಾಭೈಯ ಬುದ್ಧಿ ಹೇಳುವಂತಹ ಸ್ವರದಿಂದ—"ತಂಟೆಗಿಂಟೀ ಅಂದರೆ ಕಂಡಾಬಟ್ಟೆ ಚಿರೀಪಿರೀ ಕೂಗೋದು-ಹಾರೋದು-ಕುಣಿಯೋದು-ಸೊಕ್ಕೋದು!"

"ಕಂಡಾಬಟ್ಟೆ ಚಿರೀಪಿರೀ ಅಂದರೇನು ಮಾವಯ್ಯಾ?"

"ಠಾವು—ಠಿಕಾಣಿಯಿಲ್ಲದೆ ಧಿಮಿಕೋದು!" ಎಂದು ಒತ್ತಿ ಹೇಳಿದರು ಪದ್ಮನಾಭೈಯ.

ಅತ್ತಿಗೆ ಮತ್ತೂ ಬಿಡದೆ—"ಠಾವು—ಠಿಕಾಣಿ—ಅಂದರೆ?"

"ಅಂದ್ರೆ ಲೆಕ್ಕಾ ಪಕ್ಕಾ ಇಲ್ಲದೆ ಹಾರೋದು!"—ಪದ್ಮನಾಭೈಯ ಇನ್ನಷ್ಟು ಗಟ್ಟಿಯಾಗಿ ಕೂಗಿದರು.

"ಲೆಕ್ಕ ಪಕ್ಕಾ ಅಂದರೆ?"

ಬೆನ್ನಿಗೆರಡು ಪೆಟ್ಟು!"—ಎಂದು ಚೀರಿ ಪದ್ಮನಾಭೈಯ ಹುಲಿಯಂತೆ ಕೆಂಗಣ್ಣು ತಿರುಗಿಸಿಕೊಂಡು, ಹಿಟ್ಟಿನ ಕೈಯನ್ನು ಅಗಲಿಸಿ ಚೀರಿಕೊಂಡೇ ಅತ್ತಿಗೆಯ ಮೇಲೆ ಹಾರಿದರು.

ಅತ್ತಿಗೆ-ತಿಮ್ಮಣ್ಣಾದಿಗಳೆಲ್ಲಾ "ಹೋ! ಹಾ!" ಎಂದು ಕೂಗಿ ಹೊರಗೆ ತೋಟದ ಕಡೆಗೆ ಓಡಿದರು. ಪದ್ಮನಾಭೈಯು ಹಾರಿದಾಗ, ಜಲಜಮ್ಮ "ಅಯ್ಯೋ! ಮಡೀ!" ಎಂದು ಕೂಗಿ ಎಚ್ಚರಿಸದಿರುತ್ತಿದರೆ, ಪದ್ಮನಾಭೈಯು ಹುಡುಗರ ಬೆನ್ನಟ್ಟದಿರುತ್ತಿದ್ದಿಲ್ಲ. ಹುಡುಗರಾದರೂ ಹೆದರಿಕೆಯಿಂದ ವಿಶೇಷ ಗಲಾಟೆ ಮಾಡಲಿಲ್ಲ. ತೋಟದಲ್ಲಿ ತಿಮ್ಮಣ್ಣನೂ ಅತ್ತಿಗೆಯೂ ಪಿಸುಪಿಸುವಾದ ದನಿಯಿಂದ, ಅತ್ತಿಗೆಗೂ ಪದ್ಮನಾಭೈಯನಿಗೂ ಆದ ಸಂಭಾಷಣೆಯನ್ನೆ ಮತ್ತೂ ಮತ್ತೂ ಹೇಳಿ ಹೇಳಿ ನಗುತ್ತ, ಸ್ವಲ್ಪ ಹೊತ್ತಿಗೆಲ್ಲಾ ಅದು ಅವರೊಳಗೆ ಹೀಗೊಂದು ಡೈಲಾಗ್ ಹಾಡೇ ಆಯಿತು.

ತಿಮ್ಮಣ್ಣ—"ಕತ್ತೆಗಳಾ ಮುಚ್ಚೀಬಾಯಿ!"

ಅತ್ತಿಗೆ—"ಮುಚ್ಚೀಬಾಯಿ ಅಂದರೆ?"

ತಿಮ್ಮಣ್ಣ—"ತಂಟೆ-ಗಿಂಟೆ ನಿಲ್ಲಿಸೋದು!"

ಅತ್ತಿಗೆ—"ತಂಟೆ-ಗಿಂಟೆ ಅಂದರೆ?"

ತಿಮ್ಮಣ್ಣ—"ಕಂಡಾಬಟ್ಟೆ ಚಿರೀಪಿರೀ-ಕೂಗೋದು-ಹಾರೋದು-ಕುಣಿಯೋದು!"

ಅತ್ತಿಗೆ—"ಕಂಡಾಬಟ್ಟೆ ಚಿರೀಪಿರೀ-ಅಂದರೇನು ಮಾಮಯ್ಯ?"

ತಿಮ್ಮಣ್ಣನು ಸಿಟ್ಟಿನಿಂದ ಅತ್ತಿಗೆಯನ್ನು ಓಡಿಸುತ್ತ—"ಠಾವು-ಠಿಕಾಣಿ-ಲೆಕ್ಕ-ಪಕ್ಕ-ಬೆನ್ನಿಗೆರಡು ಪೆಟ್ಟು!—

ಅಷ್ಟಮಿಯ ಚಕ್ಕುಲಿಯ ಗಟ್ಟಿ ಉಂಡೆ ಹಿಟ್ಟು!"

ಆ ದಿನ ರಾತ್ರಿ ಚಂದ್ರೋದಯವಾಗಿ, ಕೃಷ್ಣಾರ್ಘ್ಯ ಬಿಟ್ಟು ಫಲಾಹಾರವಾಗುವ ವರೆಗೆ ತಿಮ್ಮಣ್ಣಾದಿಗಳು ತೋಟದಲ್ಲಿ ಆ ಹಾಡನ್ನೆ ಉರುಹಾಕಿ ಹಾಕಿ ಆಡಿದರು! ಹಾಡಿದರು! ಕುಣಿದರು!

## ೧೮

ಪದ್ಮನಾಭೈಯನ ಸಿಟ್ಟಿನ ಕತೆ ಇಷ್ಟಕ್ಕೇ ಮುಗಿಯಿತು ತಮಾಷೆಯಾಗಿ ಎಂದು ತಿಳಿದು ಬಿಡಬೇಡಿ. ಪದ್ಮನಾಭೈಯನ ಸಿಟ್ಟಿನ ಕತೆಯೆಂದು ಏಕೆ ಹೇಳುವೆನೆಂದರೆ, ಅವರು ಸರ್ವದಾ ಸಿಟ್ಟಿನವರಲ್ಲವೆಂಬುದರಿಂದಲೇ, ಸರ್ವದಾ ಸಿಟ್ಟಿನವರ ವಿಷಯವಾಗಿ ಹೇಳುವಂತಹುದೇನಿದೆ ಹೇಳಿ? ಯಾವಾಗಲಾದರೊಮ್ಮೆ ಬರುವ ಸಿಟ್ಟಾದರೆ ಅದನ್ನು ಹೇಳಲಿಕ್ಕೂ ಕೇಳಲಿಕ್ಕೂ ಒಂದು ರುಚಿಯುಂಟು.

ಪದ್ಮನಾಭೈಯನಿಗೆ ಯಾವಾಗಲೂ ಸಿಟ್ಟು ಬರಿಸುವ ಒಂದು ವಿಷಯ ಮಾತ್ರವುಂಟು—ಅದು ಅವರಿಗೆ ಹುಟ್ಟುವ ಹೆಣ್ಣು ಮಗು. ಹೆಣ್ಣು ಮಗು ಹುಟ್ಟಿದರೆ ಅವರಿಗೆ ಉರಿಗೋಪವೇ! ಹೆಣ್ಣುಮಗು ತಂದೆಯ ಪಾಲಿಗೆ ಶನಿ ಯೆಂದೇ ಅವರ ಖಂಡಿತಾಭಿಪ್ರಾಯ. ತಿಮ್ಮಣ್ಣನ ತಂಗಿ ಕಮಲೆ ಹುಟ್ಟಿ ದಾಗ ಬಹಳ ಸಿಟ್ಟಾಗಿದ್ದರು. ಆದುದರಿಂದ ಜಲಜಮ್ಮ ಪತಿಯ ಸಿಟ್ಟನ್ನು ಶಾಂತಪಡಿಸಲಿಕ್ಕಾಗಿ ಮೂರನೆಯ ಬಾರಿ ಗಂಡು ಮಗು ಪುಟ್ಟನನ್ನು ಹೆತ್ತು ಕೊಟ್ಟು, ಗಂಡನನ್ನು ಸಂತೋಷಪಡಿಸಿದಳೇನೋ! ಆದರೂ ತಾಯಂದಿರಿಗೆ ಹೆಣ್ಣುಮಕ್ಕಳ ಮೇಲೆ ಸ್ವಲ್ಪ ಪ್ರತ್ಯೇಕವಾದ ವಾಂಛೆ ಇರುವ ಹಾಗೆ ಕಾಣು ತ್ತದೆ. ನಾಲ್ಕನೆಯ ಬಾರಿ ಹೆಣ್ಣು ಮಗುವನ್ನೆ ಹೆತ್ತುಬಿಟ್ಟಳು. ಸೂತಿಕಾ ಗೃಹದಿಂದ ಹೆಣ್ಣುಮಗುವಿನ ಕೂಗು, "ಂಲ್ಲ್ಯಾಂ! ಂಲ್ಲ್ಯಾಂ!" ಎಂದು ಕಿವಿಗೆ ಬೀಳುತ್ತಲೇ, ಪದ್ಮನಾಭೈಯ ಆ ಸ್ವರದ ಪರಿಮಾಣದಿಂದಲೇ ಹೆಣ್ಣೆಂದು ತಿಳಿದು, ಪುಟ್ಟನನ್ನು ಎತ್ತಿಕೊಂಡು ಹೊರಗೆ ಹೋಗಿಬಿಟ್ಟರು–ಸಂತಾಪದಿಂದ! ಒಂದೆರಡು ಹೆಣ್ಣು ಹುಟ್ಟಿದ್ದಕ್ಕೇ ಹಾಗೆ ಮಾಡಿದವರು ಪೂರಾ ಹೆಣ್ಣೇ ಹುಟ್ಟಿರುತ್ತಿದ್ದರೆ ಏನು ಮಾಡುತ್ತಿದ್ದರೋ! ಪಾಪ! ಹೆತ್ತ ನಾಲ್ಕು ಮಕ್ಕಳೂ ಗಂಡಾಗಿರುತ್ತಿದ್ದರೆ ಅವರಿಗೆ ಬಲು ಸಂತೋಷವಾಗುತ್ತಿತ್ತು–ಮುಂದೆ ಕೌರವ ಪಾಂಡವರ ಹಾಗೆ ದಾಯಾದ ಕಲಹ ಮಾಡಿಕೊಂಡು, ಇದ್ದ ಒಂದು ಚೂರು ಆಸ್ತಿಯನ್ನು ಹರಿದುಹಂಚಿ ಚಂಪನಚೂರು ಮಾಡಿಕೊಳ್ಳುವ ಗಂಡುಗಲಿ ಗಳನ್ನು ನೋಡಿ! ಆದರೆ ಜಲಜಮ್ಮ ಪಕ್ಷಪಾತವಿಲ್ಲದೆ ಎರಡು ಗಂಡು ಎರಡು ಹೆಣ್ಣು ಹೀಗೆ ಸರಿಸಮವಾಗಿಯೇ ಹೆತ್ತಿದ್ದಾಳೆ. ಈ ನ್ಯಾಯವು ಪದ್ಮನಾಭೈಯನಿಗೆ ಅನ್ಯಾಯವಾಗಿಯೇ ತೋರಿತು. ತೊಟ್ಟಿಲಲ್ಲಿ ಹೆಣ್ಣು ಮಗು "ಕ್ಯಾಂ—" ಎಂದರೆ ತೀರಿತು; ತಮ್ಮ ಸಿಟ್ಟನ್ನು ಆ ಹಸುಗೂಸಿನ ಮೇಲೆಯೇ ತೋರಿಸಲಾರಂಭಿಸುವರು. ಅದು ಅತ್ತತ್ತು ಹೆದರಿ ಚಡಪಡಿಸಿ ಉಸಿರುಗಟ್ಟಿ ಹೋಗುವ ಹಾಗೆ ಹಿಡಿಗಡ್ಡಿಯ ಕೊನೆಯಿಂದ ಸೊಂಯ್ಯು ಸೊಂಯ್ಯನೆ ಕಾಯಿಸುವರು. ಈ ಅತ್ಯಾಚಾರದ ನೋಟವನ್ನು ನೋಡುತ್ತಾ ತಿಮ್ಮಣ್ಣ-ಪುಟ್ಟಣ್ಣರು ಗಡಗಡನೆ ನಡುಗುವರು. ಆಗ ಬೈಲಕರೆ ದೊಡ್ಡಮ್ಮ- "ಏ ಮಾಣಿಗಳಾ! ನೀವ್ಯಾಕೆ ಹೆದರಿ ಸಾಯ್ತೀರಿ? ನೀವೇನು ಪೋಕಲಾಟ ಮಾಡಿದರೂ ನಿಮ್ಮನ್ನು ಹೊಡಿಯೋದಿಲ್ಲ ನಿಮ್ಮಪ್ಪಾ! ಏನೂ ಮಾಡದ ಪಾಪದ ಹೆಣ್ಣುಮಗೂ ಅಂದರೆ ಅಷ್ಟು ಸಸಾರ ನಿಮ್ಮಪ್ಪನಿಗೆ!" ಎಂದು ಚುಚ್ಚು ಮಾತುಗಳನ್ನಾಡುತ್ತಾರೆ. ಜಲಜಮ್ಮ—"ಅಯ್ಯೋ! ಪಾಪ! ಬೇಡೀ!

ಬೇಡೀ! ಮಗೂನ ಹೊಡಿಯೋಣುಂಟೇ? ಅಯ್ಯೊ!" ಎಂದು ಕರುಳಿಸಿಂಪ ಕೂಗುತ್ತ ನಿವಾರಿಸಲು ಪ್ರಯತ್ನಿಸಿದರೆ, ಅವಳನ್ನೂ ನಖಶಿಖಾಂತವಾಗಿ ಹೊಡೆಯುತ್ತಿದ್ದರು—ಜಮದಗ್ನಿಯ ಹಾಗೆ! ಹೆಣ್ಣು ಮಗುವನ್ನು ಕಂಡ ರಾಗದು ಅವರಿಗೆ!

ಆದರೆ ತಿಮ್ಮಣ್ಣ—ಪುಟ್ಟಣ್ಣಂದಿರು ಏನು ತಂಟೆ ಮಾಡಿದರೂ ಅವರಿಗೆ ಹಾಗೆ ಪೆಟ್ಟುಕೊಟ್ಟವರಲ್ಲ. ತಿಮ್ಮಣ್ಣ ತಂದೆಗೆ ಸಿಟ್ಟುಬರುವ ಹಾಗೆ ಎಷ್ಟೋ ತಪ್ಪುಗಳನ್ನು ಮಾಡಿದ್ದಾನೆ. ಆಗ ಸಿಟ್ಟು ಉಕ್ಕಿ ಹೊಡೆಯಲಿಕ್ಕಾಗಿ ಕೈಯನ್ನು ಎತ್ತಿ ಕೆಳಗಿಳಿಸಿದ್ದಾರೆಯೇ ಹೊರತು ಪೆಟ್ಟಾಗಿ ಅಪ್ಪಳಿಸಲಿಲ್ಲ. ಅಷ್ಟು ಕೊಂಡಾಟ ಗಂಡು ಮಕ್ಕಳೆಂದರೆ!—ಆದರೆ ಹೌದು ಹೌದು. ಪದ್ಮ ನಾಭೈಯ ತಮ್ಮ ಇಡಿಯ ಜೀವಮಾನದಲ್ಲಿ ತಿಮ್ಮಣ್ಣನಿಗೆ ಕೊಟ್ಟ ಪೆಟ್ಟೆಂದರೆ ಎರಡೂವರೆ ಪೆಟ್ಟು! ಮೊದಲನೇ ಪೆಟ್ಟು ತಿಮ್ಮಣ್ಣನ ಆ ಕೆಳದುಟಿಯನ್ನು ಕಾಣುವಾಗಲೇ ನೆನಪಿಗೆ ಬಂದುಬಿಡುತ್ತದೆ.

ತಿಮ್ಮನಿಗೆ ಚಿಕ್ಕಂದಿನಲ್ಲಿ ಕೆಳದುಟಿಯನ್ನು ಕಚ್ಚಿಕೊಳ್ಳುವುದೊಂದು ದುರಭ್ಯಾಸವಿತ್ತು. ಎರಡು ಬೆರಳುಗಳಿಂದ ಕೆಳದುಟಿಯನ್ನು ಸಂಕುಚಿತ ಪಡಿಸಿ, ಹಲ್ಲುಗಳೆಡೆಯಲ್ಲಿ ತೂರಿಸಿ ತೂರಿಸಿ ಹೊರಗೆ ಬಿಡುತ್ತಾ ಇರುವನು. "ಹಾಗೆ ಮಾಡಬೇಡವೋ ಮಂಗ! ತುಟಿ ಜೋತು ಬಿದ್ದುಹೋದೀತು!" ಎಂದು ತಂದೆ ಅನೇಕ ತಡವೆ ಬುದ್ಧಿ ಹೇಳಿದರೂ ಅವನು ಆ ದುರಭ್ಯಾಸ ವನ್ನು ಬಿಟ್ಟಪಾಡಿಲ್ಲ. ಇದರ ಫಲವಾಗಿ ತಿಮ್ಮಣ್ಣನ ಕೆಳದುಟಿ ದಪ್ಪವಾಗುತ್ತಾ ಬಂತು. ಒಂದು ದಿನ ಅವನು ಹಾಗೆ ತುಟಿ ಕಚ್ಚಿಕೊಳ್ಳುತ್ತಿರುವಾಗ, ಪದ್ಮನಾಭೈಯ ಎಲ್ಲಿದ್ದರೋ ಏನೋ—ರೋಷಭೀಷಣರಾಗಿ ಬಿರುಗಾಳಿಯಂತೆ ಬಂದು,—"ಘಟಿಂಗ! ತುಟಿ ಕಚ್ಚಬೇಡಾಂತ ಎಷ್ಟು ಹೇಳಿದರೂ ನಾಟದೇ?" ಎಂದು ಛಟೀಲೆಂದು ಅವನ ತೊಡೆಯ ಮೇಲೆ ಅಂಗೈಯಿಂದ ಹೊಡೆದು ಬಿಟ್ಟರು. ಸಿಗಿಸಿಗಿ ಕೆಂಡದಿಂದ ಕಾಯಿಸಿದ ಹಾಗಾಯಿತು. ತಿಮ್ಮಣ್ಣ ಚಿಟ್ಟೆಂದು ಚೀರಿದನು! ಆ ಸಪ್ಪಳನ್ನು ಕೇಳಿ ಜಲಜಮ್ಮ ಓಡೋಡಿ ಬಂದು— "ಅಯ್ಯೋ ದೇವರೆ! ತೊಡೆ ಬಾತಿತಲ್ಲ!"—ಎಂದು ಮರುಗುತ್ತ ತಿಮ್ಮಣ್ಣನ ತೊಡೆಯನ್ನು ತಡವಿದಳು. ತಂದೆಯ ಐದು ಬೆರಳುಗಳೂ ಅಪ್ಪಗಳಾಗಿ ಎದ್ದು ಬಂದಿದ್ದುವು. ಅವನ ಕಣ್ಣಿನಿಂದ ಇಳಿಯುವ ನೀರನ್ನು ತಾಯಿ ತನ್ನ ಸೆರಗಿನಿಂದ ಒರಸುತ್ತ—"ಅಯ್ಯೊ! ಅಪ್ಪೊ! ಇನ್ನು ಮೇಲೆ ತುಟಿ ಕಚ್ಚ ಬೇಡಪ್ಪ!" ಎಂದು ಅವನನ್ನು ಒಳಕ್ಕೆ ಕರೆದುಕೊಂಡು ಹೋಗಿ, ಬೆಲ್ಲದ

ಮುದ್ದೆಯನ್ನು ಬಾಯಿಯೊಳಗೆ ಹಾಕಿ, ತೆಂಗಾಯಿತುರಿಯನ್ನು ಅವನ ಅಂಗೈಯಲ್ಲಿಟ್ಟು, ತುಟಿಯಲ್ಲಿದ್ದಿರುವ ಪೆಟ್ಟಪ್ಪಗಳಿಗೆ ತೆಂಗಿನೆಣ್ಣೆಯನ್ನು ಸವರಿದಳು. ಅಂದಿನಿಂದ ಅವನು ತುಟಿ ಕಚ್ಚುವ ಅಭ್ಯಾಸ ಬಿಟ್ಟರೂ, ಅದು ವರೆಗೆ ಪಳಗಿದುದರ ಗುರುತಾಗಿ, ಇಂದಿಗೂ ಅವನ ಕೆಳದುಟಿ ದಪ್ಪ ವಾಗಿ ಜೋತುಕೊಂಡು ಮುಖಕ್ಕೊಂದು ವಿಕಾರವಾಗಿದೆ.

೧೯

ಇನ್ನೊಂದು ಪೆಟ್ಟಿನ ಕತೆ ತಿಮ್ಮಣ್ಣನು ಶಾಲೆಗೆ ಹೋಗುವಾಗ ನಡೆ ದದ್ದು. ಅವನಿಗೆ ಚಿಕ್ಕಂದಿನಿಂದಲೂ ಕತ್ತರಿ—ಕಾಗದ—ಪೆನ್ಸಿಲು ಬಣ್ಣ ಗಳು ಮೊದಲಾದ ಚಿತ್ರಕಲೆಗೆ ಸಂಬಂಧಪಟ್ಟ ವಸ್ತುಗಳ ಮೇಲೆ ದೊಡ್ಡ ಹುಚ್ಚು ಇತ್ತು. ತಂದೆ ಅವನಿಗೆ ಬಣ್ಣಗಿಣ್ಣಗಳೊಂದೂ ತೆಗೆಸಿ ಕೊಟ್ಟಿರ ಲಿಲ್ಲ. ಕಾಗದ—ಪೆನ್ಸಿಲು—ರಬ್ಬರು ಇವಿಷ್ಟು ಮಾತ್ರವೇ ತೆಗೆಯಿಸಿ ಕೊಟ್ಟಿದ್ದರು. ಬಣ್ಣದ ಕಡ್ಡಿಗಳಿಗಾಗಿ ಹಟವನ್ನು ಮಾಡಿದರೆ, "ಅದೆಲ್ಲ ದೊಡ್ಡವನಾದ ಮೇಲೆ. ಈಗ ಸ್ಲೇಟು-ಪೆನ್ಸಿಲು-ಕಾಗದಗಳೇ ಸಾಕು." ಎಂದು ತಂದೆಯ ಕಠೋರ ಶಾಸನವಾಗುತ್ತಿತ್ತು. ಶಾಲೆಯಲ್ಲಿ ಜೋಡುಬಳೆ ವೆಂಕಟರಾಯ ಮಾಸ್ತರು ತೋರಿಸಿದ ಚಿತ್ರಗಳನ್ನೆಲ್ಲಾ ತಿಮ್ಮಣ್ಣನು ನೆನೆದು ಕೊಂಡು, ಮನೆಗೆ ಬಂದ ಮೇಲೆ ಪೆನ್ಸಿಲಿನಿಂದ ಹಾಗೆಯೇ ಬರೆಯಲಿಕ್ಕೆ ಹೋಗಿ ಹೇಗೆ ಹೇಗೋ ಬರೆದು, ಅರಸಿನ ಕೋಡನ್ನು ತೇದಿ ಕೆಲವು ಭಾಗ ಗಳಿಗೂ, ಅದಕ್ಕಿಷ್ಟು ಸುಣ್ಣವನ್ನು ಬೆರೆಸಿ ಕೆಂಪು ಮಾಡಿ ಇನ್ನಿಷ್ಟು ಭಾಗ ಗಳಿಗೂ ಹಚ್ಚಿ, ಬಣ್ಣದ ಚಿತ್ರವನ್ನು ಬರೆಯುವ ದಾಹವನ್ನು ತೀರಿಸಿ ಕೊಳ್ಳುತ್ತಿದ್ದನು.

ಪದ್ಮನಾಭೈಯ ಬೀಸಣಿಗೆ–ಮಂಟಪ ಮುಂತಾದ ಕೆಲಸಕ್ಕಾಗಿ ಒಂದು ಕತ್ತರಿಯನ್ನು ಇಟ್ಟುಕೊಂಡಿದ್ದರು. ಅದರಿಂದ ಬ್ಯಾಗಡೆಗಳನ್ನೂ ಬಣ್ಣದ ಕಾಗದಗಳನ್ನೂ ಕತ್ತರಿಸಿ,ಹೂವಿನ ಗೊಂಡೆಯೆ ಮೊದಲಾದುವುಗಳನ್ನು ಅವರು ಮಾಡುವುದನ್ನು ನೋಡುವಾಗ ತಿಮ್ಮನಿಗೂ ಹಾಗೆಯೇ ಮಾಡಬೇಕೆಂಬ ಬಯಕೆ ಹುಟ್ಟುತ್ತಿತ್ತು. ಅದಕ್ಕೆ ಮುಖ್ಯವಾಗಿ ಬೇಕಾಗಿದ್ದುದು ಕತ್ತರಿ. "ನನಗೊಂದು ಕತ್ತರಿ ಬೇಕಪ್ಪಾ" ಎಂದು ತಂದೆಯೊಡನೆ ಕೇಳಿ ನೋಡಿದನು. ಅವರು ಕಣ್ಣು ಕೆಂಪು ಮಾಡಿ—"ಮುಚ್ಚು ಬಾಯಿ! ಈಗ ಕತ್ತರಿಯಾಕೋ ನಿನಗೆ? ಕೈಕಾಲು ಕತ್ತರಿಸಿಕೊಳ್ಳಲಿಕ್ಕೊ? ಮಂಗ! ಕತ್ತರೀ ಅಂತ ಉಸಿ ರೆತ್ತಿದರೆ ಬೆನ್ನ ಚರ್ಮ ಸುಲಿದುಬಿಟ್ಟೇನು!" ಎಂದು ಗದರಿಸಿ ಬಿಟ್ಟರು.

ಆ ಮೇಲೆ ತಂದೆಯ ಹತ್ತಿರ ಕತ್ತರಿಯ ಸುದ್ದಿ ಎತ್ತಲಿಕ್ಕೆ ಭಯವಾಗುತ್ತಿತ್ತು. ಹಿಂದೆ ಒಂದಾನೊಂದು ದಿನ ತಿಮ್ಮಣ್ಣ ತಂದೆಯ ಕತ್ತರಿಯನ್ನು ಮೆಲ್ಲನೆ ಜಾರಿಸಿಕೊಂಡು, ಜಲಜಮ್ಮ ತೆಂಗಿನಕಾಯಿ ತುರಿಯುತ್ತಿರುವಾಗ ಮೆಲ್ಲನೆ ಅವಳ ಹಿಂದೆ ನಿಂತು, ಅವಳ ಸೀರೆಯ ಕೊನೆಯನ್ನು ಕತ್ತರಿಸಿಬಿಟ್ಟಿದ್ದನು. ಈ ಮಂಗ ಬುದ್ಧಿಗೆ ಸರಿಯಾದ ರೀತಿಯಲ್ಲಿ ತಾಯಿಯ ಕೈಯಿಂದ ಹಿಡಿಗತ್ತಿಯ ಖಾರವನ್ನೂ ಪಡೆದಿದ್ದನು. ಆ ಮೇಲೆ ಅವನು "ಕತ್ತರಿ ಬೇಕೆಂದು" ತಂದೆಯೊಡನೆ ಕೇಳಿದ್ದನ್ನು ಜಲಜಮ್ಮ ಒಳಗಿನಿಂದಲೇ ಕೇಳಿ ಗಟ್ಟಿಯಾಗಿ—"ಬೇಡಾ! ತಿಮ್ಮೂಗೆ ಕತ್ತರಿಗಿತ್ತರೀ ಎಲ್ಲಾದರೂ ತೆಗೆಸಿಕೊಟ್ಟೇರಿ! ಬೇಡಾ! ಮೊನ್ನೆ ಒಂದಿನ ನಿಮ್ಮ ಕತ್ತರೀನ ಜಾರಿಸಿಕೊಂಡು ನನ್ನ ಸೀರೆ ಕತ್ತರಿಸಿದಾ! ಇನ್ನು ಸ್ವಂತ ಕತ್ತರಿ ಬಂದರೆ ಕೇಳಬೇಕೋ ಮಂಗಬುದ್ಧಿ? ಲಕ್ಷ್ಮಣನ ಹಾಗೆ ಇದ್ದವರ ಕಿವಿ—ಮೂಗೆಲ್ಲಾ ಕತ್ತರಿಸಿ ಹಾಕಿಯಾನು!" ಎಂದು ಎಚ್ಚರಿಸಿದಳು. ಮಾಡುವುದೇನು? ಮನೆಯಲ್ಲಿ ಕತ್ತರಿಗಾಗಿ 'ಖಿಮ್ ಖುಮ್' ಎನ್ನುವಂತಿಲ್ಲ.

ಆದರೂ ಕತ್ತರಿಯ ಹುಚ್ಚು ಹುಡುಗ ತಿಮ್ಮನಿಗೆ, ಕಡಮೆಯಾಗುವುದಕ್ಕೆ ಬದಲಾಗಿ ಹೆಚ್ಚಾಗುತ್ತಾ ಹೋಯಿತು. ದಿನ ಕ್ರಮೇಣವಾಗಿ ಇಮ್ಮಡಿ-ಮುಮ್ಮಡಿಯಾಗಿ ಬಲಿತುಕೊಂಡೇ ಹೋಯಿತು. ಏನಾದರೂ ಆಗಬೇಕೆಂದು ತಿಮ್ಮನಿಗೊಂದು ಆಶೆ ಹುಟ್ಟಿಬಿಟ್ಟಿತೆಂದರೆ, ಅದನ್ನು ಆಗಿಸಿಕೊಳ್ಳದೆ ಆತನು ನಿಶ್ಚಿಂತನಾಗಲೇ ಆರನು. ಪರಂತು, ಎಲ್ಲ ಹುಡುಗರಿಗೂ ಹಾಗೆಯೇ ಇರಬಹುದು. ಏನಾದರೂ ಕತ್ತರಿಯ ಬಯಕೆ ಮಾತ್ರ ದುಃಸಾಧ್ಯವಾಗಿಯೇ ನಿಂತಿತು.

ಅಷ್ಟು ಚಿಂತೆ ಏಕೆ ಬಂತೆಂದರೆ,—ಅವನು ಕಾಸಿಲ್ಲದ ತಿಮ್ಮ. ಹಾಗೆ ಹೀಗೆಂದು ಒಂದು ಚಿಕ್ಕಾಸಾದರೂ ಅವನ ಕೈಗೆ ಸುಲಭವಾಗಿ ಸಿಕ್ಕುತ್ತಿದ್ದಿಲ್ಲ. ಮಕ್ಕಳು—"ಅಮ್ಮ! ಕಾಲಾಣೆ ಕೊಡೇ! ಪೇಪರ್ ಮಿಠಾಯಿ ತೆಕ್ಕೊಳ್ತೀನೆ" ಎಂದು ಕೇಳುವುದರೊಳಗೆ, ತಮ್ಮ ಪ್ರೀತಿಯ ಮಕ್ಕಳಿಗೆ ಅರ್ಧ ಘರ್ಣಣೆಗಳನ್ನೊ, ಇಡಿಯಿಡೀಯಾಣೆಗಳನ್ನೋ ತಮ್ಮ ಅಕ್ಕರೆಯ ಬಹಿರಂಗ ಪ್ರದರ್ಶನ ರೂಪವಾಗಿ ಕೊಟ್ಟು, ಆ ಮಕ್ಕಳ ಸಿಕ್ಕಾಬಟ್ಟೆ ತಿಂಡೀಬಾಕತನವನ್ನು ಹೆಚ್ಚಿಸಲು, ದುರಭ್ಯಾಸಗಳನ್ನು ಕಲಿಸಲು ತಾವೇ ಎಡೆಮಾಡಿಕೊಡುವ ಹೆತ್ತವರ ಹಾಗಲ್ಲ ತಿಮ್ಮಣ್ಣನ ಹೆತ್ತವರು. ತಿಮ್ಮಣ್ಣ ಎಂದಾದರೂ "ಅಮ್ಮ, ಪುಟ್ಟಯ್ಯನಂಗಡೀಲಿ ನಮುನೆ ನಮುನೆ ಪೇಪರ್ಮಿಠಾಯಿಯುಂಟು. ಪೈಗೆ

ನಾಲ್ಕಂತೆ; ನಾನೊಂದು ಪೈದು ತಕ್ಕೊಳ್ಳಾ? ಕೊಡುತ್ತೀಯಾ?" ಎಂದು ಅಂಗಲಾಚಿದರೆ,—"ಬೇಡಾ! ಬಾಯಿಮುಚ್ಚಿ ಕೂತುಕೋ ನೋಡುವಾ. ಪೇಪರ್ಮಿಂಟಾಯಿ ತಿಂದುಬಿಟ್ಟರೆ ಹೊಟ್ಟೇ ತುಂಬುತ್ತೇನು? ಹೊಟ್ಟೆಗೆ ಮಾರಿ! ಹಲ್ಲಿಗೆ ಕೇಡು!" ಎಂದು ಗದರಿಸಿ ನಿಷೇಧಿಸಿ ಬಿಡುವಳು. ಆದರೆ ಹೆತ್ತಕರುಳು! ಅವಳು ಪತಿಯ ಹತ್ತಿರ ಗುಟ್ಟಿನಿಂದ ಆ ಸಂಗತಿ ಹೇಳಿ, ಅವರು ಗುಡ್ಡೇಯಂಗಡಿಯಿಂದ ಬರುವಾಗ ಸ್ವಲ್ಪ ನಿಂಬೇ ಮತ್ತು ಶುಂಠಿಯ ಪೆಪ್ಪರ್ಮಿಂಟಾಯಿಯನ್ನು ತರಿಸಿ, ಯಾವಾಗಾದರೊಮ್ಮೆ ಒಂದೆರಡನ್ನು ಮಕ್ಕಳಿಗೆ ಕೊಡುವಳು. ಹೊರತು ಮಕ್ಕಳ ಕೈಯಲ್ಲಿ ದುಡ್ಡನ್ನು ಮಾತ್ರ ಕೊಡುವವಳಲ್ಲ. ಪದ್ಮನಾಭೈಯ ಕೂಡಾ ಹಾಗೆಯೇ. "ಸಂಪಾದನೆ ಮಾಡುವ ಕ್ರಮ ಗೊತ್ತಿಲ್ಲದ ಮಕ್ಕಳ ಕೈಗೆ ಸ್ವತಂತ್ರವಾಗಿ ಖರ್ಚುಮಾಡುವ ಹಾಗೆ ಒಂದು ಪೈಯನ್ನಾದರೂ ಕೊಡಬಾರದು." ಎಂದು ಅವರು ಹೇಳುವರು. ಹುಡುಗರು ಸಾಯಂಕಾಲ ಶಾಲೆಬಿಟ್ಟು ಮನೆಗೆ ಬರುವಾಗ ತಾಯಿ ಒಲೆಯ ಬಳಿಯಲ್ಲಿ ಗೆಣಸಿನ ಹಪ್ಪಳವೋ ಸಂಡಿಗೆಯೋ, ಸುಟ್ಟೋ ಕಾಯಿಸಿಯೋ ಇಟ್ಟಿರುತ್ತಾಳೆ. ಅದೇ ಮಕ್ಕಳಿಗೆ ಟಿಫಿನು. ಕಾಫಿ—ಗೀಫಿ ಗೊತ್ತೇ ಇರಲಿಲ್ಲ. ಇದ್ದೇ ಇದೆಯಲ್ಲ ಶುದ್ಧವಾದ ನೀರು. ಹಪ್ಪಳ ಸಂಡಿಗೆ ಏನೂ ಇಲ್ಲದ ದಿನ, ಹುಡುಗರು "ತಿಂಡಿ ತಿಂಡಿ" ಎಂದು ಹಟಹಿಡಿದರೆ, ತಾಯಿ ಮುದ್ದೆ ಬೆಲ್ಲವನ್ನು ಮಕ್ಕಳ ಅಂಗೈಗೆ ಹಾಕಿ, ತೆಂಗಿನ ಕಡ್ಡಿಯನ್ನು ಮುರಿದು ಕೊಡುವಳು. ಆ ಕಡ್ಡಿಯಿಂದ ಬೆಲ್ಲವನ್ನು ಎತ್ತಿ ಬಹಳ ವೇಳೆಯ ವರೆಗೆ ಚೀಪುತ್ತಾ ಇರುವುದೆಂದರೆ ಮಕ್ಕಳಿಗೆ ಬಲು ಆನಂದ!

ಒಟ್ಟಾರೆ ತಿಮ್ಮಣ್ಣನ ಆರ್ಥಿಕ ಪರಿಸ್ಥಿತಿ ಇಷ್ಟು ಕಠಿಣವಿರುವಾಗ ಕತ್ತರಿಗೆ ದುಡ್ಡೆಲ್ಲಿಂದ ಬರಬೇಕು? ಯೋಚಿಸಿ ಯೋಚಿಸಿ ಕಟ್ಟಕಡೆಗೆ "ದುಡ್ಡು ಕದ್ದುಕೊಳ್ಳುವುದು" ಎಂಬ ತೀರ್ಮಾನಕ್ಕೇ ಬಂದುಮುಟ್ಟಿದನು ತಿಮ್ಮಣ್ಣ.

೨೦

ಕದಿಯುವುದಾದರೂ ಅದು ಬಹಳ ಸುಲಭಸಾಧ್ಯವಾಗಿರಲಿಲ್ಲ. ಯಾರಿಗೂ ತಿಳಿಯದಂತೆ ಅದು ಜರಗಬೇಕಲ್ಲವೆ? ತಿಮ್ಮಣ್ಣನೊಂದಿಗೆ ತಂಗಿ ಕಮಲೆಯೂ ತಮ್ಮ ಪುಟ್ಟನೂ, ಯಾವಾಗಲೂ ನೆರಳಿನ ಹಾಗೆಯೇ ಇರುತ್ತಿದ್ದರು. ಶಾಲೆಗೆ ಹೋಗುವಾಗ ಕೂಡಾ ಹಾಗೆಯೆ. ಕಮಲೆ ಮೊದಲ

ನೆಯ ತರಗತಿಯಲ್ಲಿಯೂ ತಿಮ್ಮಣ್ಣ ಮೂರನೆಯ ದರ್ಜೆಯಲ್ಲಿಯೂ ಕಲಿಯುತ್ತಿದ್ದರು. ಪುಟ್ಟನು ಮಾತ್ರ ಒಂದು ಹೊತ್ತು ತಿಮ್ಮನೊಂದಿಗೂ, ಇನ್ನೊಂದು ಹೊತ್ತು ಕಮಲೆಯೊಂದಿಗೂ ಹೀಗೆ ಇಬ್ಬರ ದರ್ಜೆಯಲ್ಲಿಯೂ ಕೂಡುತ್ತಿದ್ದನು. ಅಂದರೆ ಪುಟ್ಟ ೪॥ ವರ್ಷದ ಮಗು ಎಂದೇ ಅರ್ಥ. ಆಗಲೂ ಅವನು ತಾಯಿಯ ಹಾಲು ಕುಡಿಯುತ್ತಿದ್ದನು. ಅದನ್ನು ತಪ್ಪಿಸಬೇಕೆಂದು ಜಲಜಮ್ಮ ಹುಣಸೇಹಣ್ಣು, ಹರಳೆಣ್ಣೆ, ಹಾಗಲಕಾಯಿಯ ರಸ, ರಕ್ತಬೋಳ ಮೊದಲಾದುವನ್ನು ಹಚ್ಚಿಕೊಂಡರೂ ಅವನು ಅತ್ತು, ಚಂಡಿಹಿಡಿದು ಹಾರಿ ತುಡುಕಾಡಿ ಕುಡಿಯದೆ ಬಿಡುತ್ತಲೇ ಇರಲಿಲ್ಲ. ಹಾಗೆ ಮಾತೆಯ ಅಮೃತಪಾನ ಮಾಡಿದುದರಿಂದಲೇ ಆಗಿರಬೇಕು; ಅವನು ಗುಂಡಪ್ಪನ ಹಾಗೆ ಗುಂಡು ಗುಂಡಾಗಿ ಸುಂದರನಾಗಿದ್ದನು.

ಕಡೆಗೆ ಅವನ ಹಾಲಿನ ಚಟವನ್ನು ಮರೆಯಿಸಬೇಕೆಂದು, ಅವನಿಗೊಂದು ಕರೀಬಣ್ಣದ ಬಿಳೀಗೀಟಿನ ಪುಟ್ಟ ಕೋಟು-ಇಜಾರುಗಳನ್ನು ಹೊಲಿಸಿ, ಅವನನ್ನು ಅದರೊಳಗೆ ಹೊಗಿಸಿ, ತಲೆಯ ಮೇಲೊಂದು ಕಪ್ಪು ಟೊಪ್ಪಿಯನ್ನಿಟ್ಟು, ತಿಮ್ಮಣ್ಣನ ಹಳೇ ಬಾಲಪುಸ್ತಕವನ್ನು ಅವನ ಕೈಗೆ ಕೊಟ್ಟು, ಕೋಟಿನ ಕಿಸೆಗಳಲ್ಲಿ ಕಡ್ಡಿಯ ತುಂಡುಗಳನ್ನು ಹಾಕಿ,—"ಪುಟ್ಟು! ಶಾಲೆಗೆ ಹೋಗಿ ಅ...ಆ ಕಲೀ" ಎಂದು ಹೊರಡಿಸಿ ತಿಮ್ಮಣ್ಣನೊಂದಿಗೆ ಕಳುಹಿಸಲಾರಂಭಿಸಿದಳು ತಾಯಿ. ಏನೋ ಹೊಸ ಹಬ್ಬ ಎಂಬ ಹಾಗೆ ಪುಟ್ಟನಿಗೂ ಅಣ್ಣ—ಅಕ್ಕಂದಿರೊಂದಿಗೆ ಶಾಲೆಗೆ ಹೋಗುವುದೆಂದರೆ ಬ್ರಹ್ಮಾನಂದ.

ಒಂದು ದಿನ ಕಮಲೆಗೆ ಏನೋ ಸ್ವಲ್ಪ ಮೈಸರಿಯಿಲ್ಲದ ಕಾರಣ ಅವಳು ಶಾಲೆಗೆ ಹೊರಡಲಿಲ್ಲ; ತಿಮ್ಮಣ್ಣನೊಬ್ಬನೇ ಪುಟ್ಟನನ್ನು ನಡೆಯಿಸಿಕೊಂಡು ಹೋದನು. ಅಲ್ಲಿ ಅವನನ್ನು ತನ್ನ ಕ್ಲಾಸಿನಲ್ಲಿ ತನ್ನ ಪಕ್ಕದಲ್ಲಿಯೇ ಕುಳ್ಳಿರಿಸಿಕೊಂಡಿದ್ದನು. ಜೋಡುಬಳೆ ವೆಂಕಟರಾಯ ಮಾಸ್ತರು ಒಬ್ಬ ಹುಡುಗನನ್ನು ಪುಟ್ಟಯ್ಯನಂಗಡಿಗೆ ಓಡಿಸಿ, ಒಂದು ಕಟ್ಟು ಕಡಲೇಮಿಠಾಯಿಯನ್ನು ತರಿಸಿ ಪುಟ್ಟನ ಜೇಬಿನೊಳಗೆ ಹಾಕಿ ಒಂದನ್ನು ಅವನ ಬಾಯಿಯೊಳಗೂ ಇಟ್ಟರು. ಹೀಗೆಲ್ಲಾ ಮಾಸ್ತರುಗಳು ಪುಟ್ಟನಿಗೆ ಅಭ್ಯಾಸ ಮಾಡಿಟ್ಟುದರಿಂದಲೇ ಅವನು ಬಹಳ ಉಲ್ಲಾಸದಿಂದ ಶಾಲೆಗೆ ಹೊರಡುತ್ತಿದ್ದನು. "ಈವೊತ್ತು ಶಾಲೆಗೆ ಹೋಗಬೇಡ" ಅಂದರೆ "ಹೋಗಿಯೇ ತೀರುವೆ"ನೆಂದು ಹಟ ಹಿಡಿಯುವವರೆಗೆ ಏರಿತ್ತು ಅವನ ಉತ್ಸಾಹ.

ಅಂದು, ಆಗ ತಿಮ್ಮಣ್ಣನು ಕಾಪಿ ಬರೆಯುತ್ತಿದ್ದನು. ಪುಟ್ಟ ಅವನ ಪಕ್ಕದಲ್ಲಿ ಕುಳಿತಿದ್ದವನು, ಇದ್ದಕ್ಕಿದ್ದ ಹಾಗೆ ಏನೋ ಒಂದು ರೀತಿಯಾಗಿ ಹಾವಭಾವಗಳನ್ನು ಬದಲಾಯಿಸಲಾರಂಭಿಸಿದನು. ಹುಂ, ಉಃ! ಉಃ ಹುಂ—" ಎಂದು ಸಂಕಟಪಡುತ್ತ, ಮುಖವನ್ನು ತಿರುವಿಕೊಂಡು, ಅಪರಾಧಮಾಡಿ ಸಿಕ್ಕಿಬಿದ್ದು ಹೆದರುವ ಕಳ್ಳನ ಹಾಗೆ ಅಣ್ಣನ ಮುಖವನ್ನು ನೋಡುತ್ತ "ಅಣ್ಣ! ಅಣ್ಣ!" ಎಂದನು. ಒಂದು ಕೈಯಲ್ಲಿ ಹೊಟ್ಟೆಯನ್ನು ಒತ್ತಿ ಹಿಡಿದುಕೊಂಡಿದ್ದಾನೆ; ಇನ್ನೊಂದು ಕೈಯಲ್ಲಿ ಬೆಂಚಿಯನ್ನು ಒತ್ತಿ ಹಿಡಿದು, ಸಡಿಲಾಗಿ ಕುಳಿತೇಳುವವನ ಭಂಗಿಯಲ್ಲಿದ್ದಾನೆ. "ಏನೋ ಪುಟ್ಟ ಹೊಟ್ಟೆ ನೋಯುತ್ತಾ?" ಎಂದು ತಿಮ್ಮಣ್ಣ ಸಂದೇಹದಿಂದ ಕೇಳಿದನು. ಪುಟ್ಟನು ದೀನದೃಷ್ಟಿಯಿಂದ ಅಣ್ಣನ ಮುಖವನ್ನು ನೋಡುತ್ತಾ—"ಅಣ್ಣ! ತಪ್ಪಾತು! ಬಂದೋತು!" ಎಂದು ಧೈರ್ಯದಿಂದ ಎದ್ದು ನಿಂತೇ ಬಿಟ್ಟನು! ನೋಡುವುದೇನಿದೆ? ಮಕ್ಕಳು ಬಾಲ್ಯಾವಸ್ಥೆಯಲ್ಲಿ ತಮ್ಮ ತಾಯಿಯಂಕದ ಮೇಲೆ ಯಾವ ನಿಂದನೀಯ ಕೆಲಸವನ್ನು ಮಾಡುತ್ತಾರೋ ಅದನ್ನೆ ಮಾಡಿದ್ದನು ಪುಟ್ಟ. ಪಾಪ! ಪುಟ್ಟ! ಸಣ್ಣವ! ಹುಡುಗರೆಲ್ಲಾ "ಅಯ್!" ಎಂದು ಎದ್ದು ನಿಂತರು. ತಿಮ್ಮನೂ ಒಬ್ಬ ಚಿಕ್ಕ ಹುಡುಗನೇ ಅಲ್ಲವೆ? ಏನು ಮಾಡುವುದೆಂದು ತೋರದೆ ಮೂಢನಾಗಿ ಅವನೂ ನಿಂತು ಬಿಟ್ಟನು.

ಆಗ ಮಾಸ್ತರು ಮುಗುಳ್ ನಗುತ್ತ—"ಚಿಂತಿಲ್ಲ! ಯಾರೂ ನಗಬೇಡಿ. ನಮ್ಮೆಲ್ಲರಿಗಿಂತಲೂ ಚಿಕ್ಕವ! ನಮಗೆಲ್ಲರಿಗೂ ತಮ್ಮ!" ಎಂದು ಸಹೋದರ ತತ್ವವನ್ನು ಬಿತ್ತರಿಸಿ, ಹೀಗೆ ಹೀಗೆ ಮಾಡೆಂದು ತಿಮ್ಮಣ್ಣನಿಗೆ ಸೂಚನೆ ಕೊಟ್ಟರು. ಅದರಂತೆ ತಿಮ್ಮಣ್ಣನು ಪುಟ್ಟನ ಕೋಟನ್ನು ಕಳಚಿ, ಮಿಠಾಯಿಯ ಪೊಟ್ಟಣವನ್ನು ದಪ್ತರ ಸಂಚಿಯೊಳಗೆ ಹಾಕಿ, ಆ ಕೋಟಿನಿಂದ ಆ ಬೆಂಚಿಯನ್ನೂ ಅವನ ಕಾಲನ್ನೂ ಒರೆಸಿ ಅವನನ್ನು ಶಾಲೆಯ ಹೊರಗೆ ಕರೆದುಕೊಂಡು ಹೋದನು. ಮಾಸ್ತರು ಬರ್ಮಪ್ಪನನ್ನು ಕರೆದು ಆ ಬೆಂಚಿಯನ್ನು ತೊಳೆದುತರಲಿಕ್ಕೆ ಹೇಳಿದರು.

ಹೆತ್ತವಳ ಹೊರತು ಮತ್ತಾರೂ ಮಾಡಲು ಹೇಸುವಂತಹ, ದೊಡ್ಡದೊಂದು ಗುಡ್ಡದಂತಹ, ಕೆಲಸವನ್ನು ಈ ಭಂಡಪುಟ್ಟನು ತನಗೆ ಕೊಟ್ಟನಲ್ಲಾ ಎಂದು ಪುಟ್ಟನ ಮೇಲೆ ತಿಮ್ಮನಿಗೆ ಬ್ರಹ್ಮಾಂಡದಂತಹ ಕೋಪಬಂದಿತ್ತು. ಆದರೆ ಮಾಸ್ತರ ಭಯದಿಂದ ಶಾಲೆಯೊಳಗೆ ಪಿಟ್ಟೆನ್ನದೆ ಮುಖವನ್ನು ಬಿಮ್ಮಗೆ ಮಾಡಿಕೊಂಡು ಅವನನ್ನು ಹೊರಗೆ ಕರೆದುಕೊಂಡು ಬಂದ ಮೇಲೆ,

ನಿರ್ಭಯದಿಂದ ಅವನ ಮೇಲೆ ಕೋಪವನ್ನು ಕಾರತೊಡಗಿದನು:—“ಛೀ! ಕೊಳಕು ಭಂಡ! ಹೇಳ್ಲಿಲ್ಲ ಯಾಕೊ? ಏನಾಯ್ತು ಧಾಡಿ ನಿನಗೆ?” ಎಂದು ಪುಟ್ಟನ ಬೆನ್ನಿಗೊಂದು ಪೆಟ್ಟುಕೊಟ್ಟನು.

ಪುಟ್ಟ ಕೋಪದಿಂದಲೂ ದುಃಖದಿಂದಲೂ—“ನಂಗ ಬಂದೋತು! ನಾನೇ ಮಾಡೋದು? ಹೊಡೀತ್ಯಾ ನಂಗ? ತಡೀ! ಅವ್ಮಾತ್ತ ಹೇತೇನೇ.”

“ಹೇತಾನಂತೆ ಮಂಗ!......ಅಮ್ಮ ಬಂದಳೋ ಈಗ ನಿಂದು ಬಾಚ ಲಿಕ್ಕೆ? ತಡಿ, ಇನ್ನುಮೇಲೆ ನಿನ್ನ ಶಾಲೆಗೆ ಕರಕೊಂಡು ಬರುವುದೇ ಇಲ್ಲ. ಗಲೀಜು ದಡ್ಡ!”

“ಊಹುಂ! ನಾ ಬಂದೇ ಬತ್ತೇನೆ! ಅವ್ಮಾತ್ತ ಹೇಳಿ?”

“ಅಮ್ಮನ ಹತ್ತರ ಹೇಳಿದರೆ ಪೆಟ್ಟು ಬೆನ್ನಿಗೆ!”

“ಅಮ್ಮ ನಂಗ ಹೊಡೆಯೋಲ್ಲಾ. ನಿಂಗೇ ಹೊಡೀತಾಳೆ! ನೋಡು!”

“ಹೌದೌದು! ಅಮ್ಮನ ಕೊಂಡಾಟ ಹೆಚ್ಚಾಯ್ತು! ಅಮ್ಮನೊಟ್ಟಿಗೇ ಇರು ಮನೇಲೇ ಅಮ್ಮಿ ತಿಂದುಕೊಂಡು!”

“ಇಲ್ಲಾ! ನಾ ಕಂಡಿತ ಸಾಲೆಗೆ ಬತ್ತೇನೇ!”

“ನಿನ್ನನ್ನು ಗುಡ್ಡೆಲಿ ಬಿಟ್ಟು ನಾನು ಓಡಿ ಹೋಗ್ತೇನೆ! ನಿನ್ನನ್ನು ನರಿ ಹಿಡೀಲಿ!”

“ಹಗಲೊತ್ತಲ್ಲಿ ನರಿ ಬರೊಲ್ಲಾಂತ ಅಪ್ಪ ಹೇಳಾರೆ. ನೀನು ಬಿಟ್ಟೋದ್ರೆ ಓಗು. ನಾನು ಒಬ್ಬನೇ ಬತ್ತೇನೆ. ನಂಗ ಗೊತ್ತುಂಟು ಸಾಲೇ ದಾರಿ!”

“ಆ! ಭಾರೀ ಜೋರಿದ್ದಿ ನೀನು! ಹ್ಯಾಗೆ ಬರ್ತೀ ನೋಡುವ! ಹಾಳು ದಡ್ಡ! ಬಾರಾಹೀಗೆ!” ಎಂದು ತಿಮ್ಮನು ಸಿಟ್ಟಿನಿಂದ ಆತನನ್ನು ಎಳೆದುಕೊಂಡು ಅಲ್ಲೇ ಇದ್ದ, ಒಂದು ಗುಡ್ಡದ ಹೊಂಡದಬಳಿಗೆ ದರದರನೆ ಒಯ್ದನು. ಬೇರೆ ಸಮಯವಾಗಿರುತ್ತಿದ್ದರೆ ಅವನು ಎಳೆದ ರಭಸಕ್ಕೆ ಪುಟ್ಟನು ದೊಡ್ಡದಾಗಿ ಕೂಗುತ್ತಿದ್ದನು. ಆಗ ಅವನದು ತಪ್ಪೇ ಆಗಿರುವು ದೆಂದು ಅವನಿಗೆ ತಿಳಿದಿದ್ದ ಕಾರಣ ಬಹಿರಂಗವಾಗಿ ಹಾಗೆ ಅಳಲಿಲ್ಲ.

ಆಗ ಮಳೆಗಾಲವಾದುದರಿಂದ ಆ ಹೊಂಡದಲ್ಲಿಷ್ಟು ಕಲಕು ನೀರು ಸೇರಿತ್ತು. ತಿಮ್ಮನು ಪುಟ್ಟನನ್ನು ಅದರ ಬಳಿಯಲ್ಲಿ ನಿಲ್ಲಿಸಿ, ಎರಡು ಕೈಗ ಳಿಂದಲೂ ಅವನ ಮೇಲೆ ನೀರನ್ನು ಚೆಲ್ಲಿ ಚೆಲ್ಲಿ ಅವನಿಂದಲೇ ತಿಕ್ಕಿಸಿ, ತೊಳೆ

ಯ್ಯಿಸಿ, ಕೊಳಕಾದ ಉಡುಪುಗಳನ್ನು ಮುದ್ದೆ ಮಾಡಿಕೊಂಡು, "ಬೇಕಾದ್ರೆ ಬಾರಾ ಮನೆಗೆ" ಎಂದು ಎಚ್ಚರಿಕೆ ಕೊಟ್ಟು, ಸಂಚಿಯನ್ನು ಹೆಗಲಲ್ಲಿ ಹಾಕಿಕೊಂಡು ತುರು ತುರು ಮುಂದೆ ನಡೆದು ಬಿಟ್ಟನು. ಪುಟ್ಟನು ಮಾತಾಡದೆ ಬತ್ತಳೆಯಾಗಿಯೇ ಅವನ ಹಿಂದೆಯೇ ಓಡುತ್ತಾ ನಡೆದನು.

ಓಟದ ನಡಿಗೆಯಿಂದ ತಿಮ್ಮಣ್ಣ ಮನೆಯನ್ನು ಮುಟ್ಟಿದಾಗ ಹಿಂದೆ ಪುಟ್ಟನನ್ನು ಕಾಣಲಿಲ್ಲ. ಅದನ್ನು ಲಕ್ಷ್ಯಮಾಡದೆಯೇ ತಿಮ್ಮಣ್ಣ ಸಿಡಿಮಿಡಿಯಿಂದ ಧುಡುಧುಡನೆ ಒಳಗೆ ನಡೆದು —"ಇಕೋ ಅಮ್ಮ!" ಎಂದು ರುಷ್ಟ ಸ್ವರದಿಂದ ಕೂಗಲು, ಅವನು ಅರ್ಧ ಹೊತ್ತಿನಲ್ಲಿ ಅಕಸ್ಮಾತ್ ಮನೆಗೆ ಬಂದುದನ್ನು ಕಂಡು, ಏನೋ ಕೆಲಸದಲ್ಲಿದ್ದ ಜಲಜಮ್ಮ ಗಾಬರಿಯಾಗಿ,—"ಏನಾ—ಏನು? ಏನೋ ಇಷ್ಟು ಬೇಗ ಬಂದಿ? ಪುಟ್ಟ ಎಲ್ಲಿ?" ಎನ್ನುತ್ತಾ ಹೊರಗೆ ನೋಡಿದಳು. ಆಗ ಪುಟ್ಟ ಒಂದು ಫರ್ಲಾಂಗು ದೂರದಲ್ಲಿ ಗದ್ದೆ ಹುಣಿಯಲ್ಲಿ ಗುಡುಗುಡು ಓಡಿಬರುತ್ತಿದ್ದಾನೆ— ಹುಟ್ಟಿದ ರೂಪದಿಂದ.

"ಇದ್ದೇನಾ ತಿಮ್ಮು!" ಎಂದು ಜಲಜಮ್ಮ ಪುಟ್ಟನ ಕಡೆಗೆ ಓಡುವಷ್ಟರಲ್ಲಿ, ತಿಮ್ಮನು ಹುಬ್ಬು ಗಂಟಿಕ್ಕಿಕೊಂಡು—"ಇನ್ನು ಮೇಲೆ ನಾನು ಅವನ್ನ ಶಾಲೆಗೆ ಕರಕೊಂಡು ಹೋಗಲಿಕ್ಕೆ ಇಲ್ಲ! ಇದು ನೋಡು ಅವನ ಕರ್ಮ!" ಎಂದು ಪುಟ್ಟನ ಹೇಸಿಗೆ ತುಂಬಿದ ಉಡುಪಿನ ಮುದ್ದೆಯನ್ನು ತಾಯಿಯ ಮೇಲೆ ಬಿಸುಟನು!

"ಅಯ್ಯೊ! ಹೀಗೂ ಉಂಟಾ ಹಾಗಾದರೆ! ಥೀ! ತಡಿಯಾ ತಡಿ! ನಿಸಗೆ ಮಾಡುತ್ತೇನೆ ಬಗೆ!" ಎಂದು ಜಲಜಮ್ಮ ಸಿಟ್ಟಿನಿಂದ ಬೈದು, ಬಾವಿಕಟ್ಟೆಗೆ ಹೋಗಿ ಸೀರೆಗೆ ಅಲ್ಲಲ್ಲಿ ಹತ್ತಿಕೊಂಡಿದ್ದುದನ್ನು ನೀರಿನಿಂದ ಒರೆಸಿಕೊಳ್ಳುತ್ತಿರುವಾಗ ಪುಟ್ಟನೂ ಅಲ್ಲಿಗೆ ಬಂದನು.

ಪಾಪ! ಆತನ ಪುಟ್ಟ ಕಾಲಗಂಟಿನಲ್ಲಿ ರಕ್ತವು ಬರುವುದನ್ನು ನೋಡಿ, ಜಲಜಮ್ಮ—"ಅಯ್ಯೋ! ಬಾಪ್ಪ ಪುಟ್ಟೂ! ಬಿದ್ದಿಯಾ ಮಗು! ನನ್ನ ಪುಟ್ಟು!" ಎಂದು ಅವನನ್ನು ಬಾಚಿ ಎತ್ತಿಕೊಂಡು ಮುದ್ದಿಟ್ಟಳು. ಪುಟ್ಟನು ತಿಮ್ಮಣ್ಣನ ತಿರುಗು ಮೋರೆಯನ್ನು ಗೆಲುನೋಟದಿಂದೊಮ್ಮೆ ನೋಡಿ, ಅಳು ದನಿಯಿಂದ—"ಅಮ್ಮ! ನಂಗ ಶಾಲೇಲಿ ಬಂದೋತು! ಏನು ಮಾಡ್ಲಿ? ಅಣ್ಣ ನಂಗ ಪೆಟ್ಟು ಕೊಟ್ಟಾ! ನನ್ನ ಬಿಟ್ಟು ಓಡಿ ಓಡಿ ಬಂದಾ! ನಾನೂ ಓಡಿ ಬರುವಾಗ ಅಲ್ಲಿ ತೋಡಿಗೆ ಕಲ್ಲು ದಂಟಿ ಬಿದ್ದೇ!" ಎಂದು ದೂರು ಹೇಳಿದನು. ಆದರೂ ಅವನಿಗೆ ಕಣ್ಣೀರು ಬರಲಿಲ್ಲ.

ಅವನು ಶಾಲೆಯಲ್ಲಿ ಅಷ್ಟು ಜನರ ಇದಿರಿನಲ್ಲಿ ಮಾಡಿದ ಆ ಕೊಳಕು ಕೆಲಸಕ್ಕೆ ಅವನನ್ನೇನೂ ಬಯ್ಯದೆ, ತಿಮ್ಮಣ್ಣನನ್ನೇ ಬಯ್ದುದೂ, ಮುಂದೆಯೂ ಏನೋ ವಿಪಲ್ಲಕ್ಷಣವುಂಟಾಗುವಂತಿರುವುದನ್ನೂ ನೋಡಿ ತಿಮ್ಮಣ್ಣ ಒಳಗೊಳಗೇ ತುಂಬ ಸಂಕಟಪಡುತ್ತಿದ್ದನು.

ಇದೆಲ್ಲಾ ನಡೆದುದು ಬೆಳಗ್ಗಿನ ಸಮಯದಲ್ಲಿ. ಮತ್ತೆ ಆ ದಿನವಿಡೀ ಜಲಜಮ್ಮ ತಿಮ್ಮಣ್ಣನ ಮೇಲೆ ವಿಶೇಷ ಕೋಪವನ್ನೇನೂ ತೋರಿಸಲಿಲ್ಲ. ಪುಟ್ಟನಿಗೆ ಮಾತ್ರ ಅವಳು,—“ಪುಟ್ಟೂ! ಇನ್ನು ಮೇಲೆ ಶಾಲೇಲೆಲ್ಲಾ ಹೀಗೆ ಮಾಡಬಾರದಪ್ಪ. ನಾಚಿಗೇ. ಮನೇಲೇ ಮಾಡಿ ಹೋಗಬೇಕೂ! ಬಂದರೆ ಅಣ್ಣನ ಹತ್ರ ಮೆಲ್ಲನೆ ಹೇಳಬೇಕೂ!” ಎಂದು ಬುದ್ಧಿವಾದವನ್ನು ಹೇಳುತ್ತಿದ್ದಳು. ಆಗ ಪುಟ್ಟ ತಾಯಿಯ ಹಾಲಮುಸುಕನ್ನು ಆಶೆಯಿಂದ ತೆರೆಯುತ್ತ—“ಅಮ್ಮ ಅಣ್ಣ ನನ್ನ ಶಾಲಿಗೆ ಕರಕೊಂಡು ಹೋಗೋಲ್ಲಾಂತಾನೇ” ಅನ್ನುತ್ತಾ ರವಕೆಯ ಗಂಟನ್ನೂ ಬಿಚ್ಚಿ ಹಾಕಿದನು......

“ಆಹಾಂ? ಪುಟ್ಟನ್ನ ಕರಕೊಂಡು ಹೋಗೋಲ್ಲಾಂತನ್ನಲಿ! ಅವನ ಬೆನ್ನ ಎಲುಬೆಲ್ಲಾ ಪುಡಿಮಾಡಿ ಹಾಕಿಯೇನು—” ಎಂದೆಂದು ಜಲಜಮ್ಮ ಅವನಿಗೆ ಅಚ್ಚೆಯಿಂದ ಹಾಲೂಡಿಸಿದಳು.

## ೨೧

ಅಂದು ಮಧ್ಯಾಹ್ನದ ಮೇಲೆ ತಿಮ್ಮಣ್ಣನೊಬ್ಬನೇ ಶಾಲೆಗೆ ಹೋಗಿ ಬಂದಿದ್ದ. ರಾತ್ರಿಯಾಗುವ ವರೆಗೆ ಏನೂ ವಿಶೇಷ ಜರುಗಲಿಲ್ಲ. ಆದರೂ ತಾಯಿ ಎಂದಿನಂತಿರಲಿಲ್ಲ. ತಿಮ್ಮಣ್ಣನೊಡನೆ ಎಂದಿನಂತೆ ಮಾತುಕತೆಯಾಡಲಿಲ್ಲ. ಅವಳು ಒಂದು ತರದ ಗಂಭೀರಭಾವದಲ್ಲಿದ್ದುದನ್ನು ನೋಡಿ ತಿಮ್ಮಣ್ಣನಿಗೆ ಸಂದೇಹವಿದ್ದೇ ಇತ್ತು. ಕಾರಣವೇನಂದರೆ, ಪುಟ್ಟನನ್ನು ಅವನು ಹಿಂದೆ ಬಿಟ್ಟು ಓಡಿ ಬಂದುದರಿಂದ, ಪುಟ್ಟನು ದಾರಿಯಲ್ಲಿ ಬಿದ್ದು ಅವನ ಕೈಕಾಲ ಗಂಟುಗಳು ಕಲ್ಲರಚಿ ರಕ್ತಕಂಡಿದ್ದ, ಆ ಕೋಪವು ಜಲಜಮ್ಮನಿಗಿಲ್ಲದೆ ಹೋದೀತೆ? ತಾಯಿಯ ಸ್ವಭಾವವು ತಿಮ್ಮಣ್ಣನಿಗೆ ತಿಳಿಯದೆ ಉಂಟೆ? ಮೊದಲು ಅವಳು ಅವನಿಗೆ ಕೊಟ್ಟ ಪೆಟ್ಟುಗಳೆಲ್ಲಾ ಹೀಗೆ ಮೋಸ ಮಾಡಿಯೇ ಆಗಿದ್ದುವು. ತಿಮ್ಮನು ದಂಡನಾರ್ಹವಾದ ತುಂಟತನವೇನಾದರೂ ಮಾಡಿದರೆ ಅವಳು ಏನೂ ತಿಳಿಯದವಳ ಹಾಗೆ ನಟಿಸುತ್ತ ಹಿಡಿಗಡ್ಡಿಯನ್ನು ಬೆನ್ನ ಹಿಂದೆ ಮರೆಸಿಟ್ಟುಕೊಂಡು—“ಅಪ್ಪೂ! ತಿಮ್ಮೂ! ಇಕೊ!

ಜೆಲ್ಲತಕ್ಕೊ" ಎಂದು ಮುಂಗಾಡಿಸುತ್ತ, ಅವನ ಸಮೀಪಕ್ಕೆ ಬಂದು, ಕಸಕ್ಕನೆ ಅವನ ಕೈಯನ್ನು ಬಿಗಿಯಾಗಿ ಹಿಡಿದು ಎಳೆಯುವಳು. ಹೀಗೆ ಅವಳು ಮೋಸತನ ಮಾಡದಿದ್ದರೆ ತಿಮ್ಮಣ್ಣನು ತಿಮ್ಮಣ್ಣನ ಹಾಗೆಯೇ ಹಾರಿಕೊಂಡು ತೋಟದಲ್ಲಿಯೂ ಗದ್ದೆಯಲ್ಲಿಯೂ ಓಣಿಯಲ್ಲಿಯೂ ಓಡಿ ಓಡಿ ಹೋಗುತ್ತಿದ್ದನು. ಆದರೆ ಒಮ್ಮೆ ತಾಯಿಬಂದು ಅವನ ಕೈ ಹಿಡಿದುಬಿಟ್ಟಳೆಂದರೆ, ಮತ್ತೆ ಬಿಡಿಸಿಕೊಳ್ಳಲಿಕ್ಕಾಗಿ ಮಾಡಿದ ತಿಮ್ಮಣ್ಣನ ಉರುಳಾಟವೆಲ್ಲ ವ್ಯರ್ಥವಾಗುತ್ತಿತ್ತು. ಚಿಕ್ಕಂದಿನಿಂದಲೂ ಮಕ್ಕಳಿಗೆ ಕುಡಿಸುವ, ಶುಂಠಿ, ಓಮ, ಬೆಳ್ಳುಳ್ಳಿ, ಒಳ್ಳೆಮೆಣಸು, ಗಜಿನೆ ಮುಂತಾದುವುಗಳ ರಸವನ್ನು ತಿಮ್ಮಣ್ಣನಿಗೆ ಕುಡಿಸುವಾಗ, ಅವನನ್ನು ತನ್ನ ಕಾಲುಗಳೆಡೆಯಲ್ಲಿ ಮಲಗಿಸಿ, ಅವನ ಕೈ ಕಾಲುಗಳನ್ನು ತನ್ನ ಕಾಲುಗಳೆಡೆಯಲ್ಲಿ ಅದುಮಿಕೊಂಡು, ಚಮಚದ ಕಡೆಯಿಂದ ಬಾಯಿಯನ್ನು ಬಲವಂತದಿಂದ ಆಕಳಿಸಿ, ಮದ್ದಿನ 'ಖಾರದ ರಸ' ವನ್ನು ಕುಡಿಸುವುದರಲ್ಲಿಯೇ ಅವನ ಬಲವೆಲ್ಲವನ್ನೂ ತನ್ನ ಮಾತೃಶಕ್ತಿಯಿಂದ ನಿಗ್ರಹಿಸಿಕೊಂಡಿದ್ದಳು ಅವನ ತಾಯಿ.

ಆದುದರಿಂದ ತಿಮ್ಮಣ್ಣನು ಯಾವಾಗಲೂ ತಾಯಿಯ ಇದಿರಿನಲ್ಲಿ ಅಬಲನೇ ಹೌದು. ಅಂತೆಯೇ ತಾಯಿಯ ಹಿಡಿಕೆಯಲ್ಲಿ ಅವನು ಸಿಕ್ಕಿಬಿದ್ದ ಕೂಡಲೇ, ಅವಳ ಬೆಂಗಡೆಯಿಂದ ಹಿಡಿಗಡ್ಡಿಯೊಂದಿಗೆ ಅವಳ ಇನ್ನೊಂದು ಕೈ ಮುಂದೆ ಹಾರಿಬರುತ್ತದೆ. ಒಮ್ಮೆಲೆ ಅವಳ ರೂಪವು ಮಾತಾಯ ರೂಪವಾಗುತ್ತದೆ. ತಿಮ್ಮಣ್ಣ ಮೊದಲು "ಅಯ್ಯಯ್ಯೊ!" ಎಂದು ಕೂಗುತ್ತ ಹಾರಿ ಹಾರಿ, ಅವಳ ಕೈಯಿಂದ ಹಿಡಿಗಡ್ಡಿಯನ್ನು ಕಸಿದುಕೊಳ್ಳುವ ಪ್ರಯತ್ನ ಮಾಡಿ, ಕೆಲವು ವೇಳೆ ತಾಯಿಯ ಬಳೆಗಳನ್ನು ಒಡೆದುಹಾಕುವುದುಂಟು. ಆಗ ಅವಳ ಕೈಯಿಂದಲೋ ಇವನ ಮೈಯಿಂದಲೋ ರಕ್ತ ಬರುವುದೂ ಉಂಟು. ಆಗ ತಾಯಿಯ ಸಿಟ್ಟು ಇಮ್ಮಡಿ ಮುಮ್ಮಡಿಯಾಗಿ ಬಿಡುವುದು. ತಿಮ್ಮಣ್ಣ ಸೋತು—"ಓ!" ಎಂದು ದೊಂಡೆಯೊಡೆದು ಕೂಗುತ್ತ ಅವಳ ಕಾಲಬುಡದಲ್ಲಿಯೇ ಬಿದ್ದು ತಟಪಟನೆ ಹೊಡೆದಾಡುವಾಗ, ಹಿಡಿಗಡ್ಡಿಗಳ ಬಿಸಿ ಸರಳು "ಚುಂಯಿ ಚುಂಯ್ಯ"ನೆ ಕಾಯುತ್ತಲೇ ಇರುವುದು. ಆಗ ಆ ಭಯಂಕರ ಪ್ರಸಂಗದಿಂದ ಜಲಜಮ್ಮನನ್ನು ನಿವಾರಿಸಿ ತಿಮ್ಮಣ್ಣನನ್ನು ದೂರ ಎಳೆದುಕೊಂಡು ಹೋಗುವವರೆಂದರೆ ಬೈಲಕರೇ ದೊಡ್ಡಮ್ಮ.

ಅದೊಮ್ಮೆ ತಿಮ್ಮಣ್ಣ ಒಂದು ಸಣ್ಣಕಲ್ಲಿಗೆ ಮಾರುದ್ದ ಹಗ್ಗವನ್ನು ಕಟ್ಟಿ, ಅದರ ಇನ್ನೊಂದು ಕೊನೆಯನ್ನು ಹಿಡಿದು 'ರೊಂಯ್ಯ ರೊಂಯ್ಯ'ನೆ

ಚಕ್ರಾಕಾರವಾಗಿ ಸುತ್ತುತ್ತಿದ್ದನು. ಆ ಆಟದ ಗುಂಗಿನಲ್ಲಿ ಮೈಮರೆತೇ ಹೋಗಿದ್ದನು. ಆಗ ಆ ಕಲ್ಲಿನ ಚಕ್ರಾಕಾರವನ್ನು ನೋಡಿ, ಪುಟ್ಟನು ಆನಂದದಿಂದ ಹಾರುತ್ತ ಹಾರುತ್ತ ಅವನ ಬಳಿಗೆ ಬರುವಾಗ ಗಿರ್ರನೆ ತಿರುಗುತ್ತಿದ್ದ ಆ ಕಲ್ಲು 'ಟಕ್ಕೆ'ಂದು ಪುಟ್ಟನ ಭುಜಕ್ಕೆ ಬಡೆಯಿತು. ಕೂಡಲೇ ಪುಟ್ಟನು "ಓ!" ಎಂದು ಕೂಗುತ್ತ ತಾಯಿಯ ಬಳಿಗೆ ಓಡಿದನು. ಅವನ ಆರ್ಭಟೆಯನ್ನು ಕೇಳಿ ತಾಯಿಯೂ ಅವನ ಬಳಿಗೆ ಓಡಿಬಂದು ಅವನನ್ನೆತ್ತಿಕೊಂಡು, 'ಏನಾಯಿತೆ"ಂದು ಕೇಳುತ್ತ ಅವನ ಭುಜವನ್ನು ತಡವಿ ನೋಡಿದಳು. ಕಲ್ಲಿನಂತೆಯೇ ಅಪ್ಪವೆದ್ದಿತ್ತು. ಜಲಜಮ್ಮ ಸಂತಾಪದಿಂದ ತಿಮ್ಮಣ್ಣನನ್ನು ದುರುದುರು ನೋಡುತ್ತ—"ಅಯ್ಯಯ್ಯೊ! ಹೀಗೂ ಒಂದು ಆಟವಾ? ತಲೆಗೆಲ್ಲ್ಯಾದರೂ ತಾಗುತ್ತಿದ್ದರೆ ತಲೆ ಒಡೆದೇ ಹೋಗುತ್ತಿತ್ತಲ್ಲಾ! ಷಂಡ ಭಂಡಾ! ಬಾ! ನಿನಗೆ ಮಾಡ್ತೇನೆ ಬಗೇ!" ಎಂದು ಕೂಗಿ ಹೇಳಿದಳು.

"ನಾನೇನು ಮಾಡಿದೆ? ಅವನೇ ಓಡಿಬಂದದ್ದು!" ಎಂದು ಗೊಣಗಿದನು ತಿಮ್ಮ.

"ಮಾರಿಚಂಡ! ಇಲ್ಲಿ ಬಾರಾ!—" ಎಂದು ಜಲಜಮ್ಮ ಗರ್ಜಿಸಿ, ಪುಟ್ಟನನ್ನು ಕೆಳಗೆ ಬಿಟ್ಟು ಮಾಡಿನ ಸೂರಿನಿಂದ ಇಷ್ಟುದ್ದದ ಬೆತ್ತವನ್ನು ತೆಗೆದುಕೊಂಡು ತಿಮ್ಮಣ್ಣನ ಬಳಿಗೆ ಓಡಿಬಂದಳು. ಓಡುವುದರಲ್ಲಿ ಮಾತ್ರ ಜಲಜಮ್ಮನಿಗಿಂತ ತಿಮ್ಮಣ್ಣನೇ ಮೇಲಲ್ಲವೆ? ಅವನು ಕೂಡಲೇ ಪಲಾಯನ ಸೂತ್ರವನ್ನೆ ಪಠಿಸಿದನು. ಜಲಜಮ್ಮ ಅಂಗಳದ ಕೊನೆಯ ವರೆಗೆ ಓಡಿ ಬಂದು, ಬೆತ್ತವನ್ನು ಕುಣಿಸುತ್ತ—"ಓಡ್ತಾನಂತೆ ಭಂಡ ಪೋಕ್ರಿ! ಎಲ್ಲಿಗೆ ಓಡ್ತೀ ನೋಡ್ತೇನೆ! ಹೊಟ್ಟೆ ಆ ಎನ್ನುವಾಗ ತನ್ನಂತಾನೇ ಬಾರದಿರ್ತೀಯಾ ನೋಡ್ತೇನೆ!—" ಎಂದು ಹಂಗಿಸಿದಳು.

ಹೊತ್ತು ಮುಳುಗಿ ಕತ್ತಲೆಯಾಗಿ ರಾತ್ರಿಯೂ ಮುಂದುವರಿಯಿತು. ಕೃಷ್ಣಪಕ್ಷವಾದುದರಿಂದ ಬೆಳದಿಂಗಳೂ ಇಲ್ಲ. ತಿಮ್ಮಣ್ಣ ತಾಯಿಯ ಕೈಗೆ ಸಿಕ್ಕದೆ ಅಂಗಳದಲ್ಲೇ ಕಾಲಕ್ಷೇಪಮಾಡುತ್ತಿದ್ದನು. ತಾಯಿ ಹೊರಗೆ ಬಂದ ಕೂಡಲೇ ಅವಳಿಗೆ ಕಾಣದಂತೆ ದೂರ ಕತ್ತಲೆಯೊಳಗೆ ಓಡುತ್ತಿದ್ದನು. ಬೈಲಕರೇ ದೊಡ್ಡಮ್ಮನು ಕೊಂಡಾಟದ ದನಿಯಿಂದ—"ತಿಮ್ಮೊ! ಎಲ್ಲಿದ್ದಿಯಾ? ಬಾರಾ! ಇನ್ನು ಅಮ್ಮ ಹೊಡೆಯೋದಿಲ್ವೋ. ಸಾಸಿದ್ದೇನೆ ಬಾರಾ! ಊಟಕ್ಕೆ ಬಾಪ್ಪ—" ಎಂದು ನಾನಾ ರೀತಿಯಾಗಿ ಭರವಸೆಕೊಟ್ಟು ಕರೆದರೂ ತಿಮ್ಮಣ್ಣನಿಗೆ ನಂಬುಗೆಯಾಗಲಿಲ್ಲ. ಹಸಿವಾಗುತ್ತಿದ್ದರೂ ಸಹಿಸಿಕೊಂಡೇ

ಇದ್ದನು. ಪದ್ಮನಾಭಯ್ಯನು ಆ ದಿನ ಊರಲ್ಲಿಲ್ಲದಕಾರಣ, ಅವನಿಗೆ ಯಾರ ಸಹಾಯವೂ ಇಲ್ಲದೆ ಹೋಗಿತ್ತು. ಅವರಿರುತ್ತಿದ್ದರೆ ತಾಯಿ ಪೆಟ್ಟು ಕೊಡುವುದಿಲ್ಲ. ಕೊಟ್ಟರೆ ತಂದೆ ಒಂದೇ ಒಂದು; ಎಂದಿಗೂ ಮರೆಯದಂಥಾದ್ದು ಕೊಟ್ಟಾರು; ಇಲ್ಲದಿದ್ದರೆ ಇಲ್ಲ. ಅವರ ಏಟು ಬೀಳುವಂತಹುದಾದರೆ ಅದನ್ನು ತಪ್ಪಿಸಲಿಕ್ಕೂ ತಿಮ್ಮಣ್ಣನು ಸಮರ್ಥನಲ್ಲ. ಈಗ ತಾಯಿಯದೇ ಅಧಿಕಾರವಾದುದರಿಂದ ಮಗನಿಗೆ ಸಲಿಗೆಯೂ ಹಟವೂ ಅಮಿತವೇ. ಇರಲಿ.

ಅವನ್ನು ಬಿಟ್ಟು ಎಲ್ಲರೂ ಒಳಗೆ ಊಟ ಮಾಡುವ ಶಬ್ದವೂ ಕೇಳಿ ಬರುತ್ತಿತ್ತು. ಅದು ಅವನಿಗೆ ತುಂಬಾ ಅಸಹನೀಯವಾಗಿತ್ತು. ದುಃಖವೂ ಬಂತು. ಮೂಕ ರೋದನ ಮಾಡಿದನು. ಜಲಜಮ್ಮ ಎಲ್ಲರಿಗೂ ಬಡಿಸುತ್ತ—"ಅವನು ಬೀಳಲಿ ಉಪಾಸ! ಒಂದಿನ ಉಪಾಸ ಬಿದ್ದ ಮಾತ್ರಕ್ಕೆ ಏನೂ ಆಗಲಿಕ್ಕಿಲ್ಲ ಧಾಡಿ! ಹಟ ಮುರಿದೀತು ಹಟ!" ಎಂದು ಜಬರಿಸಿದ್ದು, ತಿಮ್ಮಣ್ಣನ ಹಟದ ಮುದ್ದೆಗೆ ಶೂಲದ ಹಾಗೆ ತಿವಿಯಿತು.

ಆಗ ಪುಟ್ಟನು ಬಾಗಿಲು ಓರೆಮಾಡಿ ಹೊರಗೆ ಬಂದು, ಕತ್ತಲೆಯಲ್ಲಿ ತಿಮ್ಮಣ್ಣನನ್ನು ಕಾಣದೆ ತಡವರಿಸುತ್ತ—"ಅಣ್ಣ! ಎಲ್ಲಿದ್ದ್ಯಣ್ಣ! ಬಾಣ್ಣ! ಇವತ್ತು ಗುಳ್ಳಕಾಯಿ ಪಲ್ಯ್ಯಣ್ಣ. ನಂಗೂ ತುಂಬಾ ಇಷ್ಟದೆ. ಅಮ್ಮ ಪೆಟ್ಟು ಕೊಡೋದಿಲ್ಲ, ಬಾಣ್ಣ!" ಎಂದನು.

"ಹೋಗೋ ನಾಚಿಗೆಟ್ಟೋನೇ!" ಎಂದು ತಿಮ್ಮ ತಿರಸ್ಕಾರದಿಂದ ಸುಮಿದು ಪುಟ್ಟನನ್ನು ದೂರಿದನು. ಗುಳ್ಳದ ಕಾಯಿ ಪಲ್ಯವೆಂದು ಕೇಳಿದ ಕೂಡಲೇ ತಿಮ್ಮಣ್ಣನಿಗೆ ಬಾಯೊಡೆದು ನೀರೂರದಿರಲಿಲ್ಲ. ಆದರೆ ಅದಕ್ಕಿಂತ ಮುಂದಾಗಿತ್ತು ಪೆಟ್ಟಿನ ಭಯವೂ ದುರಭಿಮಾನವೂ.

ಸ್ವಲ್ಪ ಹೊತ್ತಿನಲ್ಲಿ ಬೈಲಕರೇ ದೊಡ್ಡಮ್ಮ ಬಂದು—"ಎಲ್ಲಿದ್ದಿಯಾ ತಿಮ್ಮೂ? ಬಾರಾ! ನೀನುಣ್ಣದೆ ನಿನ್ನಮ್ಮನೂ ಉಣ್ಣೋದಿಲ್ಲಾಂತ ಕೂತಿ ದ್ದಾಳೆ ಗೊತ್ತೇ? ಬಾಪ್ಪ! ನಿನಗೋಸ್ಕರ ಗುಳ್ಳದ ಪಲ್ಯ ತುಂಬ ಮುಚ್ಚಿಟ್ಟಿ ದ್ದೀನಿ. ಬಾರೋ!" ಎಂದು ಕೊಂಡಾಡಿ ಕರೆಯುವಾಗ ಜಲಜಮ್ಮನೂ ಹೊರಗೆ ಬಂದು—"ಬಾಪ್ಪೊ ಮಗಾ ತಿಮ್ಮೂ! ಊಟಮಾಡಿ ಮಲಗು ಬಾ. ನಾವಿಬ್ಬರೂ ಒಟ್ಟಿಗೇ ಉಣ್ಣುವ. ದೊಡ್ಡಮ್ಮ ಬಡಿಸುತ್ತಾರೆ." ಎಂದಳು ಪ್ರೇಮವುಕ್ಕುವ ಸ್ವರದಿಂದ.

ತಿಮ್ಮಣ್ಣ ಹಿಂಜರಿಯುತ್ತ ಮುಂಜರಿಯುತ್ತ—"ಹೊಡೆದರೆ ನೋಡ ಮ್ಮಾ—ನಾನು ಊಟವೇ ಮಾಡಲಿಕ್ಕಿಲ್ಲ." ಎನ್ನುತ್ತ ಮೆಲ್ಲಮೆಲ್ಲನೆ ಒಳಗೆ ಕಾಲಿಟ್ಟನು.

ತತ್‌ಕ್ಷಣವೇ ತಾಯಿ ಕಸಕ್ಕನೆ ಅವನ ಕೈಯನ್ನು ಇಕ್ಕುಳದ ಹಾಗೆ ಹಿಡಿದುಕೊಂಡು ದರದರನೆ ನಡುಮನೆಗೆ ಎಳೆದುಕೊಂಡು ಹೋದಳು. ದೊಡ್ಡಮ್ಮ ಬಾಗಿಲು ತಾಳ ಹಾಕುತ್ತ—"ಬೇಡ ಬಿಡೇ ಜಲಜಾ! ಇನ್ನುಮೇಲೆ ಇವ, ಕಲ್ಲಿನಿಂದ ಹೀಗೆ ಆಡೋದಿಲ್ಲ." ಎಂದು ಅವನ ಪರವಾಗಿ ಹೇಳುತ್ತಿದ್ದರು.

"ಸುಮ್ಮನೇ ಬಿಟ್ರೇ ಏರಿಹೋಗುತ್ತಾನೆ ಗೊತ್ತಾ? ಇವ ಈವೊತ್ತು ಪಡಿಸಿದ ಪಾಡಾದರೂ ಎಷ್ಟದು?"—ಎನ್ನುತ್ತಾ ಜಲಜಮ್ಮ ಮೂಲೆಯಿಂದ, ತೆಂಗಿನ ಕಸಬರಿಕೆಯ ನಿಡುಗಡ್ಡಿಗಳನ್ನು ಕಿತ್ತುಕೊಂಡು—"ಹೌದೇನೋ? ಹೊಡೆದರೆ ಊಟ ಮಾಡೋದಿಲ್ಲಾಂತ ಇನ್ನೂ ಹಟವೋ?"—ಎಂದು ಪ್ರಾರಂಭಿಸಿದಳು ತನ್ನ ಕೈಚಳಕಕ್ಕೆ.

"ಇನ್ನು ಹೀಗೆ ಮಾಡ್ತ್ಯಾ?-ಕತ್ತಲೇಲಿ ಓಡ್ತ್ಯಾ? ಊಟಮಾಡದೆ ಇದ್ದವರ ಪ್ರಾಣಾನ ತೆಗೀತ್ಯಾ?"-ಎಂದು ಕೆದರಿ ಕೆದರಿ ಕೇಳುತ್ತ ಪ್ರಶ್ನೆ ಪ್ರಶ್ನೆಗೆ ಏಟುಗಳನ್ನು ಕಾಯಿಸಿದಳು. ತಿಮ್ಮಣ್ಣ "ಇಲ್ಲಮ್ಮಾ! ಬಿಡಮ್ಮಾ! ದಮ್ಮಯ್ಯ! ದಕ್ಕಯ್ಯ!" ಎಂದು ಆಕ್ರಂದನ ಮಾಡುತ್ತ ಶರಣಾಗತನಾದನು. ಆ ಬಿಸಿಬೇಟುಗಳ "ಚ್ಯುಯಿಂ, ಚ್ಯುಂಯಿ" ಸದ್ದುಗಳನ್ನು ಕೇಳಿ, ಪುಟ್ಟನು ತನಗೇ ಆ ಏಟು ಬಿದ್ದಹಾಗೆ ಅಳಲಾರಂಭಿಸಿದನು. ದೊಡ್ಡಮ್ಮ ಪುಟ್ಟನನ್ನು ಎತ್ತಿಕೊಂಡು,—"ಬೇಡವೇ ಜಲಜಾ! ಸಾಕೇ! ಸಾಕು!" ಎಂದು ಕೂಗುತ್ತಾ ಅವಳ ಕೈಯಿಂದ ಕಡ್ಡಿಗಳನ್ನು ಕಿತ್ತುಕೊಂಡರು.

ತಾಯಿ ಗೆಲುವಿನಿಂದ ತಿಮ್ಮನನ್ನು ದೇವರ ಮುಂದೆ ಅಡ್ಡಬೀಳಿಸಿ, "ನಡೀ ಊಟಕ್ಕೆ ನಾಯಿ ಹಾಗೆ!" ಎಂದು ಬಿಟ್ಟಿಸಿದಳು. ಹಾಗೆಯೇ ತಿಮ್ಮಣ್ಣನು ತಲೆತಗ್ಗಿಸಿ ಕಣ್ಣೀರು ಸುರಿಸುತ್ತ ಬಟ್ಟಲ ಮುಂದೆ ಕುಳಿತನು. ಮಗನೊಂದಿಗೆ ಜಲಜಮ್ಮನೂ ಊಟಕ್ಕೆ ಕುಳಿತಳು. ಎಲ್ಲರೂ ಉಂಡಾಗಿದ್ದರೂ ಮಗನನ್ನು ಬಿಟ್ಟು ತಾಯಿಗೆ ಉಣಲಾಗಲಿಲ್ಲ. ಊಟವಾದ ಮೇಲೆ ತಿಮ್ಮಣ್ಣ ನಿರಾಸಮುದ್ರೆಯಿಂದ ಮಲಗಿದ್ದಾಗ, ಅತ್ತ ದೊಡ್ಡಮ್ಮನ ಬಳಿಯಲ್ಲಿ ಮಲಗಿದ್ದ ಪುಟ್ಟ ಆಗಾಗ "ಅಣ್ಣ ಪಾಪ! ಅಣ್ಣ ಪಾಪ!" ಅನ್ನುತ್ತಿದ್ದನು. ತಿಮ್ಮಣ್ಣನ ಕಣ್ಣಿಗೆ ನಿದ್ದೆ ಹಿಡಿದಾಗ ಜಲಜಮ್ಮ ದೀಪ ಹಿಡಿದುಕೊಂಡು,

ಅವನ ಮೈಯ್ಯಲ್ಲಿದ್ದಿರುವ ಹಿಡಿಗಡ್ಡಿಯ ಗಾಯಗಳನ್ನು ಅರಸಿ ಅರಸಿ ತೆಂಗಿನೆಣ್ಣೆ ಸವರಿದಳು. ಜಲಜಮ್ಮ ಆಗಾಗ "ಪ್ರೀತಿ ಹೃದಯದಲ್ಲಿ, ಹೊರಗಿಂದ ತೋರಿಸಬಾರದು" ಅನ್ನುತ್ತಿದ್ದಳು.

ಹೀಗೆ ತಾಯಿಯ ಶಾಸನ ವಿಧಾನವನ್ನು ಮನಗಂಡಿರುವ ತಿಮ್ಮಣ್ಣನು, ಪುಟ್ಟನ ಶಾಲಾ ಪ್ರಕರಣದಿಂದಾಗಿ ತಾಯಿಯ ಕೋಪಕ್ಕೆ ತಾನು ತುಂಬಾ ಪಾತ್ರನಾಗಿರುವೆನೆಂದು ತುಂಬಾ ಹೆದರಿದ್ದನು. ಆದರೆ ಮರುದಿನ ಬೆಳಗ್ಗಿನ ವರೆಗೂ ಅವನೆಣಿಸುತ್ತಿದ್ದ ಭಯಗಳೊಂದೂ ಜರುಗಿ ಬರಲಿಲ್ಲ.

ಆದರೆ ಬೆಳಿಗ್ಗೆ ಶಾಲೆಗೆ ಹೊರಡುವಾಗ ಮಾತ್ರ ಜಲಜಮ್ಮ ಪುಟ್ಟನಿಗೂ ಪೋಷಾಕು ಹಾಕಿ, ಒಂದು ಪುಸ್ತಕವನ್ನೂ ಅವನ ಕೈಗೆ ಕೊಟ್ಟು—"ತಿಮ್ಮೂ ನೋಡಿಕೊ. ಎಲ್ಲ್ಯಾದರೂ ಇವನನ್ನು ಬಿಟ್ಟು ಓಡಿಬಂದೀ! ಇವನನ್ನು ಅಳಿಸಿದೀ! ನಿನ್ನ ಬೆನ್ನೆಲುಬೆಲ್ಲಾ ಚೂರು ಚೂರು ಮಾಡಿಯೇನು! ಜೋಕೆ!" ಎಂದು ಹೆದರಿಸಿ, ಅವನನ್ನು ತಿಮ್ಮನ ಜತೆಯಲ್ಲಿ ಕಳುಹಿಸಿದಳು. ತಿಮ್ಮನಿಗೆ ಮನಸ್ಸಿನೊಳಗೆ ಮಹಾಕೋಪವು ಉಕ್ಕಿದರೂ, ಉಪಾಯವಿಲ್ಲದೆ ನುಂಗಿಕೊಂಡು, ಪಿಸುಂಟು ಮೋರೆಯಿಂದಲೇ ಹೊರಟನು. ಪುಟ್ಟನೂ ಅವನ ಹಿಂದೆ ಗುಡುಗುಡು ನಡೆಯುವಾಗ ತಾಯಿ—"ಪುಟ್ಟೂ, ಅಣ್ಣ ಏನಾದರೂ ತಂಟೆ ಮಾಡಿದರೆ ನನ್ನ ಹತ್ತಿರ ಹೇಳೂ" ಎನ್ನಲು, ಪುಟ್ಟ ಉಬ್ಬಿನಿಂದ—"ಹೇತೇನಮ್ಮ!" ಎಂದನು.

ತಾಯಿಯು ಕಣ್ಮರೆಯಾಗುವಷ್ಟು ದೂರ ನಡೆದ ಮೇಲೆ ತಿಮ್ಮ ತಮ್ಮನನ್ನು ನೋಡಿ ದ್ವೇಷದಿಂದ—"ಛಿ! ಘಟಿಂಗ! ಹೇತೇನಮ್ಮಂತ್ಯಲ್ಲಾ ನಾಚಿಗೆಟ್ಟು? ನಿನ್ನೆ ಮಾಡಿದ ಹಾಗೆ?

"ಇಲ್ಲಣ್ಣಾ? ಇನ್ನು ಮೇಲೆ ಹಾಗೆಲ್ಲಾ ಮಾಡೊಲ್ಲಾಣ್ಣ! ನಾ ಆಗಲೇ ಅಮ್ಮ ಹೇಳಿದ್ದಕ್ಕೆ ತುಂಬಾ ಮಾಡಿ ಬಂದಾತು" ಎಂದಂದು, ಮತ್ತೆ ಅಣ್ಣನನ್ನು ಒಳ್ಳೆಯದು ಮಾಡಿಕೊಳ್ಳಲಿಕ್ಕಾಗಿ, ಅಣ್ಣಾ! ಅಮ್ಮ ಕೆಟ್ಟೋಳು! ನಿಂಗ ತುಂಬ ಹೊಡೀತಾಳೆ. ಅಣ್ಣ! ನೀನು ನಂಗ ಪೆಟ್ಟು ಕೊಡಣ್ಣ! ನಾನು ಅಮ್ಮನ ಹತ್ರ ಹೇಳೋಲ್ಲಣ್ಣ!"

ತಿಮ್ಮನಿಗೆ ಅದೊಂದೂ ಆಗ ರುಚಿಸಲಿಲ್ಲ. ಪುಟ್ಟನಿಗೆ ತಾಯಿಯ ಬಲ ಸಂಪೂರ್ಣ ಉಂಟು, ತನಗಿಲ್ಲ. ಹೀಗಾಗಿ ಅವನು ಪುಟ್ಟನನ್ನೊಂದು ಪೀಡೆಯ ಹಾಗೆ ದಿನಾ ಶಾಲೆಗೆ ಕರೆಮುಕೊಂಡೇ ಹೋಗಬೇಕಾಗಿತ್ತು.

೨೨

ತಿಮ್ಮಣ್ಣನ ಕದಿಯುವ ಯೋಚನೆಗೆ ಪುಟ್ಟನು ದೊಡ್ಡ ಕಂಟಕವಾಗಿದ್ದನು. ಅವನಿಗೆ ಗೊತ್ತಾಗದ ಹಾಗೆ ಕತ್ತರಿ ಬರುವುದು ಹೇಗೆ? ಇದಕ್ಕಾಗಿ ಪುಟ್ಟನನ್ನು ಒಳಪಡಿಸಿಕೊಳ್ಳೋಣವೆಂದರೆ ಅವನು ಹಾಗೆಲ್ಲ ಒಳಗಾಗುವವನಲ್ಲ; ವಿಶ್ವಾಸಕ್ಕೆ ಅನರ್ಹನು. ಕಮಲೆ ಹಾಗಲ್ಲ, ತಿಮ್ಮಣ್ಣ ಹೇಗೆ ಹೇಳುವನೋ ಹಾಗೆ ಕೇಳುವವಳೇ. ಆದುದರಿಂದ ಅವಳು ತಿಮ್ಮಣ್ಣನಿಗೆ ಸಹಾಯಿನಿಯೇ.

ಆದರೆ ಮೊತ್ತಮೊದಲು ಕದಿಯಬೇಕಾದುದು ದುಡ್ಡು. ಆಹಾ! ಕದಿಯುವುದೆಂದರೆ ಎಷ್ಟು ಭಯಂಕರವೆನಿಸಿತ್ತು ತಿಮ್ಮಣ್ಣನಿಗೆ! ಸಣ್ಣ ಮಗುವಿಗೆ ಅತ್ತರೆ "ಅಕೋ ಕಳ್ಳ ಬಂದ! ಅಳಬೇಡಾ!" ಎಂದು ಹೆದರಿಸುವುದನ್ನು ಅವನು ಎಷ್ಟೋ ಬಾರಿ ಕೇಳಿದ್ದನು. ಈಗ ತಾನೇ ಅಂತಹ ಕಳ್ಳನಾಗುವುದೆಂದರೆ! ಮೊದಲಿನಿಂದಲೂ ಬೆಲ್ಲವೋ ಕಾಸೋ-ಉಂಡೆಯೋ ಕದ್ದುಕೊಳ್ಳುತ್ತಾ ಬಂದಿದ್ದರೆ ಕೊಂಚ ಪಳಗಿದಂತಾದರೂ ಆಗುತ್ತಿತ್ತು. ತಿಮ್ಮನಿಗೆ ಅಂತಹ ಪೂರ್ವಾಭ್ಯಾಸವಿನಿತೂ ಆಗಿರಲಿಲ್ಲ. ಅಂತೆಯೇ ದುಡ್ಡು ಕದಿಯುವುದು ಬಲು ದೊಡ್ಡ ಕಳ್ಳತನವೆಂದು ಹೆದರಿದನು. ಆದರೂ ಕತ್ತರಿ! ಕದಿಯದೆ ಅದು ಬರುವ ಬಗೆಯೇ ಇಲ್ಲ. ಸರಿ; ಎಷ್ಟು ದುಡ್ಡು ಕದಿಯಬೇಕು? ಮೊತ್ತಮೊದಲು ಇದನ್ನೊಂದು ನಿರ್ಣಯಿಸಲಿಕ್ಕಾಗಿ ತಿಮ್ಮಣ್ಣನು ಒಂದು ದಿನ ಗುಡ್ಡೆಯಂಗಡಿಗೆ ಹೊರಟನು.

ಆದರೆ ಅದಕ್ಕೂ ತುಂಬಾ ಉಪಾಯ ಮಾಡಬೇಕಾಗಿತ್ತು. ಶಾಲೆಯಿಂದ ಗುಡ್ಡೆಯಂಗಡಿಗೆ ಸುಮಾರು ಮುಕ್ಕಾಲು ಮೈಲಿತ್ತು. ಶಾಲೆಬಿಟ್ಟು ಅಲ್ಲಿಗೆ ಹೋಗಿ ಮನೆಗೆ ಹಿಂದಿರುಗುವಾಗ ಹೆಚ್ಚು ಹೊತ್ತಾಗಿ ಹೋಗುತ್ತದೆ. ಅದಕ್ಕೆ ಸುಳ್ಳು ಹೇಳಬೇಕು. ಅಲ್ಲದೆ ರಾಮನಂಗಡಿಯ ಪಕ್ಕದಲ್ಲಿಯೇ ಕತ್ತರಿ ಮಾರುವ ಮಣಿಸರಕಿನ ಅಂಗಡಿಯಿತ್ತು. ರಾಮನು ತಿಮ್ಮನನ್ನು ಚೆನ್ನಾಗಿ ಬಲ್ಲವನು. ಬಾಳೆ ಹಣ್ಣಿನ ಪರಿಚಯವದು. ಆದುದರಿಂದ ಆ ರಾಮ ಭಂಡಾರಿಯ ಕಣ್ಣಿಗೆಲ್ಲಿಯಾದರೂ ತಿಮ್ಮಣ್ಣ ಬಿದ್ದುದಾದರೆ, ಅಲ್ಲಿಗೆ ಯಾವಾಗಲೂ ಬಂದುಹೋಗುವ ಪದ್ಮನಾಭೈಯನೊಡನೆ ಅವನು ಪ್ರಸಂಗತ್ವೇನ ಹೇಳಿಬಿಟ್ಟಾನು. ಮೋಸವು ಹೊರಗಾದೀತು. ಪುಟ್ಟ ಕಮಲೆಯರೂ ಆ ರಾಮನಿಗೆ ಪರಿಚಿತರಿರಬಹುದು. ತಿಮ್ಮಣ್ಣನೊಬ್ಬನೇ ಆಗಿರು

ತ್ತಿಪ್ಪರಿ ಇಷ್ಟೆಲ್ಲ ಗಣಿಸಬೇಕಾಗಿರಲಿಲ್ಲ. ಪುಟ್ಟನೊಬ್ಬನು ಅವನ ಬೆನ್ನಟಿಡದ ಭೂತವಾಗಿದ್ದನು.

ಮಧ್ಯಾಹ್ನ ಶಾಲೆಗೆ ಹೊರಡುವ ಮೊದಲು, ಕಳ್ಳತನದ ವಿಘ್ನೇಶ್ವರ ಪೂಜೆಯಂತೆ, ಒಂದು ಪುಟ್ಟ ಕಳ್ಳತನವನ್ನ ಮೊದಲು ಮಾಡಿದನು. ಅಡುಗೆ ಮನೆಯ ಕಟ್ಟಿಗೆ ಮೂಲೆಯ ಗೂಡಿಗೆ ಕೈಹಾಕಿ, ಅಲ್ಲಿದ್ದ ಅರ್ಧಾಣೆಯನ್ನು ಕದ್ದನು. ಜಲಜಮ್ಮ ಹಾಲು-ತುಪ್ಪ—ಮೊದಲಾದುವುಗಳನ್ನು ಮಾರಿದ ದುಡ್ಡನ್ನು ಒಂದೇ ಕಡೆಯಲ್ಲಿಡುವುದಿಲ್ಲ; ಸಿಕ್ಕದ ಗಡಿಗೆಯಲ್ಲಿ, ಹಲಗೆಯಲ್ಲಿ, ಅಲ್ಲಲ್ಲಿಯ ಗೂಡುಗಳಲ್ಲಿ ಹೀಗೆ ಅಲ್ಲಲ್ಲಿ ಇಷ್ಟಿಷ್ಟು ಇಡುತ್ತಿದ್ದಳು. ಇದೆಲ್ಲ ತಿಮ್ಮನಿಗೆ ಗೊತ್ತಿಲ್ಲದಿಲ್ಲ.

ಮೊದಲೇ ತಿಮ್ಮಣ್ಣನು ಕಮಲೆಯೊಂದಿಗೆ ಎಲ್ಲ ವಿಷಯವನ್ನೂ ರಹಸ್ಯವಾಗಿ ಮಾತಾಡಿಟ್ಟಿದ್ದನು. ಸಂಜೆ ಶಾಲೆ ಬಿಟ್ಟ ಮೇಲೆ ಪುಟ್ಟನನ್ನು ಕುರಿತು ತಿಮ್ಮಣ್ಣ ಬಲು ಪ್ರೀತಿಯಿಂದ "ಪುಟ್ಟು! ನಿನಗೆ ಪೇಪರ್ಮಿಂಟಾಯಿಬೇಕಾ?" ಎಂದು ಕೇಳಿದನು.

ಪುಟ್ಟ:—"ಬೇಕಣ್ಣ. ಎಲ್ಲಿದಣ್ಣ ?"

ತಿಮ್ಮ:—"ಅಂಗಡೀಲಿ ಉಂಟು, ತಕ್ಕೊಂಡು ಬರಲಾ ?"

ಪುಟ್ಟ:—"ಉಂ. ನಾನೂ ಬತ್ತೇನೆ."

ತಿಮ್ಮ:—"ಆಯ್ತು ಬಾ. ಸ್ವಲ್ಪ ದೂರ ಮಾತ್ರವೇ ಬಾ. ಅಂಗಡಿಗೆ ಮಾತ್ರ ನೀನು ಬರಬಾರದು. ಕಮಲೆಯೂ ಬರಬಾರದು."

ಪುಟ್ಟ:—"ನೀಮಾತ್ರ ಹೋತ್ಯಾಣ್ಣ ?"

ತಿಮ್ಮ:—"ಹೌದು. ನಿನ್ನತ್ರವೂ ಅಕ್ಕನತ್ರವೂ ದುಡ್ಡಿಲ್ಲಷ್ಟೆ? ದುಡ್ಡಿಲ್ಲದವರು ಅಂಗಡಿಗೆ ಹೋದರೆ, ಅವನು ಪೇಪರ್ಮಿಂಟಾಯಿ ಯಾರಿಗೂ ಇಲ್ಲಂತಾನೆ. ಅದಕ್ಕೆ ನೀನೂ ಕಮಲಕ್ಕನೂ; ಅಕೋ, ಓ ಅಲ್ಲಿ ಕಾಣುವ ಆ ಮರದ ಬುಡದಲ್ಲಿ ಕೂತುಕೊಂಡು 'ಬಾಣಂದೊಂದು ಬೂಚಿ ಬಂದಾಟ' ನಾಲ್ಕು ಸಾರಿ ಆಡಿ. ನಾನು ಓಡಿ ಹೋಗಿ ಪೇಪರ್ಮಿಂಟಾಯಿ ತಂದ್ಬಿಡ್ತೇನೇ !"

"ಆತಣ್ಣ ! ಹೋಗುವ" ಎಂದು ಪುಟ್ಟನು ಗುಡುಗುಡು ಮುಂದಕೆ ನಡೆದನು. ಆಗ ಪುನಃ ಅವನು— "ಅಣ್ಣ ! ನಿನ್ನತ್ರ ದುಡ್ಡುಂಟಾ ?"

ತಿಮ್ಮ:—"ಉಂಟು"

ಪುಟ್ಟ:—"ಎಲ್ಲಿಂದಣ್ಣ ?"

ತಿಮ್ಮ:—"ಮಧ್ಯಾಹ್ನ ಗುಡ್ಡೇಲಿ ಸಿಕ್ಕದ್ದು"

ಸ್ವಲ್ಪ ಹೊತ್ತಿನ ಮೇಲೆ ತಿಮ್ಮನು—"ಪುಟ್ಟು, ನಂಗ ದುಡ್ಡು ಗುಡ್ಡೇಲಿ ಸಿಕ್ಕಿದ್ದೂಂತ ಅಮ್ಮನ ಹತ್ರ ಹೇಳ್ತೀಯಾ ?"

ಪುಟ್ಟ:—"ಹುಂ. ಹೇಳಿದರೇನಾಗುತ್ತಣ್ಣ ?

ತಿಮ್ಮ:—"ಅಮ್ಮ ನಂಗ ಹೊಡಿತಾಳೆ. ದುಡ್ಡು ನನಗ್ಯಾಕೆ ಕೊಡ ಲಿಲ್ಲಾಂತ !"

ಪುಟ್ಟ:—"ಹೌದು; ನಾ ಹೇಳೋಲ್ಲಣ್ಣ !"

ತಿಮ್ಮ:—ಪೇಪರ್ಮಿಠಾಯಿ ತಿಂದೇಂತ ಹೇಳ್ತ್ಯಾ ಅಮ್ಮನತ್ರ ?"

ಪುಟ್ಟ:—"ಹೇಳಿದರೆ ?"

ತಿಮ್ಮ:—"ಬಯ್ತಾಳೆ ಯಾಕೆ ತಿಂದಿ ಹಲ್ಲು ಹಾಳಾಗುತ್ತಂತ ! ಹೊಡೀತಾಳೆ ದುಡ್ಡು ಎಲ್ಲಿತ್ತಂತ."

ಪುಟ್ಟ:—"ಉಂ, ಹೇಳೊಲ್ಲಣ್ಣ. ಅಪ್ಪನತ್ರ ಹೇಳ್ಲಾ ?"

"ಬೇಡಪ್ಪೋ !—" ಎಂದು ತಿಮ್ಮನು ತಿಳಿಸಿ ಹೇಳಿ, "ಪುಟ್ಟ ! ನೀನು ತುಂಬ ಒಳ್ಳೆವ. ಅಮ್ಮ, ಇವತ್ತು ಇಷ್ಟು ಹೊತ್ತೇನೂಂತ ಕೇಳಿದರೆ, ಅಣ್ಣ ಹುಡುಗರೊಟ್ಟಿಗೆ ಆಡ್ತಾ ಇದ್ದ. ಅದಕ್ಕೇ ಇಷ್ಟು ಹೊತ್ತಾತು, ಅನ್ನು."

ಪುಟ್ಟ:—"ಉಂ. ನಂಗ ಒಂದು ಪೇಪರ್ಮಿಠಾಯಿ ಹೆಚ್ಚು, ಅಂ?"

ತಿಮ್ಮ:—"ನಿಂಗ ಎರಡು ಹೆಚ್ಚು ಕೊಡ್ತೇನೆ."

ಆ ಮರವು ಬಂತು. ಅದರ ಬಾಡದಲ್ಲಿ ಕಮಲಿ ಪುಟ್ಟಂದಿರನ್ನು ಕೂಡಿಸಿ, ತಿಮ್ಮಣ್ಣನು ಸಮೀಪದಲ್ಲಿರುವ ಗುಡ್ಡೆಯಂಗಡಿಗೆ ಬಿರಬಿರನೆ ಓಡಿದನು. ಅಂಗಡಿ ರಾಮನಿಗೆ ಮುಖವು ಗೊತ್ತಾಗಬಾರದೆಂದು, ಮುಖಕ್ಕೆ ಅಡ್ಡನಾಗಿ ತಲೆಯ ಮೇಲಿಂದ ಇಳಿಬೀಳುವಂತೆ ವಸ್ತ್ರದ ಸಂಚಿಯನ್ನಿರಿಸಿಕೊಂಡಿದ್ದನು. ಹೀಗೆ ಠಕ್ಕು ಮಾಡಿ ಮಣಿಸರಕಿನಂಗಡಿಗೆ ಹೋಗಿ ವಿಚಾರಿಸಿ ನೋಡಲು, ಅವನಿಗೆ ಸಮ್ಮತಿಯಾದ ಕತ್ತರಿಯೊಂದಕ್ಕೆ ಆರಾಣೆ ಬೆಲೆಯೆಂದು ತಿಳಿಯಿತು. "ನಾಳೆ ಅದೇ ಹೊತ್ತಿಗೆ ದುಡ್ಡು ತಂದು ಕೊಂಡು ಕೊಳ್ಳುವೆ"ನೆಂದು ಅಂಗಡಿಗಾರನಿಗೆ ಹೇಳಿಟ್ಟು, ಪೈಗೆ ಮೂರು ಸಿಕ್ಕುವ ಪೇಪರ್ ಮಿಠಾಯಿ ಕಾಲಾಣೆಗೆ ತೆಗೆದುಕೊಂಡು ಹಿಂದಿರುಗಿದನು. ಆಗ ಬಾಣಂದೊಂದು ಬೂಚಿಬಂದ ಆಟದಲ್ಲಿ ಕಮಲಿ ಪುಟ್ಟನಿಗೆ ಕಿಚಗುಳಿಮಾಡಿ ಇಬ್ಬರೂ ಸೇರಿ ಕಿಲಕಿಲನೆ ನಗುತ್ತಿದ್ದರು.

ತಿಮ್ಮನನ್ನು ಕಾಣುತ್ತಲೇ ಪುಟ್ಟನು ಆನಂದದಿಂದ—“ಅಣ್ಣಣ್ಣಾ! ಎಂಟು ಸಾರಿ ಬಾಣಂದೊಂದು ಬೂಚಿ ಬಂದಾತು. ಅಕ್ಕ ನಂಗ ಆದೇಳು ಸಾರಿ! ನಾನು ಅಕ್ಕಂಗೆ ಇಪ್ಪತ್ತೇಳು ಸಾರಿ!” ಎಂದನು ಬೆರಳು ತೋರಿಸುತ್ತ.

ಕಮಲೆ ನಗುತ್ತ—“ಇಲ್ಲಣ್ಣ. ನಾನು ಮೂರು ಸಾರಿ, ಅವ ಎರಡು ಸಾರಿ. ಅಷ್ಟೇ” ಎಂದಳು.

ಪುಟ್ಟ:—“ಅಣ್ಣ! ಪೇಪರ್ ಮಿಠಾಯಿ?”

“ಇಕೋ! ಇಷ್ಟು ಲೆಕ್ಕಮಾಡಿ ತರುವಾಗ ಅಷ್ಟು ಹೊತ್ತಾತು. ಎಂದು ತಿಮ್ಮಣ್ಣ ಪೇಪರ್ ಮಿಠಾಯಿಯನ್ನು ಹಂಚಿದನು. ಆರು ಪುಟ್ಟನಿಗೆ, ಎರಡು ಕಮಲೆಗೆ, ಒಂದು ತನಗೆ. ಕಮಲೆ “ನನಗೆ ಒಂದೇ ಸಾಕಣ್ಣ, ನೀನು ತಿನ್ನಣ್ಣ” ಎಂದು ಒಂದು ತಿಮ್ಮಣ್ಣನಿಗೇ ವಾಪಾಸು ಕೊಟ್ಟಳು. ತಿಮ್ಮಣ್ಣ ಅದನ್ನು ಪುಟ್ಟನಿಗೇ ಕೊಟ್ಟು—“ಪುಟ್ಟ! ಒಂದೊಂದೇ ತಿನ್ನು. ಅಮ್ಮನಿಗೆ ಹೇಳಬೇಡಾ. ಮನೆಗೆ ಮುಟ್ಟುವಾಗ ಪೂರಾ ಮುಗೀಲಿ. ನಾನು ಹೇಳಿಕೊಟ್ಟದ್ದಿಲ್ಲಾ, ನೆಂಪುಂಟಾ?”

“ಉಂಟುಂಟು!” ಎನ್ನುತ್ತಾ ಪುಟ್ಟ ಮುಂದೆ ಹೊರಟನು. ತಿಮ್ಮಣ್ಣನು ಕತ್ತರಿಯನ್ನು ನೆನೆನೆನೆದು ಬಹಳ ಸಂತೋಷದಿಂದ ನಡೆದನು. ಕಮಲೆಯೂ ಅಣ್ಣನ ಸಂತೋಷವನ್ನು ನೋಡಿ ಸಂತೋಷಿಸಿ ಅಣ್ಣ! ಒಂದು ಪದ ಹೇಳೋ ಮಿಠಾಯಿ ಪದ!” ಅಂದಳು. ಅವನು ಹೇಳಿದ ಪದ ಅಷ್ಟು ಸರಿಯಾಗಿರಲಿಲ್ಲ. ಆದರೂ ಪುಟ್ಟ ಕುಣಿದನು. ಕಮಲೆ ನಕ್ಕಳು.

## ೨೩

ಇನ್ನು ಕತ್ತರಿಯ ಬೆಲೆ ಆರಾಣೆಯನ್ನು ಕದ್ದುಕೊಳ್ಳುವುದು ಹೇಗೆ? ತಂದೆಯ ಜನಿವಾರದಲ್ಲಿರುವ ರಿಕಾರ್ಡು ಪೆಟ್ಟಿಗೆಯ ಬೀಗದ ಕೈಯನ್ನು ಅಪಹರಿಸಿ ದುಡ್ಡು ಕದಿಯಬಹುದು. ಅಯ್ಯೋ! ಅದು ಬಲು ದೊಡ್ಡ ಚೋರಿ ಎನಿಸಿತು. ಅದು ಬೇಡ. ತಾಯಿ ಅಲ್ಲಲ್ಲಿ ಇಟ್ಟಿರುವ ದುಡ್ಡಿನಿಂದ ಸ್ವಲ್ಪ ಸ್ವಲ್ಪ ಜಾರಿಸಿಬಿಟ್ಟರೆ ಆರಾಣೆಯಾಗಿ ಹೋಗುತ್ತದೆ. ಇದೇ ಸರಿ.

ಆ ದಿನ ಸಂಜೆಯಲ್ಲಿ ಜಲಜಮ್ಮನು ಹಸುವನ್ನು ಕರೆಯಲು ಹಟ್ಟಿಗೆ ಹೋಗಿದ್ದಾಗ ಮನೆಯೊಳಗೆ ಯಾರೂ ಇರಲಿಲ್ಲ. ಇದೇ ತಕ್ಕ ಸಮಯವೆಂದುಕೊಂಡು ತಿಮ್ಮಣ್ಣನು ಮೊದಲೇ ನೋಡಿಟ್ಟುಕೊಂಡ ಎಡೆಗಳಿಂದ

ಆಣೆ-ಕಾಲಾಣೆ ಪೈಗಳ ಸಣ್ಣ ಸಣ್ಣ ಗುಂಪುಗಳಿಂದ ಒಟ್ಟು ಆರಾಣೆ ಆಗುವಷ್ಟು ಮಾತ್ರ ಕದ್ದುಕೊಂಡು, ಶಬ್ದವಾಗದ ಹಾಗೆ ಅದನ್ನೊಂದು ಬಟ್ಟೆಯಲ್ಲಿ ಕಟ್ಟಿ, ತನ್ನ ಪುಸ್ತಕದ ಸಂಚಿಯೊಳಗೆ ಅಡಗಿಸಿದನು. ಎಲ್ಲಿ ತಾಯಿಗೆ ಗೊತ್ತಾಗಿ ರಗಳೆ ಎಬ್ಬಿಸುವಳೋ ಎಂದು ಹೊಟ್ಟೆಯೊಳಗೆ ಮುಗುಚುತ್ತಲೇ ಇತ್ತು. ಪುಣ್ಯಕ್ಕೆ ಅದೊಂದೂ ತಾಯಿಯ ಗಮನಕ್ಕೆ ಬರಲಿಲ್ಲ.

ಆ ರಾತ್ರಿ ಕಳೆದು ಬೆಳಗಾಗಿ, ಶಾಲೆಗೆ ಹೋಗಿ ಮನೆಗೆ ಬಂದು, ಊಟ ಮಾಡಿ ಮತ್ತೆ ಶಾಲೆಗೆ ಹೋಗಿ ಸಂಜೆ ಶಾಲೆ ಬಿಡುವ ಹೊತ್ತಿನ ವರೆಗೆ ಸಂದ ಕಾಲವು ತಿಮ್ಮಣ್ಣನಿಗೊಂದು ಯುಗವಾಯಿತು. ಅದುವರೆಗೆ ಕದ್ದಿರುವ ದುಡ್ಡನ್ನು ಗುಟ್ಟಿನಿಂದ ಕಾಪಾಡುವ ಭಾರವು ಬೆಂಕಿಯನ್ನು ಮುಚ್ಚಿಟ್ಟುಕೊಳ್ಳುವ ಹಾಗೆ ಮಹಾ ಪ್ರಯಾಸವಾಯಿತು.

ಸಂಜೆ ಶಾಲೆಬಿಟ್ಟ ಕೂಡಲೇ ತಿಮ್ಮಣ್ಣ–“ಪುಟ್ಟಾ! ಈವೊತ್ತು ಕೂಡಾ ಪೇಪರ್ಮಿಠಾಯಿ ತಕ್ಕೊಳ್ಳೋಣ.” ಎಂದು ಹೇಳಿ, ಪುಟ್ಟ-ಕಮಲೆಯರೊಂದಿಗೆ ಗುಡ್ಡೆಯಂಗಡಿಯ ಕಡೆಗೆ ತಿರುಗಿದನು. ನಿನ್ನೆ ಕೂಡಿಸಿದ ಆ ಮರದ ಬುಡದಲ್ಲಿಯೇ ಅವರನ್ನು ಆಡಲಿರಿಸಿ, ಮಣಿಸರಕಿನ ಅಂಗಡಿಗೆ ಹೋದನು. ಮುಖಕ್ಕೆ ಸಂಚಿಯನ್ನು ಮರೆಮಾಡಲು ಮರೆಯಲಿಲ್ಲ. ಆರಾಣೆ ಕೊಟ್ಟು ಕತ್ತರಿಯನ್ನು ಪಡೆದುಕೊಂಡುದೂ ಆಯಿತು. ನಿನ್ನೆ ಕದ್ದ ಅರ್ಧಾಣೆಯಲ್ಲಿ ಮಿಗಿಲಿದ್ದ ಕಾಲಾಣೆಗೆ ಪೇಪರ್ಮಿಠಾಯಿ ಕೂಡಾ ಕೊಂಡುಕೊಂಡು ಹಿಂದಿರುಗಿದನು.

ಆಹಾ! ತಿಮ್ಮನ ಮೊತ್ತಮೊದಲಿನ ಕಷ್ಟಾರ್ಜಿತ ಸೊತ್ತು ಅದು! ಕತ್ತರಿ! ಅದನ್ನು ಕಂಡು ಅದೆಷ್ಟು ಆನಂದ ಅವನಿಗೆ! ನೋಡಿದಷ್ಟು ತೃಪ್ತಿಯಿಲ್ಲ. ಅದರಿಂದ ಏನು ಕತ್ತರಿಸುವುದೆಂದು ತೋರದೆ ಮೊತ್ತಮೊದಲಿಗೆ ತನ್ನ ತಲೆಗೂದಲಿನ ಒಂದು ಚೂರನ್ನೆ ಕತ್ತರಿಸಿದನು. ಆ ಮೇಲೆ ಅಂಗಿಯ ಕೊಸೆಯನ್ನು ಕತ್ತರಿಸಿದನು. ಇನ್ನು ತಂದೆಯ ಉಪಕರಣದೊಳಗಿನಿಂದ, ಬಣ್ಣದ ಕಾಗದ ಬ್ಯಾಗಡೆ ಮೊದಲಾದುವುಗಳನ್ನು ಕದ್ದುಕೊಳ್ಳಬೇಕು. ಆಪರೆ-ಆಪರೆ—ಇನ್ನೊಂದು ಮಹಾಸಮಸ್ಯೆ ಮುಂದೆಬಂದು ನಿಂತಿತಲ್ಲ! ಕತ್ತರಿಯನ್ನು ಉಪಯೋಗಿಸಿಕೊಳ್ಳಲು ತಕ್ಕ ಸಮಯವೆಲ್ಲಿ? ಎಲ್ಲಿಗೆ ಹೋದರೂ ಪುಟ್ಟನೊಬ್ಬನು ಬೆನ್ನಬಿಡದ ಭೂತದ ಹಾಗೆ ಇದ್ದೇ ಇರುವನಲ್ಲ! ಪುಟ್ಟನಿಗೆ ಈ ಕತ್ತರಿಯನ್ನು ತೋರಿಸಬೇಕೋ ಬೇಡವೋ ಎಂದು ಇನ್ನುವರೆಗೆ ಯೋಚಿಸಿರಲಿಲ್ಲ. ಸದ್ಯ: ಅವನನ್ನು ನಂಬಿದರೂ ಯಾವಾಗಲೂ ನಂಬುವು

ದೆಂತು? ಅವನ ಸಂಬಾಗೆಯನ್ನು ಕೊಂಡುಕೊಳ್ಳಲು ಪೇಪರ್‌ಮಿಠಾಯಿ ತರುವುದೆಲ್ಲಿಂದ? ಅಯ್ಯೊ! ತಿಮ್ಮಣ್ಣ ತಮ್ಮನ ಕೈಯಾಳಿನ ಹಾಗೆ, ಪರತಂತ್ರನಾಗಿ ಅವನಿಗೆ ಹೆದರಿಕೊಂಡೇ ಇರಬೇಕು? ಅವನಿಗೆ ಗೊತ್ತಾಗದ ಹಾಗೆ ಕತ್ತರಿಯನ್ನು ಉಪಯೋಗಿಸುವ ಮಾರ್ಗವೂ ಕಾಣದಲ್ಲ! ಅಯ್ಯೋ!......

ಯೋಚನೆ ಮಾಡುತ್ತಾ ತಿಮ್ಮಣ್ಣ ಸಂಚಿಯೊಳಗಿನಿಂದ ಯಾವುದೋ ಒಂದು ಕಾಗದವನ್ನು ತೆಗೆದು ಕತ್ತರಿಸುತ್ತ ಬರುತ್ತಿದ್ದನು. ದಾರಿಯ ಅಕ್ಕ ಪಕ್ಕದಲ್ಲಿದ್ದ ಪೊದರಿನ ಚಿಗುರೆಲೆ ದಂಟುಗಳೂ ಅವನ ಕೈ-ಕತ್ತರಿಗೆ ಬಲಿ ಬೀಳದಿರಲಿಲ್ಲ. ಕಿಲಿಕಿಲಿಸುವ ಪುಟ್ಟನ ಅಟ್ಟಹಾಸದ ನಗು ಕಿವಿಯೊಳಗೆ ಹಾರಿಬಿದ್ದೊಡನೆ, ಝುಗ್ಗನೆ ಅರಿವಿಗೆ ಬಂದು, ಗಕ್ಕನೆ ಕತ್ತರಿಯನ್ನು ಸಂಚಿಯೊಳಗೆ ಹಾಕಿಬಿಟ್ಟನು. ಪುಣ್ಯಕ್ಕೆ ಕಮಲೆಯನ್ನು ಕಿಚಗುಳಿಮಾಡಿ ನಗಿಸುವುದರಲ್ಲಿ ತಲ್ಲೀನನಾಗಿದ್ದ ಪುಟ್ಟನಿಗೆ, ತಿಮ್ಮಣ್ಣನ ಆಗಮನವು ತಿಳಿಯಲಿಲ್ಲ. "ಹೊ! ಅಣ್ಣ ಬಂದ!" ಎಂದು ಕಮಲೆ ಹೇಳುತ್ತಲೇ ಪುಟ್ಟ ಅಣ್ಣನನ್ನು ಕಂಡು ಹಾರುತ್ತ—

"ಅಣ್ಣ! ಅಣ್ಣ! ಬಂದ! ಪೇಪರ್ಮಿಠಾಯಿ ತಂದ!
ಗುಡ್ಡೇ ಅಂಗಡಿಯಿಂದ! ನಂಗೇ ಹತ್ತು ತಂದ!
ಅಕ್ಕನಿಗೊಂದೇ ಎಂದ! ತಾನು ಎರಡೂ ತಿಂದ!
ಅಣ್ಣಾ ತಂದ ಪೇಪರ್ಮಿಠಾಯ್ ಬಣ್ಣಾ ಭಾಳ ಚಂದ!"

ಎಂದು ಹಾಡಿದನು. ತಿಮ್ಮನು ಪೇಪರ್ಮಿಠಾಯಿಯನ್ನು ಹಂಚಿಕೊಟ್ಟನು. ನಂತರ ಆ ಮೂವರು ಸೋದರರು ಮನೆಯ ದಾರಿ ಹಿಡಿದರು. ತಾಯಿ ಕೇಳಿದರೆ ನಿನ್ನೆ ಹೇಳಿದ ಹಾಗೆಯೇ ಹೇಳಬೇಕೆಂದು ತಿಮ್ಮಣ್ಣನು ಪದೇ ಪದೇ ಪುಟ್ಟನಿಗೆ ಎಚ್ಚರಿಕೆ ಕೊಟ್ಟನು. ಪುಟ್ಟನು ಉತ್ಸಾಹದಿಂದ "ಉಂ ಉಂ" ಎನ್ನುತ್ತಾ ಇಬ್ಬರಿಗಿಂತಲೂ ಮುಂದಿನಿಂದ ಗುಡುಗುಡು ನಡೆಯುತ್ತಿದ್ದನು.

ಆಗ ಕಮಲೆ ಕುತೂಹಲವನ್ನು ತಡೆಯಲಾರದೆ ಅಣ್ಣನೊಂದಿಗೆ ಪಿಸು ದನಿಯಿಂದ—"ಕತ್ತರಿ?" ಎಂದು ಕೇಳುತ್ತ ತಿಮ್ಮಣ್ಣನ ಸಂಚಿಯೊಳಗೆ ಇಣಿಕಿದಳು. "ಝುಗ್!" ಎಂದಿತು ಅವಳ ಕಣ್ಣಿಗೆ ಕತ್ತರಿ! ಅದನ್ನವಳು ಹೊರಕ್ಕೆಳೆಯುವದಂತೆ ತಿಮ್ಮ "ಶ್ಶ್!" ಎಂದು ನಿವಾರಿಸಿದನು. "ಅಣ್ಣ, ನಂಗೂ ಕೊಡ್ತ್ಯ?" ಎಂದು ಪುನಃ ಕಮಲೆ ಗುಸುಗುಟ್ಟಲು "ಛೀ!" ಎಂದು ಪುನಃ ತಿಮ್ಮಣ್ಣ ಹೆದರಿಸಿದನು.

ಆಗ ಪುಟ್ಟ ಗಟ್ಟಿಯಾಗಿ,—"ಅಣ್ಣ! ನಾಳೆ ನಾ ಪೇಪರ್ನೋರಾಯಿ ಕೊಂತ್ರಾ?"

"ದುಡ್ಡಿಲ್ಲಲ್ಲಾ ಪುಟ್ಟೂ! ನಿನ್ನೆ ಸಿಕ್ಕಿದ್ದು ಇವತ್ತಿನ ವರೆಗೆ ಬಂತು! ಇನ್ನಿಲ್ಲ!"—ತಿಮ್ಮನು ಅಂಗೈ ಮಗುಚಿದನು.

"ನಾಳೆ ನಾನು ಅಮ್ಮತ್ರ ಕೇಳ್ಲಾ ದುಡ್ಡು?" ಎಂದನು ಮತ್ತೂ ಪುಟ್ಟ.

"ಅಯ್ಯೋ! ಬೇಡ! ಅಮ್ಮನತ್ರ ಕೇಳಿದರೆ ಪೆಟ್ಟು ಕೊಡ್ತಾಳೆ ಪೆಟ್ಟು!"

"ಹಾಗಾರೆ ಇನ್ನೊಮ್ಮೆ ನಿಂಗ ಗುಡ್ಡೇಲಿ ದುಡ್ಡು ಸಿಕ್ಲೀ!"

"ಆತು! ಸಿಕ್ಕಿದರೆ ತೆಕ್ಕೊಳ್ಳುವಾ"

ಬಾಯಿಯಿಂದ ಹೀಗೆ ಮಾತಾಡುತ್ತಿದ್ದರೂ ಮನದಲ್ಲಿ ಈ ಕತ್ತರಿಯನ್ನೇನು ಮಾಡುವುದೆಂಬ ಚಿಂತೆ ಉರುಳಿಸಲಾಗದ ಗುಡ್ಡದಂತೆ ಕುಳಿತೇ ಇತ್ತು. ಕತ್ತರಿಯೇನೋ ಕೈಗೆ ಬಂತು. ಮನೆ ಸಮೀಪಿಸಿದಂತೆ ಅದರ ಭಾರ ಹೆಚ್ಚುತ್ತಲೇ ಬಂತು! ಇನ್ನೇನು ಗುಡ್ಡೆಯಿಂದ ತೋಡಿಗೆ ಇಳಿಯಬೇಕು......ಮನೆಯಲ್ಲಿ ಸಂಚಿಯೊಳಗೇ ಕತ್ತರಿಯನ್ನು ಇಟ್ಟಿರುವುದೇನೂ ನಿರಪಾಯವಲ್ಲ; ಏಕೆಂದರೆ ತಾಯಿ ಒಮ್ಮೊಮ್ಮೆ ಅಕಸ್ಮಾತ್ತಾಗಿ ತಿಮ್ಮಣ್ಣನ ಆ ಸಂಚಿಯನ್ನು ಜಾಡಿಸಿ ಶುಚಿಮಾಡಿಡುವುದುಂಟು........

ಹೀಗೆ ಮನಸ್ಸಿಗೇನೂ ತೋರದಿರುವಾಗ ತೋಡಿಗೆ ಇಳಿಯುವ ದಾರಿಯ ಬದಿಯಲ್ಲಿಯೇ ದೊಡ್ಡದೊಂದು ಪೊದರು ಕಣ್ಣಿಗೆ ತೋರಿತು. ಸದ್ಯಕ್ಕೆ ಕತ್ತರಿಯನ್ನು ಆ ಪೊದರಿನೊಳಗೆ ಅಡಗಿಸಿಡುವುದೆಂಬ ಯೋಚನೆ ಮಿಂಚಿನಂತೆ ಹೊಳೆಯಿತವನಿಗೆ. ಉಳಿದ ಯೋಚನೆ ನಿಧಾನವಾಗಿ ಮಾಡೋಣ.

ಪುಟ್ಟನು ಹಿಂದೆ ನೋಡದೆ ಮುಂದೆ ಹೋಗುತ್ತಿದ್ದನು. ತಿಮ್ಮಣ್ಣ ಥಕ್ಕನೆ ಆ ಪೊದರಿನ ಬಳಿಯಲ್ಲಿ ಕುಳಿತು ಸಂಚಿಯೊಳಗೆ ಕೈಹಾಕಿದನು. ಅಷ್ಟರಲ್ಲಿ ಚಪಲಪುಟ್ಟನು ಏನೋ ಮಾತಾಡಲು "ಅಣ್ಣ!"–ಎಂದು ಬಾಯಿ ತೆರೆದು ಹಿಂದೆ ನೋಡಿ ನಿಂತು—"ಯಾಕಣ್ಣ ಕೂತಿ?" ಎಂದನು.

"ಯಾಕಿಲ್ಲ ನೀ ಹೋಗು ಬಂದೆ ಬಂದೆ!" ಎಂದನು ಎದೆಯುದುರಿದ ತಿಮ್ಮಣ್ಣ.

"ನಂಗೂ ಬತ್ತೇ–" ಎನ್ನುತ್ತಾ ಪುಟ್ಟನೂ ಓಡಿಬಂದು ಅಣ್ಣನ ಪಕ್ಕದಲ್ಲಿಯೇ ಕುಳಿತನು. ಆಗ ತಿಮ್ಮಣ್ಣ ನಡುಗುವ ಕೈಯನ್ನು ಪೊದರಿನೊಳಗೆ

ಹೊಗಿಸಿ ಅವಸರವಸರವಾಗಿ ಕತ್ತರಿಯನ್ನು ಬಚ್ಚಿಡುತ್ತಿದ್ದನು. ಅದನ್ನು ನೋಡಿ ಪುಟ್ಟ—ಓ! ಸುಳ್ಳು ಹೇಳ್ತೀ! ಕೇಪಳ ಹಣ್ಣು ಕೊಯ್ತೀ! ನಂಗ ನಂಗ! ಎನ್ನುತ್ತಾ ಬಗ್ಗಿ ತಿಮ್ಮಣ್ಣನ ಕೈಯೊಂದಿಗೇ ತನ್ನ ಕೈಯನ್ನೂ ತುರುಕಿದನು.

"ಏ! ಮುಳ್ಳುಗಿಳ್ಳು ಕಂತೀತು! ದೂರ ಹೋಗಾ!" ಎಂದು ತಿಮ್ಮಣ್ಣ ಸಿಟ್ಟಿನಿಂದ ನಿವಾರಿಸುವಾಗ ಪುಟ್ಟ—"ಹ! ಅದೇನಣ್ಣ ಫಳ! ಫಳ! ಕತ್ರಿ ಕತ್ರಿ! ನಂಗ! ನಂಗ!" ಎಂದು ಆನಂದಾತಿಶಯದಿಂದ ಕಿರಿಚಿದನು.

ಕೂಡಲೇ ಕಲ್ಪದ ತಿಮ್ಮನು ಯುಕ್ತಿ ಹೂಡಿ, ಅದು ಅಲ್ಲಿ ಆಗಲೇ ಸಿಕ್ಕಿದ ಹಾಗೆ ತೆಗೆಯುತ್ತ—"ಅರೆ! ಹೊಸಾ ಕತ್ರಿ! ನೋಡೇ ಕಮಲ! ಈ ಪೊದರಲ್ಲಿ ಹೊಸಾ ಕತ್ರಿ ಒಂದು ಸಿಕ್ಕಿತು!" ಎಂದು ಅದನ್ನು ತಿರುತಿರುವಿ ನೋಡುತ್ತಾ ಎದ್ದನು. ಕಮಲೆ ಮೋಸವಾಯಿತೆಂದು ಪಿಳಿಪಿಳಿ ನೋಡುತ್ತಿದ್ದಳು.

"ಅಣ್ಣ! ನಂಗ ಕೊಡ್ತ್ಯಾ ಇದು?" ಎನ್ನುತ್ತಾ ಪುಟ್ಟನು ಕತ್ತರಿಯ ಕಡೆಗೆ ಕೈಚಾಚಿದನು.

"ತಡಿತಡಿ! ಕೈ ತುಂಡಾದೀತು! ಅಲ್ಲ, ಇದು ನಿಂಗ ಕೊಟ್ರೇ ನೀನು ಏನು ಮಾಡ್ತಿ?"— ತಿಮ್ಮಣ್ಣನ ಪ್ರಶ್ನೆ.

ಪುಟ್ಟ:—"ಅಮ್ಮನಿಗೆ ತೋರಿಸ್ತೇನೆ!"

ತಿಮ್ಮ:—"ಅಕೊ! ಅದೇ ಬೇಡಾನ್ನೋದು! ಇದನ್ನು ಅಮ್ಮನಿಗೆ ತೋರಿಸಿಬಿಟ್ರೇ ಅಮ್ಮ ಕೈ ಕತ್ತರಿಸಿಕೊಂಡೀಂತ ತೆಗೆದು ಪೆಟ್ಟಿಗೆಯೊಳಗಿಟ್ಟು ಬಿಡ್ತಾಳೆ! ಮತ್ತೆ ನಂಗೂ ಇಲ್ಲ, ನಿಂಗೂ ಇಲ್ಲ, ತಿಳೀತೆ?"

ಪುಟ್ಟ:—"ಹಾಗಾರೆ ಇದನ್ನ ಎಲ್ಲಿಡೋದು?"

ತಿಮ್ಮ:—"ಈ ಪೊದರಿನೊಳಗೇ ಅಡಗಿಸಿಡುವ. ದಿನಾ ಶಾಲೆಗೆ ಹೋಗುವಾಗ ತಕ್ಕೊಂಡು ಹೋಗುವ. ಇದು ನಿನಗೂ ನನಗೂ ಇಬ್ಬರಿಗೂ ಆಯಿತು."

"ನನಗೆ?" ಎಂದಳು ಕಮಲೆ.

"ನಿನಗೂ" ತಿಮ್ಮನೆಂದನು.

"ಆತು ಹಾಗಾರೆ—" ಎಂದು ಪುಟ್ಟ ಒಪ್ಪಿದನು. ತಿಮ್ಮಣ್ಣನು ಕತ್ತರಿಯನ್ನು ಆ ಪೊದರಿನ ನಡುವಿನಲ್ಲಿ ಅಡಗಿಸಿಟ್ಟನು. ಆ ಮೇಲೆ ಮನೆ

ಹೋಗುವಾಗೆಲ್ಲಾ ಈ ಸಮಾಚಾರಗಳನ್ನು ತಾಯಿಗೆ ತಿಳಿಸಲೇಬಾರದೆಂದು ಪುಟ್ಟನಿಗೆ ನಾನಾ ರೀತಿಯಾಗಿ ಪಾಠ ಮಾಡಿಸುವುದೇ ತಿಮ್ಮಣ್ಣನ ಬಾಯಿಯ ಕೆಲಸವಾಯಿತು.

೨೪

ಎಷ್ಟು ಮುಚ್ಚಿಡಬೇಕೆಂದು ಯತ್ನಿಸಿದರೂ ಕಡೆಗೂ ಪುಟ್ಟ ನೋಡಿಯೇ ಬಿಟ್ಟ! ಇನ್ನು ಅವನಿಗೆ ಹೆದರಿಕೊಂಡು, ಅವನೊಡನೆ ಅಂಗಲಾಚಿಕೊಂಡು, ಅವನು ಹೇಳಿದ ಹಾಗೆ ಕೇಳಿಕೊಂಡು ಇರಬೇಕಾಯಿತಲ್ಲ! ಅಯ್ಯೋ! ತಿಮ್ಮಣ್ಣನ ಆನಂದದೆಣಿಕೆಗಳೆಲ್ಲಾ ಮಣ್ಣುಗೂಡಿಹೋದುವು! ಯಾಕೆ ದುಡ್ಡು ಕದ್ದೆನೋ ಯಾಕೆ ಕತ್ತರಿ ಕೊಂಡುಕೊಂಡೆನೋ ಎಂದು ಪಶ್ಚಾತ್ತಾಪ ಪಡುವಲ್ಲಿವರೆಗೂ ಬಂದು ಮುಟ್ಟಿತು. ಇನ್ನು ನಿವೃತ್ತಿಯೇನು? ಪುಟ್ಟನಿಂದ ಗುಟ್ಟು ಬಯಲಾಗದಿದ್ದರೆ ಸಾಕಾಗಿತ್ತು. ಅಂದು ರಾತ್ರಿ ತಿಮ್ಮಣ್ಣ ನಿದ್ದೆ ಮಾಡಿದಾಗಲೂ ಅದೇ ಕಳವಿನ ಕತ್ತರಿ ಅವನ ಕುತ್ತಿಗೆಯನ್ನು ಕತ್ತರಿಸಲು ಬಾಯಿಬಿಚ್ಚಿ ನಿಂತಂತಹ ಭಯಂಕರ ಕನಸುಗಳನ್ನೆ ಕಂಡನು.

ಬೆಳಗಾಯಿತು. ಹಲ್ಲು ತಿಕ್ಕಿ, ಮುಖ ತೊಳೆದು, ಗಂಜಿ ಊಟಕ್ಕೆ ಪ್ರಾರಂಭವಾದ ಸಮಯ. ಇನ್ನೂ ಆ ಗ್ರಾಮಕ್ಕೆ ಕಾಫಿಯ ಸೋಂಕು ತಾಗಿರಲಿಲ್ಲ. ಹುಡುಗ ಹುಡುಗಿಯರಿಗೆಲ್ಲಾ ಎರಡೆರಡು ಸವುಂಟು ಕುಚ್ಚಲು ಅಕ್ಕಿಯ ಗಂಜಿ, ಅದರ ಮೇಲೆ ಎರಡೆರಡು ಚಮಚ ಮನೇ ದನದ ಮಘಮಘಿಸುವ ತುಪ್ಪ, ಮೇಲೊಂದು ಮಿಡಿ ಉಪ್ಪಿನಕಾಯಿಯ ಚೂರು! ಆಹಾ! ಅದೇನು ಸೊಂಪು! ಅದೇನು ತಂಪು! ಮತ್ತೆ ಮಧ್ಯಾಹ್ನದ ಊಟದ ಸಮಯಕ್ಕೆ ಸರಿಯಾದ ಹಸಿವೆ. ಇಂತಹ ನಿಜವಾದ ಹಸಿವೆ ಬೆಳಿಗ್ಗೆ ಕಾಫಿ ಕುಡಿದರೆ ಆಗುವುದೇ ಇಲ್ಲ. ಕಾಫಿ ಕುಡಿದರೆ ಆಗುವ ಹಸಿವೆ ಕಳ್ಳ ಹಸಿವೆ! ಒಮ್ಮೊಮ್ಮೆ ಹೊಟ್ಟೆಗೆ ಬೆಂಕಿ ಬಿದ್ದಂತಾಗುವ ಸಂಕಟದ ಹಸಿವೆ. ಅದರ ಮೇಲೆ ಟಿಫೀನು ಸೇರಿದರಂತೂ ಜಡತನವೇ ಬಂದುಬಿಡುತ್ತದೆ. ಇದು ಸುಳ್ಳು ವಾದವೆಂದು ಬೆಳಗ್ಗೆ ಬಲವಾದ ಕಾಫಿ ಉಪ್ಪಿಟ್ಟು ಹೊಡೆಯುವವರು ಪ್ರತಿವಾದಿಸುವರೇನೊ! ಅಂತಹರಿಗೆ ಬೆಳಗ್ಗೆ ಗಂಜಿಯುಂಡು ಸುಖಕಂಡ ಗಂಡುಗಲಿಗಳೇ ತಕ್ಕ ಪ್ರತ್ಯುತ್ತರವನ್ನು ಕೊಡಲಿ.

ಆ ಪ್ರಕಾರ ಬೆಳಗ್ಗೆ ಗಂಜಿಯೂಟ ಮಾಡುವಾಗ ತಾಯಿ ಪುಟ್ಟನಿಗೆ ಗಂಜಿಯನ್ನು ಕಲಸಿ ಕೊಡುತ್ತಾ ಇದ್ದಳು. ಪುಟ್ಟ ಅವಸರದಿಂದ ಚಟ

ಪಟಿಸುತ್ತ, ಬಿಸಿಬಿಸೀ ಗಂಜಿಗೆ ಎಡಗೈಯ ಬೆರಳನ್ನು ಹಾಕಿಕೊಂಡರಿ ಚೀಪುತ್ತಿದ್ದನು. ಅವನಿಗೆ ಎಡದ ಕೈಯೇ ಮುಂದೆ. ಹಿಡಿಯುವುದು ಕೊಡುವುದು ಬಡೆಯುವುದು ಮೊದಲಾದ ಎಲ್ಲವೂ ಎಡದ ಕೈಯಿಂದಲೇ. ಈ ಎಡಗೈಯ ಊಟವನ್ನು ತಪ್ಪಿಸಬೇಕೆಂದು ಒಮ್ಮೊಮ್ಮೆ ಜಲಜಮ್ಮ ಒಂದು ಗೂಟದ ಬದಿಯಲ್ಲಿ ಅವನನ್ನು ಕುಳ್ಳಿರಿಸಿ, ಎಡದ ಕೈಯನ್ನು ಆ ಗೂಟಕ್ಕೆ ಕಟ್ಟಿಹಾಕುತ್ತಿದ್ದಳು. ಈಗ ಅವನು ಎಡಗೈಯನ್ನು ಗಂಜಿಗೆ ಅದ್ದುತ್ತಲೇ ತಾಯಿ,—"ತಡಿ ತಡಿ! ಗೂಟ ತಂದು ಹುಗಿತೇನ್ನೋಡೀಗ!" ಎಂದು ಹೆದರಿಸಿದಳು. "ಇಲ್ಲ ಇಲ್ಲಮ್ಮ!" ಎಂದು ಪುಟ್ಟನು ಬಲಗೈಯನ್ನೂ ಗಂಜಿಗೆ ಹಾಕಿ ಎರಡು ಕೈಗಳಿಂದಲೂ ಉಣ್ಣಲಾರಂಭಿಸಿದನು! ಅಷ್ಟರೊಳಗೆ ಜಲಜಮ್ಮ ಒಲೆಯಲ್ಲಿರುವ ಹಾಲನ್ನು ನೆನೆಸಿಕೊಂಡು ಅಡುಗೆಮನೆಗೆ ಹೋದಳು; ಕೂಡಲೇ ಆ ಮೂಲೆಯಲ್ಲಿ ತನ್ನ ಪಾಲಿನ ಗಂಜಿತಿಂದು ಮೈ ನೆಕ್ಕುತ್ತಿದ್ದ ಬೆಕ್ಕು, ಮೆಲ್ಲನೆ ಮಕ್ಕಳ ಬಟ್ಟಲ ಮುಂದೆ ಎಡತಾಕಲಾರಂಭಿಸಿತು.

ಪುಟ್ಟನು ಉಣ್ಣುತ ಉಣ್ಣುತ ಫಕ್ಕನೆ ಅಣ್ಣನನ್ನು ನೋಡಿ—"ಅಣ್ಣಣ್ಣ! ಆ ಕತ್ರಿ ಅಲ್ಲೆ ಉಂಟ? ಕಳ್ಳ ಕೊಂಡೋದ್ನೋ ಏನೊ!" ಎಂದುಬಿಟ್ಟನು. ತಲೆಯ ಮೇಲೆ ಅಕಸ್ಮಾತ್ತಾಗಿ ಮಾಡೇ ಜರಿದು ಬಿದ್ದಂತೆ, ತಿಮ್ಮಣ್ಣ ಬೆದರಿ ಬಿದ್ದು "ಶ್ಯ್!" ಎಂದು ಪುಟ್ಟನನ್ನು ಹೆದರಿಸುವ ಕಣ್ಣಿನಿಂದ ನೋಡಿದನು. ಆಗ ಪುಟ್ಟ,—"ಇಲ್ಲಣ್ಣ! ಮತ್ತೆ ಹುಡುಕುವ!" ಎಂದು, ತಿಮ್ಮಣ್ಣನ ಮುಖದ ಬಳಿಗೆ ಅವನ ಎಂಜಲು ಬಾಯಿಯನ್ನು ತಂದು—"ಅಮ್ಮತ್ರ ಹೇಳೋಲ್ಲಣ್ಣ!" ಎಂದು ಪಿಸುನುಡಿದನು.

ತಿಮ್ಮಣ್ಣ ಹುಬ್ಬು ಗಂಟುಹಾಕಿ ಮೋರೆ ತಗ್ಗಿಸಿದನು. ಇದೆಲ್ಲಾ ಜಲಜಮ್ಮನ ಸೂಕ್ಷ್ಮವಾದ ಇಂದ್ರಿಯಗಳಿಗೆ ಗೋಚರವಾಗದೆ ಇರಲಿಲ್ಲ. "ಯಾವ ಕತ್ರಿ ಪುಟ್ಟೂ? ಎಲ್ಲಿ ಉಂಟು?" ಎಂದು ಕೇಳಿಯೇ ಬಿಟ್ಟಳು.

ತಿಮ್ಮಣ್ಣ ಬೆಂಕಿಗೆ ಬಿದ್ದ ಹುಳದ ಹಾಗೆ ತಪ್ಪಿಸುತ್ತಿದ್ದನು.

ಪುಟ್ಟನು ಅಣ್ಣನನ್ನೊಮ್ಮೆ ಅಮ್ಮನನ್ನೊಮ್ಮೆ ಮಿಕಿಮಿಕಿ ನೋಡುತ್ತಿದ್ದನು. ಇದರಿಂದ ತಾಯಿಯ ಸಂದೇಹವು ಬಲವಾಗಿ—"ತಿಮ್ಮು, ಏನೋ ಅದು? ಯಾವ ಕತ್ರಿ ಹೇಳ್ತ್ಯಾ ಇಲ್ವಾ?" ಎಂದು ಮತ್ತೆ ಕೇಳಿದಳು.

"ನಂಗೇನು ಗೊತ್ತು ಕತ್ರಿ–ಗಿತ್ರಿ!" ಎಂದನು ತಿಮ್ಮ.

ಪುಟ್ಟ—"ನಾ ಹೇಳಕ್ಕಿಲಾ!" ಅಂದನು.

"ಅಣ್ಣ ಹೇಳಬೇಡಾಂದನಾ?" ಎಂದು ಕೇಳಿದಳು ಜಲಜ.

ಪುಟ್ಟ ಮತ್ತೆ ಅಣ್ಣನ ಮುಖ ನೋಡುತ್ತಾನೆ!

"ಹೌದು. ಹಾಗೇ ಹೇಳಿಯಾನು ಕಳ್ಳ! ಉಂಡು ಬಾರಾ! ನಿನ್ನ ಬಾಯಿ ಬಿಡಿಸುತ್ತೇನೆ!" ಎಂದು ಜಲಜಮ್ಮ ಹೆದರಿಸಿಯೂ ಬಿಟ್ಟಳು.

ಆಯಿತು! ತಿಮ್ಮನ ಗಂಟಲಲ್ಲಿ ಉಂಡೆ ಸಿಕ್ಕಿಕೊಂಡ ಹಾಗಾಯಿತು. ಆ ಗಂಜಿ! ಹೇಗೋ ಸರಸರನೆ ಸುರಿದು ಮುಗಿಸಿ ಬಾವಿಕಟ್ಟೆಗೆ ಓಡಿದನು. ಪುಟ್ಟನೂ ಅವನ ಹಿಂದೆಯೇ ಓಡಿದನು. 'ಈ ಪುಟ್ಟನನ್ನು ಗುದ್ದಿ ಮುದ್ದೆ ಮಾಡಲೋ' ಎಂಬಷ್ಟು ಸಿಟ್ಟು ತಿಮ್ಮಣ್ಣನಿಗೆ ಬಂದಿತ್ತು. ಆದರೆ ಹೊಟ್ಟೆಯ ಸಿಟ್ಟು ರಟ್ಟೆಯಲ್ಲಿಲ್ಲದುದರಿಂದ, ಬಾಯಿಯಿಂದ ಮಾತ್ರ ಒಂದು ಚೂರು ಹಾರಿತು—"ಛಿ! ಕಳ್ಳ! ಹೇಳಬೇಡಾಂದ್ರೆ ಹೇಳಿದಿಯ!" ಎಂದನು.

ಪುಟ್ಟನು—"ಇಲ್ಲಣ್ಣ! ಹೇಳ್ಲೇ ಇಲ್ಲ! ಹೇಳೋದೇ ಇಲ್ಲ! ಅಣ್ಣ! ಸಿಟ್ಟಾ ನನ್ನ ಮೇಲೆ?" ಅನ್ನುವಾಗ ಜಲಜಮ್ಮ ಹಿಂದಿನಿಂದಲೇ ಬಂದು ಅವನಿಗೆ ಕೈತೊಳೆಸುತ್ತ—"ಆಂ? ನೀನು ಹೇಳೋದೇ ಇಲ್ಲಾಂದ್ರೆ ನಾನು ಬಿಟ್ಟೇನಾ? ನೀನು ಗಟ್ಟಿಗ ಪುಟ್ಟು! ಹೇಳಪ್ಪ! ಯಾವ ಕತ್ರಿ? ಅಣ್ಣ ಎಲ್ಲಿಂದಾದರೂ ಕದ್ದದ್ದಾ?"—ಎಂದು ರಂಗು ರಂಗು ಮಾಡಿ ಕೇಳ ಲಾರಂಭಿಸಿದಳು. ತಿಮ್ಮನ ಮನಗಣ್ಣಿಗೆ ಒಂದು ಭಯಂಕರವಾದ ಭವಿಷ್ಯವು ಪ್ರತ್ಯಕ್ಷವಾಗುತ್ತಿತ್ತು! ಭಯ-ಕೋಪ-ನಾಚಿಕೆ-ಅವಮಾನ ಮೊದಲಾದ ಅಸಹ್ಯ ಭಾವನೆಗಳಿಂದ ಸೀದಾ ಒಳಗೆ ಹೋಗಿ ಒಂದು ಪೆಟ್ಟಿಗೆಯ ಹಿಂದಿನಿಂದ ಅವಿತುಕೊಂಡನು. ತಾಯಿಯೂ ಪುಟ್ಟನೂ ಮಾತಾಡುವುದೆಲ್ಲ ಒಂದೊಂದು ಶೂಲದ ಹಾಗೆ ಅವನ ಕಿವಿಗೆ ಚುಚ್ಚುತ್ತಿತ್ತು.

ಪುಟ್ಟ ಹೇಳುತ್ತಿದ್ದನು—"ಅಮ್ಮ! ಅಣ್ಣ ಕದ್ದದ್ದಲ್ಲಾ. ಅಣ್ಣ ಪಾಪ! ಅಮ್ಮ! ನೀನು ಆ ಕತ್ರಿ ಪೆಟ್ಟಿಗೇಲಿ ಇಡೊಲ್ಲಾಂತ ಹೇಳು."

"ಇಲ್ಲಪ್ಪ. ಅವನಿಗೇ ಕೊಡ್ತೇನೆ. ಇಲ್ಲದಿದ್ರೆ ನಿಂಗೇ ಕೊಡುವ. ಕತ್ರಿ ಎಲ್ಲಿ ಉಂಟಪ್ಪೊ?" ಜಲಜಮ್ಮನ ಪ್ರಶ್ನೆ.

ಪುಟ್ಟ:—"ಅಣ್ಣನಿಗೇ ಕೊಡಮ್ಮ. ನಂಗ ಬೇಡ. ಅಂವ ನಂಗೂ ಕೊಡ್ತಾನೆ! ಅಣ್ಣನಿಗೆ ಗುಡ್ಡೇಲಿ ಪೊದರಾಗ ಸಿಕ್ಕಿತಮ್ಮ! ಹೊಸಾ ಕತ್ರಿ! ನೀನು ಪೆಟ್ಟಿಗೇಲಿಡ್ತೀಂತ ಅಣ್ಣ ಅಲ್ಲೆ ಇಟ್ಟಿದಾನೆ—ಕತ್ರಿ!"

ಜಲಜಮ್ಮ:—"ಪೊದರಲ್ಲಿ ಸಿಕ್ಕಿತೇನಾ ಹೊಸಾಕತ್ರಿ?"

ಪುಟ್ಟ:—"ಹೌದಮ್ಮ!"

ಜಲಜಮ್ಮ ಬಿರುನುಡಿಯಿಂದ—"ಕಳ್ಳ! ಕತ್ರಿ ಕತ್ರೀಂತ ಹಟಾ ಮಾಡಿ ದುಡ್ಡು ಕದ್ದುಕೊಂಡು ಹೋಗಿದ್ದಾನೆ. ನನಗೆ ಗೊತ್ತಿಲ್ಲವಾ ಅವನ ಕಣ್ಣುಕಟ್ಟು; ಮೊನ್ನೆ ತುಪ್ಪದವ ಕೊಟ್ಟ ನಾಲ್ಕಾಣೆ ಮೂಲೆ ಹಲಗೇಲಿಟ್ಟದ್ದು ಎಲ್ಲಿ ಹೋಯ್ತಪ್ಪಾಂತ ನಾನು ಹುಡುಕೋದು! ಅಹಾಂ? ಏ ತಿಮ್ಮೂ! ಎಲ್ಲಿ ಸತ್ತ್ಯಾ! ಓಹೊ! ದುಡ್ಡು ಕದ್ದುಕೊಳ್ಳಿಕ್ಕೂ ಶುರುಮಾಡಿದ್ಯಾ? ಅಷ್ಟು ಧೈರ್ಯ ಬಂತಾ ನಿಂಗೆ?" ಎಂದು ಕೂಗಾಡುತ್ತಾ ಒಳಗೆ ಬಂದಳು.

ಬೆಂಕಿಯ ನಡುವೆ ಕುಳಿತಿದ್ದಂತೆ ಪೆಟ್ಟಿಗೆಯ ಹಿಂದೆ ಅವಿತಿದ್ದ ತಿಮ್ಮಣ್ಣನು ಹೊರಗೆ ಓಡಿಹೋಗಲು ಯತ್ನಿಸುವಾಗ, ಆ ಪೆಟ್ಟಿಗೆಯ ಮೇಲಿದ್ದ ಸಾಮಾನುಗಳು ಅಲುಗಾಡಿದುವು. ಜಲಜಮ್ಮ ಅವನ ಸುಳಿವನ್ನರಿತು ಬೆಕ್ಕಿನ ಹಾಗೆ ಹಾರಿ, ಅವನ ಕೈಯನ್ನು ಹಿಡಿದು ದರದರನೆ ಎಳೆಯುತ್ತ—"ಎಲ್ಲಿಗೆ ಓಡ್ತ್ಯಾ? ಎಷ್ಟು ದಿನ ಓಡ್ತಿ? ಹೇಳು ಸತ್ತ್ಯಾ! ಎಲ್ಲಿ ಸಿಕ್ಕಿತು ಕತ್ರಿ? ಒಳಗಿಂದ ದುಡ್ಡು ಕದ್ದ್ಯಾ ಇಲ್ಲಾ?"—ಎಂದು ಗದರಿಸುತ್ತ ಕೋಲನ್ನು ಕೈಗೆತ್ತಿಕೊಂಡಳು.

"ಇಲ್ಲಮ್ಮ! ಬೇಡಮ್ಮ! ನಾನು ಕದ್ದು ಕೊಳ್ಳಿಲ್ಲಮ್ಮ! ಕತ್ರಿ ಆ ಪೊದರಲ್ಲೇ ಇತ್ತು!—" ಎಂದು ತಿಮ್ಮಣ್ಣ ಅಳುಗೊರಲಿನಿಂದ ಸುಳ್ಳು ಹೇಳಲು ಪ್ರಯತ್ನಿಸಿದಾಗ, "ರ್ರಫ಼ ರ್ರಪ್ಪನೆ" ಎರಡು ಬಿಸಿಯೇಟು ಬಿತ್ತು. "ಅಯ್ಯೊ! ಬೇಡ! ಹೌದೊ! ಸತ್ಯ! ಕದ್ದೆ! ತಪ್ಪಿತು!—" ಎಂದು ಚೀರಾಡಿದನು ತಿಮ್ಮ.

"ಅಮ್ಮ! ಅಣ್ಣನಿಗೆ ಹೊಡೀಬೇಡ!" ಎಂದು ಪುಟ್ಟನೂ ಅಳಲಾರಂಭಿಸಿದನು. ಆಗ ಜಲಜಮ್ಮ ತುಸು ಕೈಚಳಕವನ್ನು ನಿಲ್ಲಿಸಿ, ಕೆದರಿ ಕೆದರಿ ಕೊಳ್ಳುತ್ತ ಸತ್ಯಸಂಗತಿ ಪೂರಾ ತಿಮ್ಮಣ್ಣನ ಬಾಯಿಯಿಂದ ಹೊರಡಿಸಿದಳು. ಅನಂತರ ಜಲಜಮ್ಮ! "ಓಹೊ! ಇದೇನೂ ಸಾಮಾನ್ಯ ಅಂತ ಬಿಡುವಂಥಾದ್ದಲ್ಲ! ನಾನು ಹೊಡೆದರೆ ಏನೂ ಆಗದು. ಅಪ್ಪನ ಹತ್ತರ ಹೇಳಿಯೇ ಇದಕ್ಕೆ ತಕ್ಕ ಮದ್ದು ಮಾಡುತ್ತೇನೆ. ಶಾಲೇಲಿ ಹೆಡ್ಮಾಸ್ತರಿಗೆ ಹೇಳಿ ಕಳ್ಳಾಂತ ಅಷ್ಟೂ ಜನರ ಮುಂದೆ ಇವನ ಮರ್ಯಾದೆ ತೆಗೀಬೇಕು!" ಎಂದು ಬಯ್ದು ಹೋಗಿಬಿಟ್ಟಳು.

ಆಗ ಪದ್ಮನಾಭೈಯ್ಯನೂ ತೋಟದಿಂದ ಬರುವುದನ್ನು ತಿಮ್ಮಣ್ಣ
ನೋಡಿದನು. ಒಡನೆಯೇ ಅವನು ಅಲ್ಲಿಂದ ಮೆಲ್ಲನೆ ಕಾಲ್ದೆಗೆದು ಉಪ್ಪರಿಗೆ
ಮೆಟ್ಟಲಿನ ಕೊನೆಗೆ ಹತ್ತಿ, ಮೂಕನ ಹಾಗೆ ಅಲ್ಲಿ ಕುಳಿತುಬಿಟ್ಟನು.
ತಾಯಿ ಈಗ ತನ್ನ ವಿಷಯವನ್ನು ಅಪ್ಪನಿಗೆ ಹೇಳಿಯೇ ಹೇಳುವಳು. ಆಗ
ಫಕ್ಕನೆ ಅಪ್ಪನಿಗೆ ಸಿಟ್ಟು ಬರುವಾಗ ತಾನು ಅಪ್ಪನ ಕಣ್ಣಿಗೆ ಬೀಳಬಾರದು.
ಹಾಗೆಂದು ತಾನು ಓಡಿಗೀಡಿ ಹೋದರೆ, ಅವರ ಕೋಪವು ವಿಕೋಪಕ್ಕೇ
ಹೋಗಿ, ಅನರ್ಥಕ್ಕೆ ತಂದೀತೆಂದು ಅವನು ಬಲ್ಲನು. ಅಂತೂ ತಪ್ಪಿಸಿ
ಕೊಳ್ಳಲು ಉಪಾಯವಿಲ್ಲದಿದ್ದರೂ, ಫಕ್ಕನೆ ಅವರ ಕಣ್ಣಿಗೆ ಬೀಳದಂತೆ ಅಲ್ಲಿ
ಕುಳಿತಿದ್ದನು. ಪುಟ್ಟನು ಸಾನುತಾಪ ಸೂಚಕವಾದ ಸ್ವರದಿಂದ “ಅಣ್ಣಾ!
ಅಣ್ಣಾ!” ಎಂದು ಕರೆದರೂ ತಿಮ್ಮಣ್ಣ ಮುಖವೆತ್ತಿ ನೋಡಲೇ ಇಲ್ಲ.

ಪದ್ಮನಾಭೈಯ್ಯ ಅಂಗಳಕ್ಕೆ ಬರುತ್ತಲೇ ಜಲಜಮ್ಮ ಎಲ್ಲವನ್ನೂ ಅವ
ರಿಗೆ ಹೇಳಿದುದು, ಅವರು ಸಿಟ್ಟೇರಿ—“ಎಲ್ಲಿ ಎಲ್ಲಿದ್ದಾನೆ ಆ ಘಟಿಂಗ?
ಅವನ ತೊಡೆಯ ಕೆತ್ತೆ ಎಲ್ಲಾ ಎಬ್ಬಿಸಿ ಸಾಯುವ ವರೆಗೆ ಮರೆಯದ ಹಾಗೆ
ಮಾಡುತ್ತೇನೆ. ಏ ತಿಮ್ಮೂ! ಬಾರಾ ಇಲ್ಲಿ!” ಎಂದು ಗರ್ಜಿಸುತ್ತ ಹುಡುಕಿ
ದುದು, ಆಗ ಜಲಜಮ್ಮ ಕರುಣಾವ್ಯಂಜನ ಸ್ವರದಿಂದ “ಸಾಯ್ಲಿ ಪಾಪ!
ತುಂಬಾ ಹೆದರಿದ್ದಾನೆ! ಹೆಚ್ಚು ಹೊಡೀಬೇಡೀ ಹುಡುಗನ—” ಎಂದು
ಪತಿಗೆ ಎಚ್ಚರಿಕೆ ಕೊಟ್ಟುದು ಎಲ್ಲವೂ ತಿಮ್ಮಣ್ಣನಿಗೆ ಗೊತ್ತಾಗುತ್ತಲೆ ಇದ್ದಿತು.
ಪದ್ಮನಾಭೈಯ್ಯ ಪುಟ್ಟನನ್ನು ನೋಡಿ, “ಎಲ್ಲಿದ್ದಾನಾ ಅಂವ?” ಎಂದು
ಗುಟುರು ಹಾಕಲು, ಪುಟ್ಟ ಹೆದರಿ ಗುಮ್ಮಾಗಿ ಪಿಳಿಪಿಳಿ ತಂದೆಯ ಮುಖ
ವನ್ನು ನೋಡಿದನು. ಅಷ್ಟರಲ್ಲಿ ಆಕರ್ಷಣ ಶಕ್ತಿಯಿಂದ ತನ್ನಂತೆ ಯಮುನ
ಕೈಗೆ ಸಿಕ್ಕಿ ಬೀಳುವ ಹತಭಾಗ್ಯನಂತೆ ತಿಮ್ಮಣ್ಣ ನಡುಗುದನಿಯಿಂದ “ತಪ್ಪಾ
ಯ್ತಪ್ಪಾ!” ಎಂದು ಅಳುತ್ತಾ ಮೆಟ್ಟಲಿನ ಮೇಲೆ ಎದ್ದು ನಿಂತನು.

“ಇಳಿದು ಬಾರಾ ಕೆಳಗೆ!” ಎಂದು ಅಬ್ಬರಿಸಿದರು ತಂದೆ! ಹೆದರಿದ
ನಾಯಿಯ ಹಾಗೆ ಅವನು ಕೆಳಗಿಳಿದನು. ಪದ್ಮನಾಭೈಯ್ಯ ಅವನ ಕೈಗ
ಳನ್ನು ಹಿಡಿದೆತ್ತಿ ತೂಗಾಡಿಸುತ್ತ, ಒಂದೇ ಉಸಿರಿಗೆ ಅಂಗಳಕ್ಕೆ ತಂದು ನಿಲ್ಲಿಸಿ
ಕೆಂಗಣ್ಣಿನಿಂದ ನೋಡುತ್ತ ಹಲ್ಲು ಕಚ್ಚಿ, “ಕತ್ತೇ ಮಗನೆ! ದುಡ್ಡು
ಕದೀತ್ಯಾ?” ಎಂದು ಬಲಗೈಯಿಂದೊಂದು ಬಲವಾದ ತಪರಾಕಿಯನ್ನು
ಅವನ ಎಡತೊಡೆಯ ಮೇಲೆ ಅಪ್ಪಳಿಸಿದರು! ಕಣ್ಣಿನಲ್ಲಿ ದೀಪ ಹಚ್ಚಿ
ದಂತಾಗಿ, ಅದರ ಜ್ವಾಲೆ ಜುಂಮ್ಮೆಂದು ಸರ್ವಾಂಗಕ್ಕೂ ಏರಲು ತಿಮ್ಮಣ್ಣ

ಕಣ್ಣೀರು ಸುರಿಸುತ್ತ, ಗಡಗಡನೆ ನಡುಗುತ್ತ ಕೂಗಿದನು. "ಹೋಗು ಜೈಲಿಗೆ! ಕಳ್ಳ! ನಡೀ ನನ್ನ ಕಣ್ಣಿದಿರಿನಿಂದ!" ಎಂದು ಅಧಟಿ, ಪದ್ಮನಾಭೈಯ ಹೋಗಿಬಿಟ್ಟರಲ್ಲಿಂದ.

ಆ ಮೇಲೆ ಜಲಜಮ್ಮ ಅವನನ್ನು ಸಾವರಿಸಿ ಕರೆದೊಯ್ದು, ಕ್ರಮದಂತೆ ದೇವರ ಮುಂದೆ ಬೀಳಿಸಿ ಕ್ಷಮೆಯನ್ನು ಬೇಡಿಸಿದಳು. ತಂದೆಯ ಈ ಎರಡನೆಯ ಪೆಟ್ಟು ಅವನ ತೊಡೆಯಲ್ಲಿ ದಪ್ಪವಾದ ಅಪ್ಪವನ್ನೆಬ್ಬಿಸಿತ್ತು. ತಾಯಿ ನೀತಿ ಪಾಠ ಹೇಳುತ್ತಾ ಅದಕ್ಕೆ ಎಣ್ಣೆ ತಡವಿದಳು.

ಆ ಮೇಲೆ ಪದ್ಮನಾಭೈಯ ಆ ಪೊದರಿನ ಕಡೆಗೆ ಹೋಗಿ ಎಷ್ಟು ಹುಡುಕಿದರೂ ಆ ಕತ್ತರಿ ಸಿಕ್ಕಲೇ ಇಲ್ಲ. ಆ ತಂಟೀ ಕತ್ತರಿ ಕಾಣೆಯಾಗಿತ್ತು. ಆ ಪೊದರು ಮಾತ್ರ ಅಳಿಯದೆ ಚಿಗುರುತ್ತ ಶಾಲೆಗೆ ಹೋಗಿ ಬರುವಾಗೆಲ್ಲ ಆ ಕತ್ತರಿಯ ನೆನಪು ಬರಿಸುತ್ತಿತ್ತು ತಿಮ್ಮನಿಗೆ.

೨೫

"ಕಳ್ಳನೆಂದು ಇವನ ಮರ್ಯಾದೆ ಶಾಲೆಯಲ್ಲಿ ತೆಗೆಸಬೇಕು" ಎಂದು ಜಲಜಮ್ಮ ಹೇಳಿದರೂ, ಕತ್ತರಿಯ ಕಳ್ಳತನದ ಸುದ್ದಿ ಶಾಲೆಗೆ ಹತ್ತಿಸಲಿಲ್ಲ. ಆದರೆ ತಿಮ್ಮಣ್ಣನು ತಾಯಿ ಹೇಳಿದ ಆ ಮಾತನ್ನು ಇನ್ನೊಮ್ಮೆ ನಡೆಸಿಯೇ ಬಿಟ್ಟನು. ತಂದೆಯಿಂದ ಉಳಿದರ್ಧ ಪೆಟ್ಟನ್ನು ಪಡೆದುಕೊಂಡುದು ಆಗಲೇ.

ಆಗ ಪುಟ್ಟನ ಪೀಡೆ ತಿಮ್ಮನಿಗೆ ದೂರವಾಗಿತ್ತು. ಅವನು ಅಜ್ಜಿ ಮನೆಗೆ ಹೋಗಿದ್ದನು. ಅಜ್ಜಿಗೆ ಅವನ ಮೇಲೆ ಪ್ರತ್ಯೇಕವಾದೊಂದು ಅಕ್ಕರೆ. ಆದುದರಿಂದ ಅಜ್ಜಿ ಅವನನ್ನು ತನ್ನಲ್ಲೇ ಇರಿಸಿಕೊಂಡು ಮನೆಯ ಪಕ್ಕದಲ್ಲೇ ಇರುವ ಶಾಲೆಗೂ ಕಳುಹಿಸುತ್ತಿದ್ದಳು.

ಈಗ ತಿಮ್ಮಣ್ಣನೊಂದಿಗೆ ಶಾಲೆಗೆ ಹೋಗುವವಳು ಕಮಲೆ ಮಾತ್ರ. ಮುಂಜಾನೆ ಶಾಲೆಗೆ ಹೋಗುವುದೆಂದರೆ ಯಾವಾಗಲೂ ತಿಮ್ಮಣ್ಣನಿಗೆ ಬಹಳ ಸಂತೋಷ. ಶಾಲೆ ಪ್ರಾರಂಭವಾಗುವುದಕ್ಕಿಂತಲೂ ಬಹಳ ಮುಂಚಿತವಾಗಿಯೇ ಶಾಲೆಗೆ ಬಂದು ಹುಡುಗರೊಂದಿಗೆ ಕಲಿತು ಚಿತ್ರ ಗೀಚುವುದು, ಕತೆ ಹೇಳುವುದು, ಕನ್ನಡ ಕಷ್ಟ ಶಬ್ದಗಳ ಅರ್ಥ ಒಡೆಯುವುದರಲ್ಲಿ ತಾನೇ ಗಟ್ಟಿ, ತನ್ನದೇ ಸರಿ ಎಂದು ವಾದಿಸುವುದು, ಸ್ಪರ್ಧಿಸುವುದು, ಪದ್ಯಗಳ

ಬಂಡಿ ಉರುಳಿಸುವುದು ಮೊದಲಾದ ಆಟಗಳಲ್ಲಿ ಸಮಯವನ್ನು ಕಳೆಯು ತ್ತಿದ್ದನು. ಅವನು ಕನ್ನಡದಲ್ಲಿಯೂ ಚಿತ್ರದಲ್ಲಿಯೂ ಬಲು ಗಟ್ಟಿಗನು. ಚಿತ್ರವು ಸಾಮಾನ್ಯವಾದ ಶಾಲೆಗಳಲ್ಲೆಲ್ಲಾ ಅಮುಖ್ಯವಾದ ಪಾಠವು. ಇತರ ಭೂಗೋಲ-ಚರಿತ್ರೆ ಮೊದಲಾದುವುಗಳಲ್ಲಿಯೂ ತಿಮ್ಮಣ್ಣ ಹಿಂದೆಯಿಲ್ಲ. ಆದರೆ ಯಾವುದು ಅತ್ಯಂತ ಪ್ರಾಮುಖ್ಯವಾದ ಪಾಠವೋ ಆ ಲೆಕ್ಕ ಮಾತ್ರ ಅವನಿಗೆ ಸುತರಾಂ ಬಾರದು! ಸ್ವಲ್ಪವೂ ಸೇರದು! ಮುಗ್ಗಿ ಓದೆಂದರೆ ಪದ್ಯ ಗಳನ್ನು ಓದುವನು. ಲೆಕ್ಕ ಹಾಕೆಂದರೆ ಚಿತ್ರಗಳನ್ನು ಗೀಚುವನು. ಯಾವ ಪುಟ್ಟ ಲೆಕ್ಕವೇ ಇರಲಿ, ತಿಮ್ಮನ ಉತ್ತರ ತಪ್ಪು. ಮಾರ್ಕು ಗೋಳೆ, ಬಿರುದು ದಡ್ಡ ತಿಮ್ಮ.

ಅನುದಿನವೂ ಮಧ್ಯಾಹ್ನದ ಮೊದಲನೇ ಪೀರಿಯಡು ಲೆಕ್ಕ ಪಾಠ ವಾಗಿತ್ತು. ಆ ಸಮಯದಲ್ಲಿ ಕ್ಲಾಸಿನಲ್ಲಿ ಕುಳಿತುಕೊಳ್ಳುವುದೆಂದರೆ, ಸೆಕೆ ಗಾಲದಲ್ಲಿ ನಾಲ್ಕು ಸುತ್ತೂ ಬೆಂಕಿ ಹಾಕಿಕೊಂಡು ನಡುವೇ ಸಿಕ್ಕಿಬಿದ್ದವನ ಸಂಕಟವಾಗುತ್ತಿತ್ತು ಅವನಿಗೆ! ಈ ಸಂಕಟವನ್ನು ಸೈರಿಸಲಾರದೆ, ಮಧ್ಯಾ ಹ್ನದ ಶಾಲೆಗೆ ಚಕ್ಕರ್ ಕೊಡಲಿಕ್ಕೂ ಪ್ರಾರಂಭಿಸಿದನು.

ಆಗ ಅವನೊಂದಿಗೆ ಕಮಲೆಯೊಬ್ಬಳೇ ನಡೆಯುವವಳಾಗಿದ್ದಳು. ಮಧ್ಯಾಹ್ನದಲ್ಲಿ ಮನೆಯಿಂದ ಶಾಲೆಗೆಂದು ಹೊರಡುತ್ತಾನೆ. ಪೊದರು ಗುಡ್ಡದ ಕಾಲುದಾರಿಯಲ್ಲಿ ನಡೆಯಬೇಕು. ಅಲ್ಲಿ ದಾರಿಯ ಬದಿಯಲ್ಲಿ ಮುರಕಲ್ಲು ಅಗೆದುತೆಗೆದುದರಿಂದ ಉಂಟಾದ ಕಲ್ಪಣೆಯೊಂದಿತ್ತು. ಅರಿ ಗವಿಯ ಹಾಗೆ ಅದರಲ್ಲಿ ಒಂದು ಭಾಗವಿತ್ತು. ಅದರ ಬಳಿಗೆ ಬರುತ್ತಲೆ, ಆ ದುಃಖದ ಲೆಕ್ಕಕ್ಕಾಗಿ ಶಾಲೆಗೆ ಹೋಗಲಾರದೆ, ಅವನ ಕಾಲು ಅಲ್ಲೇ ನಿಂತು ಬಿಟ್ಟಿತು. "ಏನಣ್ಣ?" ಎಂದು ಕೇಳಿದಳು ಕಮಲೆ.

"ನಾನು ಹೇಳಿದ ಹಾಗೆ ಕೇಳ್ತ್ಯಾ ಕಮಲ?"

"ಕೇಳ್ತೇನಣ್ಣ."

"ಈಗ ಶಾಲೆಗೆ ಹೋದರೆ ಹಾಳುಲೆಕ್ಕ ಬರುತ್ತದೆ. ನನಗೆ ತಲೆ ಯೊಡೆಯುತ್ತದೆ. ಮಾಸ್ತರು ದಡ್ಡ ತಿಮ್ಮ ದಡ್ಡ ತಿಮ್ಮ ಅಂತ ಗೇಲಿ ಮಾಡ್ತಾರೆ ಹುಡುಗರೆಲ್ಲ ನಗುತ್ತಾರೆ. ಅದಕ್ಕೆ ಶಾಲೆಗೆ ಹೋಗುವುದೇ ಬೇಡ. ಇಲ್ಲಿಯೇ ಅಡಗುವ. ಯಾರಿಗೂ ಗೊತ್ತಾಗೋದಿಲ್ಲ. ಶಾಲೆ ಬಿಟ್ಟಮೇಲೆ ಹುಡುಗರು ಹೋಗುವುದೂ ಇಲ್ಲಿಗೆ ಕಾಣುತ್ತದೆ. ಆಗ ನಾವೂ ಮನೆಗೆ ಹೋಗುವ."

"ಆಯ್ತಣ್ಣ. ನಾನು ಪ್ರಟ್ಟನ ಹಾಗಲ್ಲಣ್ಣ. ಅಣ್ಣ! ಇಲ್ಲಿ ಕೂತರೆ ಕೃಷ್ಣಾವರದ ಹುಡುಗರು ಈ ದಾರೀಲಿ ಹೋಗ್ತಾರಲ್ಲ? ಅವರಿಲ್ಲಿಯಾದರೂ ಮಾಸ್ತರಿಗೆ ಹೇಳಿಕೊಟ್ಟರೆ?"

"ಅದಕ್ಕೆ ಈ ಕಲ್ಪಣೆಯೊಳಗೆ ಕೂತುಬಿಡುವ. ಅವರು ಬರುವಾಗ ಮಾತಾಡಬಾರದು. ಆ ಮೇಲೆ ಮೆಲ್ಲ ಎದ್ದು ಮನೆಗೆ ಹೋಗಿಬಿಡುವ."

"ಆತು, ನಾಳೆ ಬೆಳಿಗ್ಗೆ ?"

"ಬೆಳಿಗ್ಗೆ ಹೋಗಬೇಕು ಶಾಲೆಗೆ. ಬೆಳಿಗ್ಗೆ ಸುಲಭ ಪಾಠ."

"ಆಗ ಮಾಸ್ತರು ನಿನ್ನೆ ಯಾಕೆ ಬರ್ಲಿಲ್ಲಾಂತ ಕೇಳಿದರೆ?"

"ಅಮ್ಮ ಮುಟ್ಟು, ಹೋಗಬೇಡಾಂದಳೂ ಅನ್ನೋದು."

"ಆಯ್ತು."

ಸರಿ. ಮೂರು ದಿನ ಆ ಪ್ರಕಾರ ಒಪ್ಪೊತ್ತು ಶಾಲೆಗೆ ಚಕ್ರ ಬಿತ್ತು. ನಾಲ್ಕನೆಯ ದಿವಸ ಆ ಕಾರಣವನ್ನು ಹೇಳಲು ಸಾಧ್ಯವಿರಲಿಲ್ಲ. ಆದುದರಿಂದ ಅವರು ಬೆಳಗ್ಗೆ ಕೂಡಾ ಶಾಲೆಗೆ ಹೋಗದೆ, ಆ ಕಲ್ಪಣೆಯಲ್ಲಿಯೇ ತಂಗಿದರು.

ತಿಮ್ಮಣ್ಣನು ತನ್ನ ಸಂಚಿಯನ್ನು ಹುಡುಕುತ್ತಾ–"ಕಮಲಾ, ನಿನ್ನೆ ಇಲ್ಲಿ ನಾನು ಮಾಡಿದ ದೋಸೆ ಕತೆಯು ಚಿತ್ರಗಳು ನಿನ್ನ ಸಂಚೀಲಿ ಉಂಟೆ?"

ಕಮಲೆ ಹುಡುಕಿ-"ಹೌದಣ್ಣ! ಇಕೊ"

"ಇರಲಿ. ವೆಂಕಟ್ರಾಯ ಮಾಸ್ತರು ಹೇಳಿದ ಚುಂಚುಂ ಮ್ಯಾನಿಗೆ ಚಿತ್ರ ಮಾಡ್ತೇನೆ ನೋಡು." ಎಂದು ತಿಮ್ಮಣ್ಣನು ಲೆಕ್ಕದ ನೋಟು ಬುಕ್ಕನ್ನು ತೆರೆದು, ಅದರಲ್ಲಿಯ ಖಾಲೀ ಕಾಗದದಲ್ಲಿ ಚಿತ್ರ ಬಿಡಿಸಲಾರಂಭಿಸಿದನು.

ಕಮಲೆ ದೋಸೆ ಕತೆಯ ಚಿತ್ರಗಳನ್ನು ನೋಡುತ್ತ –"ಅಣ್ಣ! ಇಕೊ ಈ ದೋಸೆ ಕತೆ ಚಿತ್ರದಲ್ಲಿ ರಾಕ್ಷಸಿ ಬಂದು ಅವನ ಕಾಲು ಎಳೆದ ಕೂಡಲೇ ಅವನು ಕೆಳಗೆ ಬೀಳುವ ಹಾಗೆ ನೀನು ಮಾಡಲಿಲ್ಲಲ್ಲಾ?" ಎಂದು ಪ್ರಶ್ನಿಸಿದಳು.

"ಕಾಲು ಎಳೆದ ಕೂಡಲೇ ಅವನು ಬೀಳುವುದಿಲ್ಲ ಕಮಲಾ; ರಾಕ್ಷಸಿಯ ಕೈಗೆ ಸಿಕ್ಕಿ ಬೀಳುತ್ತಾನೆ. ಅದು ಇನ್ನೊಂದು ಚಿತ್ರದಲ್ಲಿ ಮಾಡಿದ್ದೇನೆ ನೋಡೆ."

“ಓ! ಹೌದಣ್ಣ! ಇದು ಮರದಲ್ಲಿ ಉರುಟುರುಟಾಗಿ ಹಾಕಿದ್ದೆಲ್ಲ ದೋಸೆಯು? ಆ! ದೋಸೆ ಮರದ ಹಾಗೇ ಉಂಟಣ್ಣಾ! ಎಷ್ಟು ದೋಸೆ ಮಿಜಿ ಮಿಜಿ!”

“ಹೌದು. ಕಮಲಾ! ಬಣ್ಣದ ಕಡ್ಡಿ ಇರ್ತಿದ್ರೆ ಇನ್ನೂ ಚಂದಾಗಿ ಕಾಣ್ತಿತ್ತು! ಗೊತ್ತಾ?”

ಅಣ್ಣ! ಬಣ್ಣದ ಪೆಟ್ಟಿಗೆ ಗುಡ್ಡೆ ಅಂಗಡೀಲಿ ಸಿಕ್ಕುತ್ತಂತಣ್ಣ! ದೊಡ್ಡ ಕ್ಲಾಸಿಗೆ ಹೋಗಿ ಬಿದ್ದಳಲ್ಲಾ, ನಾಗವೇಣಿ? ಅವಳು ಮೇಫ್ ಮಾಡಲಿಕ್ಕೆ ತಕ್ಕೊಂಡಿದ್ದಾಳೆ ಬಣ್ಣ! ಎರಡೂವರೆ ಆಣೆಯಂತೆ! ಅಣ್ಣ! ಅದರಲ್ಲಿ ಹನ್ನೆರಡು ಬಣ್ಣ ಉಂಟು! ನಾ ನೋಡಿದೆ!

“ಅವಳು ಪುಣ್ಯವಂತೆ, ಕಮಲಾ! ನಾನು ದೊಡ್ಡ ಕ್ಲಾಸಿಗೆ ಬೀಳೋದೂ ಇಲ್ಲ, ಸಣ್ಣ ಕ್ಲಾಸಿಂದ ಏಳೋದೂ ಇಲ್ಲ! ಎಲ್ಲರೂ ನನ್ನನ್ನು ದಡ್ಡ ತಿಮ್ಮ ಅಂತಾರೆ! ನನ್ನಂತ ದಡ್ಡನಿಗೆ ಬಣ್ಣಲ್ಲ, ಮಣ್ಣೂಂತ ಅಪ್ಪನೂ ಬಯ್ತಾರೆ. ನಂಗ ಬಣ್ಣವೂ ಬೇಡ, ಮಣ್ಣೂ ಬೇಡ. ಬಣ್ಣ ಅಂತ ಹೋದರೆ ಕತ್ರೀ ಕದ್ದು ಸಿಕ್ಕಬಿದ್ದ ಹಾಗೆ ಆದೀತು!”

ಅಣ್ಣನ ಕಣ್ಣಿನಲ್ಲಿ ನೀರು ಕಂಡುದನ್ನು ನೋಡಿ ಕಮಲೆ ಸಾನುತಾಪ ದಿಂದ—“ಅಣ್ಣಾ ಅಳಬೇಡಣ್ಣ! ನೀನು ಪಾಪ!”

“ಅಳಲಿಕ್ಕೆ ನಂಗೇನು ಧಾಡಿ ಕಮಲಾ! ಕಮಲ, ನೀನು ತೆಂಕಣ ಗಾಳಿಯಾಟ ಹೇಳು ನೋಡುವಾ. ಅದನ್ನು ಹೇಳಿದರೆ ಚುರುಕು ಬಂದು ಬಿಡುತ್ತದೆ. ದುಃಖ ಎಲ್ಲ ಓಡಿಬಿಡುತ್ತದೆ!”

“ಆಯ್ತಣ್ಣ. ಆದರೆ ನಿನ್ನ ಹಾಗೆ ಕೈಯಾಟ ಮಾಡಲಿಕ್ಕೆ ನಂಗೊತ್ತಿಲ್ಲ.”

“ಬೇಡ. ಸುಮ್ಮನೆ ಹೇಳು.“

“ಬರಲಿದೆ ಅಹಹಾ—ಅಣ್ಣ! ಯಾರಾದರೂ ಕೇಳಿದರೊ?”

“ಇಲ್ಲ. ಈಗ ಶಾಲೆಗೆ ಹೋಗುವವರೆಲ್ಲಾ ಹೋಗಾಯಿತು. ಎರಡನೇ ಪಿರೀಯಡು ಈಗ. ಈ ಗುಡ್ಡೆಗೆ ಈಗ ಯಾರು ಬರ್ತಾರೆ? ಹೇಳು.”

“ಬರಲಿದೆ ಅಹಹಾ ದೂರದಿ ಬರಲಿದೆ!

ಘುಸುಗುಟ್ಟುವ ಪಾತಾಳದ ಹಾವೋ! —“ಅಣ್ಣಾ! ಘುಸುಗುಟ್ಟುವ ಪಾತಾಳದ ಹಾವೋ—ಅಂದರೆ ಏನಣ್ಣ?”

ತಿಮ್ಮಣ್ಣ ಉತ್ತರವೀಯಲು ಬಾಯಿ ತೆರೆಯುವಷ್ಟರಲ್ಲಿ ಅವನ ತಲೆಯ ಮೇಲಿನಿಂದ "ಹ್ಹತ್ ಕಳ್ಳ!" ಎಂದು ಭುಸುಗುಟ್ಟಿದ ಸದ್ದು ಕೇಳಿತು! ತಲೆ ಯೆತ್ತಿ ನೋಡಿದರೆ ತಂದೆ, ಪದ್ಮನಾಭೈಯ್ಯನ ಉಗ್ರಮುಖ!

೨೬

ಈ ಗಂಡಾಂತರಕ್ಕೆ ಜೋಡುಬಳೆ ವೆಂಕಟ್ರಾಯ ಮಾಸ್ತರರೇ ಮೂಲ! ತಿಮ್ಮನು ಮೂರು ದಿನಗಳಿಂದ ಒಂದು ಹೊತ್ತು ಶಾಲೆಗೆ ಚಕ್ಕರ್ ಕೊಡುತ್ತಿರುವುದನ್ನು ನೋಡಿ ಅವರು ಹಿಂದೊಮ್ಮೆ ಅವನು ಮುಂಡಾಸಿನ ಗುಂಗಿನಲ್ಲಿ ಮಾಡಿದ ಮೋಸವನ್ನು ನೆನೆದುಕೊಂಡು, ಸಂಶಯಪಟ್ಟು, ಕಟ್ಟೇಬೆಟ್ಟಿಗೆ ಪೋಚಪ್ಪನೆಂಬ ಹುಡುಗನನ್ನು ಕಳುಹಿಸಿದರು. ಪೋಚಪ್ಪನಿಂದ ಪದ್ಮನಾಭೈಯ್ಯನಿಗೆ ತನ್ನ ಮಕ್ಕಳು ಶಾಲೆಗೆ ಮುಟ್ಟಿಲ್ಲವೆಂಬ ಸುದ್ದಿ ತಿಳಿಯಿತು. ಕೂಡಲೇ ಅವರು ಒಂದು ಮುಂಡನ್ನು ಉಟ್ಟುಕೊಂಡು ಷರಟನ್ನು ಹೊಗಿಸಿಕೊಂಡು, ಒಂದು ಎಲವಸ್ತ್ರವನ್ನು ತಲೆಗೆ ಸುತ್ತಿಕೊಂಡು ಪೋಚಪ್ಪನೊಂದಿಗೆ ಹೊರಟರು. ಗುಡ್ಡದ ದಾರಿಯಲ್ಲಿ ಹುಡುಕುತ್ತಾ ಆಗಲೇ ನಮ್ಮ ದಡ್ಡ ತಿಮ್ಮ ಕಲ್ಪಣೆಯೊಳಗೆ ಸಿಕ್ಕಿಬಿದ್ದು ಬೆದರಿದನು, ಬೆವರಿದನು. ಕಮಲೆ ರೋದನ ರಾಗವನ್ನು ಪ್ರಾರಂಭ ಮಾಡಿದಳು.

"ಇಲ್ಲಿ ಬಾರೋ ಫಟಿಂಗ!" ಎಂದು ಕೆಂಗಣ್ಣಿನ ಪದ್ಮನಾಭೈಯ್ಯ ಕೂಗುತ್ತಲೇ ತಿಮ್ಮಣ್ಣ ಸಂಚಿಯನ್ನು ಬಗಲಲ್ಲಿ ಹಾಕಿಕೊಂಡು ಕಲ್ಪಣೆಯೊಳಗಿನಿಂದ ಹೊರಬಂದನು. ಕಮಲೆಯೂ ಅವನನ್ನು ಅನುಸರಿಸಿದಳು. ಅವಳನ್ನು ಕುರಿತು ಪದ್ಮನಾಭೈಯ್ಯ—"ನೀನು ನಡೀ ನಾಯಿ ಹಾಗೆ ಮನೆಗೆ!" ಎಂದು ದಟ್ಟಿಸಿದರು. ಕಮಲೆ ಗಾಳಿಗೆ ಅಟ್ಟಿಸಲ್ಪಟ್ಟವಳ ಹಾಗೆ ಮನೆಯ ದಾರಿ ಹಿಡಿದಳು. ತಾನು ಮಹಾಪಾಯದಿಂದ ಪಾರಾದರೂ ಅಣ್ಣನ ಗತಿ ಯೇನಾಗುವುದೋ ಎಂದು ತಳಮಳಿಕೆಯಿಂದ ಹಿಂದೆ ಹಿಂದೆ ನೋಡುತ್ತಾ ಓಡಿ ಹೋದಳು.

"ಕತ್ತೆ ಮಗನೆ! ಎಷ್ಟು ದಿನದಿಂದ ಹೀಗೆ ಮಾಡುತ್ತಿದ್ದೀಯಾ?"—ಎಂದು ಪದ್ಮನಾಭೈಯ ತಿಮ್ಮಣ್ಣನನ್ನು ಹಿಡಿದು, ಬಲಗೈಯನ್ನು ಮೇಲೆತ್ತಿ, ಅವನ ತೊಡೆಯ ಹಿಂಬದಿಯನ್ನು ಗುರಿಯಿಟ್ಟ.........ಅವರ ಆ ರುದ್ರಾಕಾರ, ಬೀಳಲಿಕ್ಕಿರುವ ಪೆಟ್ಟಿನ ವೇಗ, ಇವುಗಳನ್ನು ನೆನೆದು ತಿಮ್ಮಣ್ಣ ಹೆದರಿ

ದರದರನೆ ಭೂತದ ಹಾಗೆ ಧರಿಸುತ್ತ—"ಅಯ್ಯೋ! ಅಪ್ಪ! ಹೊಡೀಬೇಡಿ! ದಮ್ಮಯ್ಯ!" ಎಂದು ದೀನಸ್ವರದಿಂದ ಕಲ್ಲುಕೂಡಾ ಕರಗುವ ಹಾಗೆ ಕೂಗಿದನು. ಆದರಿಂದ ಜಿನುಗಿದ ದಯೆಯಿಂದಲೋ, ಪ್ರೀತಿಯ ಕೊಂಡಾಟದ ಮಗನೆಂದು ಫಕ್ಕನೆ ಜ್ಞಾನೋದಯವಾದುದರಿಂದಲೋ, ವೇಗದಿಂದ ತೊಡೆಯ ಮೇಲೆ ಬೀಳಲಿದ್ದ ಆ ಪೆಟ್ಟು ಗುರಿತಪ್ಪಿದ ಹಾಗಾಯಿತು. ಅದರ ಗಾಳಿ ಮಾತ್ರವೇ ತೊಡೆಯನ್ನು ಕಲಕಿ ಹೊರಟುಹೋಯಿತು. ಇದನ್ನೇ 'ಅರ್ಧಪೆಟ್ಟು' ಎಂದೆವು.

ಕಳ್ಳ! ನಿನಗೆ ಪೆಟ್ಟಿನಿಂದ ಪ್ರಯೋಜನವಿಲ್ಲ. ನಡೀ ಶಾಲೆಗೆ!" ಎಂದು ಪದ್ಮನಾಭೈಯ ತಿಮ್ಮನನ್ನು ಎಳೆದುಕೊಂಡು ಶಾಲೆಗೆ ಹೊರಟರು. ಪೋಚಪ್ಪನೂ ಹೊರಟನು.

ಹೊತ್ತಲ್ಲದ ಹೊತ್ತಿನಲ್ಲಿ ಪೋಲೀಸರ ನಡುವೆ ಬರುವ ಅಪರಾಧಿಯಂತೆ, ಶಾಲೆಗೆ ಬಂದ ತಿಮ್ಮಣ್ಣನ ಅಳುಮೋರೆಯನ್ನು ನೋಡಿ ಇಡೀ ಶಾಲೆಯ ಹುಡುಗರೆಲ್ಲ ಎದ್ದುನಿಂತರು ಸರಿಯಾಗಿ ನೋಡಲಿಕ್ಕೆ. ಮಾಸ್ತರುಗಳ ಪಾಠಪ್ರವಚನಾದಿಗಳ ಮೇಲೆ ಯಾವ ಹುಡುಗರ ಲಕ್ಷ್ಯವೂ ನೆಲಸಲಿಲ್ಲ. ಗುಜುಗುಜು ಮಾಡುವ ಹುಡುಗರನ್ನು ನಿವಾರಿಸಲು ಮಾಸ್ತರರಿಗೂ ಕಷ್ಟವಾಯಿತು.

ತಿಮ್ಮನನ್ನು ನೋಡುತ್ತಲೇ ವೆಂಕಟರಾಯ ಮಾಸ್ತರು ಕ್ಲಾಸಿನಿಂದೆದ್ದು ಹೆಡ್ಮಾಸ್ತರ ಕೋಣೆಗೆ ಹೊಕ್ಕರು. ತಿಮ್ಮಣ್ಣನು ಅಲ್ಲಿಗೆ ಹೋಗಲ್ಪಟ್ಟಿದ್ದನು. ಅಲ್ಲಿ ಹೆಡ್ಮಾಸ್ತರ ಮುಖಾಂತರವಾಗಿ ತಿಮ್ಮಣ್ಣನ ವಿಚಾರಣೆ ನಡೆಯಬೇಕಾಗಿತ್ತು. ವೆಂಕಟರಾಯ ಮಾಸ್ತರು ಹೆಡ್ಮಾಸ್ತರ ಕೋಣೆಯೊಳಗೆ ಹೊಕ್ಕು ಬಾಗಿಲು ಹಾಕಿ ಒಳಗಿನಿಂದ ಭದ್ರಗೊಳಿಸಿಬಿಟ್ಟರು. ಏಕೆಂದರೆ ಹುಡುಗರೆಲ್ಲಾ ಗುಂಪುಗಟ್ಟಿ ಸುತ್ತು ಕೂಡಬಹುದಾದ ಲಕ್ಷಣವನ್ನು ನೋಡಿ. ಆದರೂ ಕೆಲವು ತುಂಟರು, ಕಾವಲಿನ ತಿಂಡಿಯ ಮೇಲೆ ನಾಯಿ ಸುತ್ತುಗಟ್ಟುವ ಹಾಗೆ ಹೆಡ್ಮಾಸ್ತರ ಕೋಣೆಯನ್ನು ಸುತ್ತುತ್ತ ಕಿಟಿಕಿ ಬಾಗಿಲುಗಳ ಸಂದಿನಲ್ಲಿ ಇಣಿಕುತ್ತಿದ್ದರು. ಆದರೆ ಒಳಗೆ ನಡೆದ ವಿಚಾರಣೆಯ ಕ್ರಮವು ಯಾರಿಗೂ ಸರಿಯಾಗಿ ಕೇಳಿ ಬರಲಿಲ್ಲ. ಹೆಡ್ಮಾಸ್ತರು ಏನೋ ಪ್ರಶ್ನಿಸಿದರು. ತಿಮ್ಮಣ್ಣನು ಏನೋ ಅಳುತಳುತ ಅಂದನು. ಪದ್ಮನಾಭೈಯ ಏನೋ ಗದರಿಕೆ ಹಾಕಿದಂತಾಯಿತು. ಪೋಚಪ್ಪನು ಏನೋ ಸಾಕ್ಷಿ ನುಡಿದಿರಬೇಕು. ಅಷ್ಟೆ

ರಲ್ಲಿ ಅತ್ತಿತ್ತ ಸುತ್ತುತ್ತಿದ್ದ ಹುಡುಗರನ್ನು ಮಾಸ್ತರುಗಳು ಗದರಿಸಿ ಅವರವರ ಸ್ಥಾನದಲ್ಲಿ ಕೂಡಿಸಿದ್ದರು.

ಇನ್ನೇನು?—ಸುರಳೀ ಛಡಿಗಳ ಸದ್ದು "ರ್ರಫ್ ರ್ರಫ್" ಎಂದು ಕಿವಿಗೆ ಕೇಳಿ ಬರುತ್ತದೆ—ಎಂದು ಎಲ್ಲಾ ಹುಡುಗರೂ ಕಿವಿನಿಗುರಿಸಿಕೊಂಡು ಎಣಿಕೆ ಹಾಕಲು ಬೆರಳನ್ನು ಸಿದ್ಧ ಮಾಡಿಟ್ಟುಕೊಂಡಿದ್ದರು. ಆದರೆ ಅಂತಹ ಕರ್ಕಶ ಸದ್ದೇನೂ ಕೇಳಿಸಲಿಲ್ಲ. ಹೆಡ್ಮಾಸ್ತರ ಕೋಣೆಯೊಳಗಿನಿಂದ ಪ್ಯೂಂಚಪ್ಪನು ಮಾತ್ರ ಬಾಗಿಲು ತೆರೆದು ಹೊರಗೆ ಬಂದು ಪುನಃ ಬಾಗಿಲು ಹಾಕಿ, ತನ್ನ ಕ್ಲಾಸಿನಲ್ಲಿ ಹೋಗಿ ಕುಳಿತನು. ಹುಡುಗರೆಲ್ಲಾ ಅವನನ್ನು ಸುತ್ತಿಕೊಂಡು—"ಏನು ಪ್ಯೂಂಚ? ತಿಮ್ಮಣ್ಣನಿಗೇನು ಶಿಕ್ಷೆ? ಏನು ಮಾಡಿದ? ಛಡೀ ಶಬ್ದ ಕೇಳ್ಲಿಲ್ಲಲ್ಲಾ?" ಎಂದು ಕೆದರಿದರು. "ಮಾಡಿದ್ದು ಮೋಸ! ಛಡಿಯೂ ಇಲ್ಲ ಕಿಡಿಯೂ ಇಲ್ಲ! ರಟ್ಟೆನಟ್ಟೆಯನ್ನು ಕಟ್ಟಿಕೊಂಡು ಮೆಟ್ಟು ಕದ್ದ ಭಟ್ಟನ ಹಾಗೆ ಬರುತ್ತಾನೆ ನೋಡಿ!" ಎಂದನು ಪ್ಯೂಂಚ.

ಆ ಶಾಲೆಯ ಐದನೆಯ ಕ್ಲಾಸಿನಲ್ಲಿ ಕಲಿಯುವ ದೊನ್ನೆ ಭಟ್ಟ ಎಂಬ ದೊಡ್ಡ ಹುಡುಗನು ಹಿಂದೊಮ್ಮೆ ಯಾರದೋ ಮೆಟ್ಟುಕದ್ದು ಸಿಕ್ಕಿಬಿದ್ದಿದ್ದನು. ಆ ಮೆಟ್ಟುಗಳಿಗೆ ದಾರವನ್ನು ಕಟ್ಟಿ ಭಟ್ಟನ ಕುತ್ತಿಗೆಗೆ ಮಾಲೆಯನ್ನು ಹಾಕಿ, ಪ್ರತಿ ಕ್ಲಾಸಿಗೂ ಮೆರವಣಿಗೆ ಮಾಡಿಸಿದ್ದರು. ಪ್ರತಿ ಕ್ಲಾಸಿನಲ್ಲಿಯೂ ಭಟ್ಟನು ನಿಂತು—"ಅಯ್ಯಾ, ನಾನು ಈ ಮೆಟ್ಟುಗಳನ್ನು ಕದ್ದೆನು. ಸಿಕ್ಕಿ ಬಿದ್ದು ಶಿಕ್ಷೆಗೆ ಗುರಿಯಾದೆನು. ನೋಡಿ! ನೀವು ಯಾರೂ ನನ್ನ ಹಾಗೆ ಕಳ್ಳರಾಗಬೇಡಿ. ನನ್ನನ್ನು ಕ್ಷಮಿಸಿ" ಎಂದು ಕೇಳಿಕೊಳ್ಳಬೇಕಾಗಿತ್ತು. ಆ ಮೇಲೆ ಮಾಸ್ತರು ಉದ್ದವಾದ ಸುರಳೀ ಬೆತ್ತದಿಂದ "ರ್ರಫ್" ಎಂದು ಅವನ ಅಂಗೈಯ ಮೇಲೆ ಒಂದು ಛಡಿಯನ್ನು ಛಡಾಯಿಸಿ, ಇನ್ನೊಂದು ಕ್ಲಾಸಿಗೆ ಒಯ್ದರು. ಹೀಗೆ ಶಿಕ್ಷೆಯಿಂದ ರಕ್ಷಿತನಾದ, ಪಶ್ಚಾತ್ತಾಪದಿಂದ ಪಾವನನಾದ, ಪಾದರಕ್ಷಾ ಚೋರ ಭಟ್ಟನೂ ಆ ಶಾಲೆಯಲ್ಲಿಯೇ ಇದ್ದನು.

ಆ ಬಗೆಯ ದೃಶ್ಯವೇ ಪುನಃ ನೋಡ ಸಿಕ್ಕುವುದೆಂದು ಹುಡುಗರೆಲ್ಲ ಆ ಬಾಗಲಿನ ಕಡೆಗೇ ನೋಡುತ್ತಿದ್ದಾಗ, ಭಟ್ಟನ ಹಾಗಲ್ಲ, ಭಟ್ಟನು ನಡೆದುಕೊಂಡೇ ಕ್ಲಾಸುಗಳಿಗೆ ತಿರುಗಿದ್ದನು; ತಿಮ್ಮಣ್ಣನು, ತಿಮ್ಮಣ್ಣನ ಹಾಗೆಯೇ ಅಂಬೆಗಾಲು ಹಾಕಿಕೊಂಡು ಹರಿದಾಡಿಕೊಂಡು ಬರುತ್ತಿದ್ದಾನೆ! ಮುಖವು ನೆಲದ ಕಡೆಗಿತ್ತು. ಕುತ್ತಿಗೆಯಲ್ಲಿ ಒಂದು ಅಟ್ಟೆ ನೇತಾಡುತ್ತಿತ್ತು. ಅವರಲ್ಲಿ

ದಪ್ಪವಾದ ಕಪ್ಪು ಅಕ್ಷರದಿಂದ "ನಾನು ಶಾಲೆ ಕಳ್ಳ" ಎಂದು ಬರೆದಿತ್ತು. ಹೆಡ್ಮಾಸ್ತರೇ ಅವನ ಹಿಂದೆ ದೀರ್ಘವಾದ ಸುರಳೀ ಬೆತ್ತವನ್ನು ಹಿಡಿದು ಕೊಂಡು ಹೊರಟಿದ್ದರು. ಪಕ್ಕದಲ್ಲಿ ವೆಂಕಟರಾಯ ಮಾಸ್ತರೂ ಇದ್ದರು. ಪದ್ಮನಾಭಯ್ಯ ಇಲ್ಲ. ಪಾಪ! ನಾಚಿಗೆಯಾಗಿರಬೇಕು ಅವರಿಗೆ. ಹಲವು ಹುಡುಗರು ಒಳಗೊಳಗೆ ನಗುತ್ತಿದ್ದರು. ಕೆಲವು ಸುಹೃದಯಿಗಳು ಮಾತ್ರ ಸಾನುತಾಪಭಾವಲೋಚನರಾಗಿ ನೋಡುತ್ತಿದ್ದರು.

ಹೀಗೆ ತಿಮ್ಮಣ್ಣ ಒಂದು ಕ್ಲಾಸಿನ ಮುಂದೆ ನಿಲ್ಲುತ್ತಲೇ ಹೆಡ್ಮಾಸ್ತರು "ಹುಂ ಹೇಳು" ಎಂದರು. ತಿಮ್ಮನು ಕಣ್ಣೀರು ಸುರಿಸುತ್ತ ನೆಲವನ್ನು ನೋಡುತ್ತ ಗದ್ಗದ ಸ್ವರದಿಂದ—"ಅಯ್ಯ! ನಾನು ಶಾಲೆಗೆ ಕಳ್ಳ! ಶಾಲೆಗೆ ಬರುವವರು ಹುಡುಗರು; ಬಾರದವರು ಕೋಣಗಳು. ನಾನು ಕೋಣನ ಹಾಗೆ ಕಲ್ಪಣೆಯಲ್ಲಿ ಅಡಗಿ ಕೂತು ಸಿಕ್ಕಿಬಿದ್ದೆ–ಬುದ್ಧಿ ಬಂತು. ಇನ್ನು ಹಾಗೆ ಮಾಡುವುದಿಲ್ಲ. ನನ್ನನ್ನು ಕ್ಷಮಿಸಿ" ಎಂದು ಬೇಡಿಕೊಂಡನು. ಹಾಗೆಯೇ ಹರಿಯುತ್ತಾ ಇನ್ನೊಂದು ಕ್ಲಾಸಿಗೆ ಸವಾರಿ. ಹೀಗೆ ಶಾಲೆಯ ಪ್ರತಿ ಯೊಂದು ಕ್ಲಾಸಿನಲ್ಲಿಯೂ ತಿಮ್ಮಣ್ಣನ ಮೆರೆವಣಿಗೆಯಾಯಿತು.

ಅಂದು ಸಾಯಂಕಾಲ ಶಾಲೆ ಬಿಡುವಾಗ ಪ್ರಾರ್ಥನೆಯಾದ ಮೇಲೆ ಇಡೀ ಶಾಲೆಯ ಹುಡುಗರನ್ನು ನಿಲ್ಲಿಸಿ ಹೆಡ್ಮಾಸ್ತರು ಒಂದು ಸಣ್ಣ ಭಾಷಣ ವನ್ನು ಮಾಡಿದರು:—

"ಪ್ರಿಯ ವಿದ್ಯಾರ್ಥಿಗಳೇ! ಇಂದು ತಿಮ್ಮಣ್ಣನಿಗಾದ ಶಿಕ್ಷೆಯ ಬಗ್ಗೆ ನೀವೆಲ್ಲರೂ ಸಹಾನುತಾಪವುಳ್ಳವರಾಗಬೇಕು. ಅವನಿಗಿಂತಲೂ ದೊಡ್ಡ ದೊಡ್ಡ ಅಪರಾಧ ಮಾಡಿದವರೂ ನಿಮ್ಮಲ್ಲಿದ್ದಾರೆ. ಅವರೆಲ್ಲಾ ಎಚ್ಚೆತ್ತು ಕೊಂಡು ಸನ್ಮಾರ್ಗಗಾಮಿಗಳಾಗಬೇಕು. ಅಲ್ಲದೆ ಒಬ್ಬನಿಗೆ ಶಿಕ್ಷೆಯಾದು ದನ್ನು ನೋಡಿ ತಮಾಷೆಮಾಡುವ ಹುಡುಗರು ಬಹಳ ಕೆಟ್ಟವರು. ಎಚ್ಚರಿಕೆ, ತಿಮ್ಮಣ್ಣನು ಸಾಧು. ಅವನು ಪಶ್ಚಾತ್ತಾಪದಿಂದ ತನ್ನ ತಪ್ಪನ್ನು ತಿದ್ದಿಕೊಳ್ಳು ತ್ತಾನೆ. ಆದುದರಿಂದ ನಾವು ಅವನನ್ನು ಹೀಗೊಂದು ಬಗೆಯಿಂದ ಗೌರ ವಿಸೋಣ. ತಿಮ್ಮನ ಸ್ವರವು ಇಂಪಾಗಿದೆ; ಮನೋಹರವಾಗಿದೆ. ಅಂತೆಯೇ ನಾಳೆಯಿಂದ ಶಾಲೆಯ ಪ್ರಾರಂಭದಲ್ಲಿಯೂ ಅಂತ್ಯದಲ್ಲಿಯೂ ದೇವರ ಪ್ರಾರ್ಥನೆಯ ಹಾಡನ್ನು ಗಣೇಶ ಶೆಣ್ಯೈಯೊಂದಿಗೆ ತಿಮ್ಮಣ್ಣನೂ ಸೇರಿ ಹಾಡಬೇಕು! ಮತ್ತು ಶ್ರೀಮಾನ್ ವೆಂಕಟರಾಯ ಮಾಸ್ತರು ತಿಮ್ಮಣ್ಣ ನಿಗೊಂದು ಸಣ್ಣ ಬಹುಮಾನವನ್ನು ಈಗ ಕೊಡುತ್ತಾರೆ."

ಎಲ್ಲ ಹುಡುಗರೂ ಕೈಚಪ್ಪಾಳೆ ತಟ್ಟಿದರು. ವೆಂಕಟರಾಯ ಮಾಸ್ತರರು ತಿಮ್ಮಣ್ಣನನ್ನು ಮುಂದಕ್ಕೆ ಕರೆದು, ಒಂದು ಬಣ್ಣದ ಪೆಟ್ಟಿಗೆಯನ್ನೂ, ಒಂದು ಚಿತ್ರದ ಪುಸ್ತಕವನ್ನೂ ಬಹುಮಾನ ಕೊಟ್ಟರು. ಅವನು ಅವುಗಳನ್ನು ಪಡೆದುಕೊಂಡು ಮಾಸ್ತರರಿಗೆ ನಮಸ್ಕಾರ ಮಾಡಿದಾಗ ಅದೆಷ್ಟು ಆನಂದವಾಗಿತ್ತವನಿಗೆ! ಅವನ ಪ್ರೀತಿಯ ಬಣ್ಣದ ಪೆಟ್ಟಿಗೆ!

## ೨೭

"ನಾನು ಶಾಲೆಗೆ ಕಳ್ಳ" ಎಂದು ಪ್ರದರ್ಶನ ಮಾಡಲ್ಪಡುವ ವಿಚಿತ್ರ ಮೃಗದಂತೆ ಕ್ಲಾಸು ಕ್ಲಾಸು ತಿರುಗುವಾಗ, ತಿಮ್ಮಣ್ಣನಿಗೆ ಅದೆಷ್ಟು ಅವಮಾನ--ಅದೆಷ್ಟು ನಾಚಿಗೆಯಾಯಿತೆಂದು ಹೇಳಲು ಸಾಧ್ಯವಿಲ್ಲ. ಅವನು ಅತ್ಯಂತ ಅಭಿಮಾನಿ. ನಾಚಿಗೆ ಕಳೆದುಕೊಳ್ಳುವುದೆಂದರೆ ಸಾಯುವ ಹಾಗಾಗುತ್ತಿತ್ತು ಅವನಿಗೆ. ಹಿಂದೊಮ್ಮೆ ಅವನು ಪುಟ್ಟ ಕಮಲೆಯರೊಂದಿಗೆ, ಪೆಡಂಗಡಿಯ ಗುಡ್ಡೆಯ ಹೊಸ ಹಾದಿಯಿಂದಾಗಿ, ಶಾಲೆಯಿಂದ ಮನೆಗೆ ಬರುತ್ತಿದ್ದನು. ಏಕೆಂದರೆ, ಪೆಡಂಗಡಿಯ ಗೋಳೀಮರದಿಂದ ಅದಷ್ಟು ಎಲೆಯನ್ನು ಮುರಿದು ತರಬೇಕೆಂದು ಜಲಜಮ್ಮ ಅವನಿಗೆ ಹೇಳಿದ್ದಳು. ಅವನು ಗೋಳೀಮರಕ್ಕೆ ಹತ್ತಿ ಎಲೆಯನ್ನು ಮುರಿಮುರಿದು ಹಾಕಿದನು. ಪುಟ್ಟ-ಕಮಲೆಯರು ಆರಿಸಿಕೊಂಡರು. ಅವನ್ನೆಲ್ಲಾ ಕಟ್ಟಿಕೊಂಡು ಮನೆಗೆ ನಡೆಯುತ್ತಿರುವಾಗ, ದಾರಿಯಲ್ಲಿ ಒಂದು ಹಣ್ಣು ತುಂಬಿದ ಮರವು ಕಣ್ಣಿಗೆ ಬಿತ್ತು. ಅದು ಎಂತಹ ಮರ ಎಂತಹ ಹಣ್ಣು ಎಂಬುದೇನೂ ಅವನಿಗೆ ತಿಳಿಯದು. ಹಣ್ಣುಗಳು ಕೆಂಪಗಾಗಿ, ಕಿರಿ ಬೆರಳಿನಷ್ಟು ಉದ್ದವಾಗಿ ಫಳಫಳಿಸುತ್ತಿತ್ತು. ಮರತುಂಬ ತುಂಬಿ, ತುಂಬ ಮೋಹಕವಾಗಿದ್ದುವು. ಹುಡುಗರ ಬಾಯಿಯಲ್ಲಿ ನಿರೂರಿಸುವಂತಿತ್ತು ಆ ನೋಟ. ತಿಮ್ಮಣ್ಣನ ಕಣ್ಣುಗಳು ಆಕರ್ಷಿಸಲ್ಪಟ್ಟು, "ಕಮಲ! ನೋಡೆ ನೋಡೆ! ಈ ಮರದ ಹಣ್ಣು! ಎಷ್ಟು ಚೆನ್ನಾಗಿವೆ! ಅಹಹ!" ಎಂದು ನಿಂತನು. ಕಮಲೆಯೂ ನೋಡಿ "ಹೌದಣ್ಣ ಆಹ! ಈ ಹಣ್ಣು ರುಚಿ ಉಂಟ?" ಎಂದಳು. "ಅಣ್ಣ ನಂಗ ಆ ಹಣ್ಣು ಬೇಕು!" ಎಂದನು ಪುಟ್ಟ. "ನೋಡಿದರೆ ಸೀ ಇರುವ ಹಾಗೆ ಕಾಣುತ್ತದೆ! ತಡಿ! ನಾನು ಮರಕ್ಕೆ ಹತ್ತುತ್ತೇನೆ" ಎಂದು ತಿಮ್ಮಣ್ಣ ಸಂಚಿ ಮುಂತಾದುವನ್ನು ಕೆಳಗಿಟ್ಟು, ಅಂಗಿತೆಗೆದು ಹತ್ತಿದನು ಮರದ ಮೇಲೆ.

ಮೊದಲು ಅವನು ಒಂದು ಹಣ್ಣನ್ನು ಕಿತ್ತು ಬೆರಳಿನಿಂದ ಗೀರಿ ಸಿಪ್ಪೆ ತೆಗೆದು ತಿಂದನು. ಏನೋ ಒಂದು ಬಗೆಯ ಒಗರು ಸೀಯಾಗಿತ್ತು! ಅಷ್ಟಿದ್ದರೆ ಹುಡುಗರಿಗೆ ಸಾಕಷ್ಟೆ? "ಆಹಾ! ತುಂಬ ರುಚಿ!" ಎಂದು ಪುಟ್ಟ-ಕಮಲೆಯರಿಗೂ ಕೆಲವನ್ನು ಕಿತ್ತು ಹಾಕಿದನು. ತಾನು ಮರದಲ್ಲೆ ಕುಳಿತು ಸಾಕಷ್ಟು ತಿಂದನು. ಆ ಹಣ್ಣಿನಿಂದ ಒಂದು ವಿಧವಾದ ಮೇಣದ ನೀರು ಒಸರುತ್ತಿತ್ತು. ಆದರಿಂದ ತಿಮ್ಮಣ್ಣನ ಬೆರಳೆಲ್ಲಾ ಪಸೆಪಸೆಯಾಯಿತು. ತಿಂದು ತೃಪ್ತಿಯಾದ ಮೇಲೆ, ತನ್ನ ಇಕ್ಕೈಗಳ ಬೆರಳುಗಳ ಮೇಣದ ಪಸೆಯನ್ನು ತನ್ನ ಎರಡು ತೊಡೆಗಳಿಗೆ ಒರಸಿಕೊಂಡನು. ಪುಟ್ಟ ಕಮಲೆಯರು ಕಚ್ಚಿಕಚ್ಚಿಯೇ ತಿಂದು ಹಾಕಿದುದರಿಂದ ಅವರ ಕೈಗಳಿಗೆ ವಿಶೇಷ ಮೇಣದ ಪಸೆ ಅಂಟಿಕೊಳ್ಳಲಿಲ್ಲ. ಅಲ್ಪ ಪಸೆಯಾದುದನ್ನು ಕಮಲೆ ತನ್ನ ಲಂಗಕ್ಕೆ ಒರಸಿಕೊಂಡು, ಪುಟ್ಟನದನ್ನೂ ತನ್ನ ಲಂಗಕ್ಕೇ ಒರಸಿದಳು. ಆ ಹಣ್ಣಿನ ಮಾದರಿಯನ್ನು ತಾಯಿಗೆ ತೋರಿಸಬೇಕೆಂದು, ಎರಡು ಮೂರು ಹಣ್ಣುಗಳನ್ನು ದಪ್ತರ ಸಂಚಿಯಲ್ಲಿ ಹಾಕಿಕೊಂಡು ಮನೆಗೂ ತಂದರು.

ಅದೇನೊ!— ಮನೆಗೆ ಮುಟ್ಟುವಷ್ಟರಲ್ಲಿ ತಿಮ್ಮಣ್ಣನ ತೊಡೆಗಳು ಉರಿಯಲಾರಂಭಿಸಿದ್ದುವು. ಅವರು ತಂದುಕೊಟ್ಟ ಹಣ್ಣನ್ನು ನೋಡಿ ಅದನ್ನು ಅವರು ತಿಂದ ಸಮಾಚಾರವನ್ನು ಕೇಳುತ್ತಲೇ, ಜಲಜಮ್ಮ ಗಾಬರಿ ಬಿದ್ದು—ಅಯ್ಯೊ! ಮಾರಿ ಚಂಡಗಳಾ! ಬುದ್ಧಿಗೇಡಿಗಳಾ! ಇದು ಚಾರೇ ಮರದ ಹಣ್ಣು! ಮಹಾ ಬೆಂಕಿ! ಆ ಮರದ ಬುಡದಲ್ಲಿ ಕೂತರೆ ಸಾಕು ಮೈ ಪೂರಾ ಹುಣ್ಣಾಗುತ್ತದೆ! ಏನು ಎಂಥದೂ ಅಂತ ವಿಚಾರ ಮಾಡದೆ, ಆ ಸುಟ್ಟ ಮರಕ್ಕೆ ಹತ್ತಿ ಹಣ್ಣು ಕೊಯ್ದು ತಿನ್ನಬಹುದಾ? ಅಯ್ಯೊ! ಬಾಯಿಯೆಲ್ಲಾ ಬೆಂದು ಹೋಗುತ್ತಲ್ಲ ಇನ್ನೂ! ಏನು ಮಾಡ್ಲೀ?" ಎಂದು ಚಡಪಡಿಸಿದಳು.

ಸುಳ್ಳಾಗಿಲ್ಲ. ಚಾರೇ ಮರದ ಮೇಣ ತಾಗಿದರೆ ಸಾಕು, ಬೆಂದು ಹೋಗುತ್ತದೆ. ಕಮಲೆ-ಪುಟ್ಟಂದಿರು ಚಾರೇ ಹಣ್ಣು ಕಚ್ಚಿಕಚ್ಚಿ ತಿಂದುದರಿಂದ ಅವರ ತುಟಿಗಳು ಸುಟ್ಟು ಹುಣ್ಣಾದುವು. ತಿಮ್ಮಣ್ಣ ಮೇಣದ ಬೆರಳುಗಳನ್ನು ಎರಡು ತೊಡೆಗಳಿಗೆ ಒರಸಿಕೊಂಡುದರಿಂದ, ಅವನ ಐದೈದು ಬೆರಳುಗಳೂ ಒಂದೊಂದು ತೊಡೆಯಲ್ಲಿ ಬೆಂದಿದ್ದುವು! ತೊಡೆಗಳೆರಡೂ ಬಾತುವು. ಉರಿ! ಕೀವು! ಹೀಗೆ ಪೇಚಾಟಕ್ಕಿಟ್ಟಿತು. ಅವಕ್ಕೆ ತಕ್ಕ ಔಷಧವೇನೂ ಇರಲಿಲ್ಲ. ಅನುಭವಿಕನೊಬ್ಬನು ಹೇಳಿದುದೇನೆಂದರೆ,—

"ಹೀಗೆ ಬಿಟ್ಟರೆ ಇದು ವಾಯಲು ಮೂರು ತಿಂಗಳಾಗುತ್ತದೆ. ಅದಕ್ಕೆ ಹೀಗೆಮಾಡಿ. ಹುಡುಗನನ್ನು ಪೂರಾ ಬೆತ್ತಲೆಮಾಡಿಸಿ, ಒಂದು ಕಾವಡಿಯಲ್ಲಿ ಒಂದು ಬದಿಗೆ ಒಂದು ಸೇರು ತೌಡು, ಇನ್ನೊಂದು ಬದಿಗೆ ಒಂದು ಸೇರು ಉಮಿ, ಆ ಕಾವಡಿಯಲ್ಲಿಟ್ಟು, ಅದನ್ನು ಈ ಹುಡುಗನು ಹೊತ್ತುಕೊಂಡು, ಬೆಳಗ್ಗಿನ ಹೊತ್ತಿನಲ್ಲಿ, ನಾಲ್ಕಾರು ಮನೆಗಳ ಇದಿರಿನಲ್ಲಿ ಅಂದರೆ ಎಲ್ಲರೂ ನೋಡುವ ಹಾಗೆ, ನಾಚುಗೆ ಪೂರಾ ಬಿಟ್ಟುಕೊಟ್ಟ ಹಾಗೆ ಹೋಗಿ, ಆ ಚಾರೇ ಮರಕ್ಕೆ ಮೂರು ಸುತ್ತು ಬಂದು,–'ಚಾರೆಣ್ಣಾ! ಚಾರೆಣ್ಣಾ! ನಿನ್ನ ಹರಕೇ ತಂದೇಕೊ! ಎಲ್ಲಾ ಸಾಕ್ಷೀ ಕೇಳಿಕೋ! ಎಲ್ಲಾ ಮಾನ ಬಿಟ್ಟೇಕೊ! ಎನ್ನಾಹುಣ್ಣಾ ಅಳಿಸೀಕೋ!' ಎಂದು ಕೂಗಿ ಹೇಳಿ, ಆ ತೌಡು–ಉಮಿಯನ್ನು ಆ ಮರದ ಬುಡಕ್ಕೆ ಹಾಕಿ ಮನೆಗೆ ಬರಲಿ. ಹೀಗೆ ಮಾಡಿದರೆ ಹದಿನೈದೇ ದಿನದಲ್ಲಿ ಕಡಮೆಯಾಗುತ್ತದೆ."

ಪುಟ್ಟ–ಕಮಲೆಯರ ಬಾಯಿಯ ಹುಣ್ಣುಗಳು ಅಷ್ಟೇನೂ ಕಠಿನವಾಗಿರಲಿಲ್ಲ. ಆದರೆ ತಿಮ್ಮಣ್ಣನಿಗೆ ಮಾತ್ರ ತೊಡೆಗಳಲ್ಲಿ ದೊಡ್ಡ ಹುಣ್ಣುಗಳೆದ್ದಿದ್ದುವು. ಬಹಳ ಜೋರಾಗಿ ಹೋಗುವ ಭೀತಿಗೆ ಎಡೆಯಿತ್ತು. ಆ ಅನುಭವಿಕನು ಹೇಳಿದ ಹಾಗೆ ಮಾಡಬೇಕೆಂದು ಜಲಜಮ್ಮ ತುಂಬಾ ಒತ್ತಾಯಿಸಿದಳು. ನಾಚಿಕೆಯ ನಿಧಿಯಾದ ತಿಮ್ಮಣ್ಣ ಸುಲಭದಲ್ಲಿ ನಾಚುಗೆಯನ್ನು ಬಿಟ್ಟಾನೆ? "ನನ್ನಿಂದಾಗದು! ನನ್ನಿಂದಾಗದು!" ಎಂದು ಹಟ ತೊಟ್ಟನು. "ಹಾಗೆಂದರೇನೊ? ಇಷ್ಟು ಸಣ್ಣ ಮೊರಂಟೆ ನೀನು ಭಾರೀ ದೊಡ್ಡ ಗಂಡುಸಾ? ಮತ್ತೆ ಥಕ ಥಕ ಕೋತೀ ಹಾಗೆ ಹಾರುತ್ತ ನಾಚಿಕೆ ಬಿಟ್ಟು ಹ್ಯಾಗೆ ತಿಂದಿ ಹಣ್ಣು? ಅನುಭವಿಸಬೇಕೀಗ ಚಾರಣ್ಣನ ಶಿಕ್ಷೆ!" ಎಂದು ಜಲಜಮ್ಮ ಬಲವಂತದಿಂದ ಅವನನ್ನು ಬೆತ್ತಲೆ ಮಾಡಿದಳು. "ನಾನೊಲ್ಲೇ!" ಎಂದು ತಿಮ್ಮಣ್ಣ ಕೂಗಿದನು. ಕಡೆಗೆ ಪದ್ಮನಾಭೈಯ ಬಂದು ಎರಡು ಬಲವಾದ ಗದರಿಕೆ ಹಾಕಿದ ಮೇಲೆ, ದೇಯಿಮಾನೆ ಕಾಂತು ಎಂಬ ತಿಮ್ಮಣ್ಣನ ಓರಿಗೆಯ ಹುಡುಗ–"ತಿಮ್ಮಣ್ಣೇರೆ! ಈರೆಗು ಧೈರ್ಯಗು ಬೋಡಾಂಡ ಯಾನ್ಲಾ ಉಳ್ಳೇ! ಪೋಯಿ ಬಲೇ!" ಅಂದರೆ– "ತಿಮ್ಮಣ್ಣನವರೆ! ನಿಮಗೆ ಧೈರ್ಯಕ್ಕೆ ಬೇಕಾದರೆ ನಾನಿದ್ದೇನೆ. ಹೋಗುವಾ ಬನ್ನಿ!" ಎಂದು ಅವನೂ ಬೆತ್ತಲೆಯಾಗಿ ಅವನೊಂದಿಗೆ ಸೇರಿದ ಮೇಲೆ, ತಿಮ್ಮಣ್ಣ ಹಾಗೆಯೇ ಉಮಿ-ತೌಡಿನ ಕಾವಡಿಯನ್ನು ಹೊತ್ತುಕೊಂಡು, ತೊಡೆಗಳ ನೋವಿನಿಂದ ಕುಂಟುತ್ತಾ ಆ ಮರದ ಬುಡಕ್ಕೆ ಹೋಗಿ, ಆ ಮರಕ್ಕೆ ಪ್ರದ

ಕ್ಷಿಣೆ ಮಾಡಿ, ಆಮಂತ್ರದ ಹಾಡನ್ನು ಹಾಡಿ ಹರಕೆ ಸಲ್ಲಿಸಿ ಮನೆಗೆ ಬಂದನು. ಆ ಮೇಲೆ ಬೇಗದಲ್ಲೆ ಆ ಹುಣ್ಣು ವಾಸಿಯಾದರೂ, ತೊಡೆಗಳಲ್ಲಿ ಕಪ್ಪಗಾಗಿ ಐದೈದು ಬೆರಳುಗಳ ಗುರುತು ಮಾತ್ರ ಹಾಗೆಯೇ ನೆಲೆಸಿತ್ತು.

ಆ ಬತ್ತಲೆಯಾದ ಅವಮಾನಕ್ಕಿಂತಲೂ ಹತ್ತುಪಟ್ಟು ಮಿಗಿಲಾಗಿತ್ತು ಶಾಲೆಯಲ್ಲಿ ಆದ ಅವಮಾನ. ಇನ್ನು ಮೇಲೆ ಊರಿನಲ್ಲಿ ಮುಖವೆತ್ತಿ ನಡೆಯುವುದು ಹೇಗೆ? ಶಾಲೆಗೆ ಬರುವುದು ಹೇಗೆ? ಹುಡುಗರೆಲ್ಲ ತನ್ನನ್ನು ನೋಡಿ ದಿನಾಲೂ ನಗುವ ಹಾಗಾಯಿತಲ್ಲ, ಎಂದು ಮನಗುಂದಿ, ಅಗಾಧವಾದ ಆಲೋಚನೆಯಲ್ಲಿ ಮುಳುಗಿದಾಗ ಶಿಕ್ಷೆಯ ಕಾರ್ಯಕ್ರಮವು ಮುಗಿಯಿತು. ವೆಂಕಟ್ರಾಯಾದಿ ಮಾಸ್ತರುಗಳ ಪ್ರೀತಿಯ ನೀತಿಗಳು ಕಿವಿಯೊಳಗೆ ಹೊಕ್ಕುವು. ಆಗ ಹಗುರಾಗಲಾರಂಭಿಸಿದ ಅವನ ಹೃದಯವು ಮಾಸ್ತರು ಕೊಟ್ಟ ಅವನ ಪ್ರೀತಿಯ ಬಹುಮಾನದಿಂದ ಅರಳಿಹಿಗ್ಗಿತು. ಅವನ ಆಲೋಚನೆಗೊಂದು ದಡಸಿಕ್ಕಿತು, ಅಂದು ರಾತ್ರಿ ಬೆಳಗಾಗುವುದರೊಳಗೆ ಅವನೊಂದು ನಿರ್ಧಾರಕ್ಕೇ ಬಂದನು. "ಹುಂ, ಲೆಕ್ಕದಲ್ಲಿ ಮಾತ್ರ ಅಲ್ಲವೇ ನಾನು ದಡ್ಡ? ನೋಡುತ್ತೇನೆ! ಇನ್ನು ಮೇಲೆ ನಾನು ದಡ್ಡ ತಿಮ್ಮನಲ್ಲ!" ಎಂದು ಪ್ರತಿಜ್ಞೆ ಮಾಡಿಕೊಂಡನು. ಕೂಡಲೇ ಮಗ್ಗಿಯನ್ನು ಸಾಧನೆಮಾಡಲಾರಂಭಿಸಿದನು. ಕೆಲವೇ ದಿನಗಳಲ್ಲಿ ಮಗ್ಗಿ ನೀರಿನ ಹಾಗೆ ಅವನ ಗಂಟಲಲ್ಲಿಳಿದು ಜೀರ್ಣಿಸಿ ಮಿದುಳಿಗೆ ಅಂಟಿಕೊಂಡಿತು. ಆ ಮೇಲೆ ತಲೆಗೊಟ್ಟು ಮಾಡಿದ ಶಾಲೆಯ ಲೆಕ್ಕಗಳು ಸರಿಯಾಗಿ ಬಂದುವು. ಮಾರ್ಕು ತುಂಬಿತು. ಆ ವರ್ಷ ಪರೀಕ್ಷೆಯಲ್ಲಿ ಫೇಲಾಗತಕ್ಕ ದಡ್ಡ ತಿಮ್ಮನು ಪಾಸಾಗಿ ಐದನೆಯ ಕ್ಲಾಸಿಗೆ ಸೇರಿದನು.

ಆದರೆ—? ಪೀಠಿಕೆ ಮುಗಿದು ಕಥೆ ಪ್ರಾರಂಭವಾಗುವಾಗ ಬೆಳಗಾಗುತ್ತ ಬಂದಿತ್ತು! ಇದು ಯಾರಿಗೂ ಆಗ ತಿಳಿಯದೆ ಎಲ್ಲರೂ ಸಂತೋಷಪಟ್ಟರು.

## ೨೮

ತಿಮ್ಮಣ್ಣನು ದಡ್ಡತಿಮ್ಮ ಎಂಬ ಬಿರುದನ್ನು ತಾನೇ ಕತ್ತರಿಸಿಕೊಂಡು, ಉನ್ನತಿಗೆ ತಕ್ಕವನಾಗುತ್ತಿರುವುದನ್ನು ಕಂಡು ಪದ್ಮನಾಭೈಯನಿಗೆ ಸಂತೋಷವಾದುದೊಂದು ವಿಶೇಷವಲ್ಲ. ಅವನ ಮೇಲೆ ತುಂಬ ಅಭಿಮಾನವಿಟ್ಟಿರುವ

ಜೋಡುಬಳೆ ವೆಂಕಟರಾಯ ಮಾಸ್ತರು ಅವರಿಗಿಂತ ಹೆಚ್ಚಿಗೆ ಸಂತೋಷ ಪಡುತ್ತಿದ್ದರು. ಅವರು ತಿಮ್ಮಣ್ಣನ ಕಲಾಭಿರುಚಿಯನ್ನು ಕಂಡು, ಅವನನ್ನು ಉತ್ತಮ ರೀತಿಗೆ ತಿರುಗಿಸಿದರೆ ಕಲಾಕೋವಿದನಾಗುವನೆಂದೂ, ಈ ಪುಟ್ಟ ಗ್ರಾಮಕ್ಕೆ ದೊಡ್ಡ ಯಶಸ್ಸನ್ನು ತರಬಲ್ಲನೆಂದೂ ಭಾವಿಸಿಕೊಂಡಿದ್ದರು.

ಈಗ ತಿಮ್ಮಣ್ಣನು ಆಟವನ್ನು ಕಡಮೆ ಮಾಡಿ, ಪಾಠವನ್ನು ಹೆಚ್ಚಿಸಿ ಕೊಂಡುದನ್ನು ನೋಡಿ, ವೆಂಕಟರಾಯ ಮಾಸ್ತರೊಮ್ಮೆ ಪದ್ಮನಾಭೈಯ್ಯ ನನ್ನು ಕುರಿತು,—“ಹೌದಾ ಪದ್ಮನಾಭೈಯ್ಯ ನಿಮ್ಮ ತಿಮ್ಮಣ್ಣನಲ್ಲಿರುವ ವೈಶಿಷ್ಟ್ಯವನ್ನು ನಾನು ಕಂಡು ಹಿಡಿದಿರುತ್ತೇನೆ. ಅವನು ನಿಶ್ಚಯವಾಗಿ ಪೂರ್ವ ಜನ್ಮದ ಕರ್ಮಶೇಷದಿಂದ ಹುಟ್ಟಿದ ಕಲಾವಿದನೆನ್ನಲು ಏನೂ ಸಂದೇಹವಿಲ್ಲ. ಅದನ್ನು ಅರಿತು ನಾವು ಅವನನ್ನು ತಕ್ಕ ದಾರಿಗೆ ತರಬೇಕು. ಆದುದರಿಂದ ಹೇಳುತ್ತೇನೆ. ನೀವು ಅವನಿಗೆ ಮಾತ್ರ ಬಿಡದೆ ಚೆನ್ನಾಗಿ ವಿದ್ಯಾಭ್ಯಾಸ ಮಾಡಿಸಬೇಕು.

ಪದ್ಮ:—“ಅದೆಲ್ಲ ನಿಜವೇ. ನನಗೂ ಹಾಗೆಯೇ ಯೋಚನೆಯಿದೆ. ಆದರೆ ನನ್ನಂಥಾ ಬಡಪಾಯಿಯ ಹೊಟ್ಟೆಯಲ್ಲಿ ಅವನು ಹುಟ್ಟಬಾರದಿತ್ತೋ ಏನೋ!

“ಅದೇನು? ಏನಾಯಿತು?”

“ಯಾರಾದರೂ ದೊಡ್ಡ ಧನಿಕರ ಮನೆಯಲ್ಲಿ ಹುಟ್ಟಿರುತ್ತಿದ್ದರೆ ಬೇಕಾದ ಹಾಗೆ ಖರ್ಚು ಮಾಡಿ ಓದಿಸಬಹುದಾಗಿತ್ತು!”

ಅದೆಲ್ಲ ಗೊಡ್ಡು ಮಾತು. ಧನವಂತರ ಮಕ್ಕಳು ಮಾತ್ರ ವಿದ್ಯೆಯಲ್ಲಿ ಮುಂದಾಗುವರೆಂಬ ಮಾತನ್ನು ನಾನೊಪ್ಪಲಾರೆ.”

“ಆದರೂ ಎಲ್ಲದಕ್ಕೂ ಹಣವು ಬೇಕಲ್ಲ ಮಾಸ್ತರೇ?”

“ಹಾಗೆಂದು ಪರಿಮಳವಾದ ಹೂವಿನ ಗಿಡವನ್ನು ಕಮರಿಸಿ ಹಾಕುವುದೇ? ಏನು ಮಾತಯ್ಯ? ನೀವು ನಿಮ್ಮ ಶ್ರೀಮದ್ರಾಮಾಯಣನನ್ನು ವಿದ್ವಾಂಸನನ್ನಾಗಿ ಮಾಡಲಿಲ್ಲವೆ?”

“ಹೌದು. ಆಗಿನ ಕಾಲವೇ ಹಾಗಿತ್ತು. ಈಗ ಪೂರಾ ಸಾಲದಿಂದ ಮುಳುಗಿ ಹೋಗಿದ್ದೇನೆ ನಾನು. ಈ ಸಾಲವೆಲ್ಲಾ ನನ್ನ ಕೈಯಿಂದಲೇ ಆಯಿತೆಂದು ಶ್ರೀಮದ್ರಾಮಾಯಣನು ವಿವಾದವನ್ನು ಹೂಡಿ ನಮ್ಮೊಳಗೆ ಪಾಲು ಮಾಡಿಸಿದನಲ್ಲವೇ? ನಿಮಗೆ ಗೊತ್ತಷ್ಟೆ?”

"ಹೌದು, ಹೌದು. ಅಷ್ಟೂ ಸಾಲ ನಿಮ್ಮ ತಲೆ ಮೇಲೆಯೇ ಬಿದ್ದಿತೆ?"

"ಅದು ಹೇಗೆ ಹೊತ್ತೇನಯ್ಯ? ನಾನೂ ಅಣ್ಣನೂ ಸೇರಿಕೊಂಡೇ ಆ ಆಸ್ತಿಗಾಗಿಯೇ ಸಾಲ ಮಾಡಿರುವೆವಲ್ಲವೆ? ಎರಡು ಭಾಗವನ್ನು ಶ್ರೀಮದ್ರಾಮಾಯಣನ ತಲೆಯ ಮೇಲೆಯೇ ಹಾಕಿ, ಐನೂರು ರೂಪಾಯಿ ಸಾಲ ಮಾತ್ರವೇ ನಾನು ಹೊತ್ತಿದ್ದೇನೆ."

"ಹಾಗಾದರೆ ಚಿಂತೆಯಿಲ್ಲ!"

"ಚಿಂತೆಯಿಲ್ಲಾಂದ್ರೇನಯ್ಯಾ ಮಾಸ್ತ್ರೆ? ಅವನಿಗೆ ಅದಕ್ಕೆ ತಕ್ಕಷ್ಟು ಆಸ್ತಿಯೂ ಬಿಟ್ಟಿವೆ. ನನಗಿರುವುದು ಆ ಸಾಲವೂ, ಒಂದು ಮುರುಕು ಗುಡಿಸಲೂ, ಎಂಟು ಮುಡಿ ಬರುವ ಒಂದು ಚೂರು ಆಸ್ತಿಯೂ."

"ಅದೇಕಯ್ಯ ಹಾಗೆ? ನೀವು ಸರೀಪಾಲು ಮಾಡಿಕೊಂಡಿದ್ದರೆ ನಿಮಗೆ ಸ್ವಲ್ಪ ಹೆಚ್ಚಿಗೆ ಆಸ್ತಿಯಾದರೂ ಸಿಕ್ಕುತ್ತಿರಲಿಲ್ಲವೇ?"

"ನಿಜ. ಅದಕ್ಕೆ ತಕ್ಕಷ್ಟು ಸಾಲವನ್ನೂ ಹೊರಬೇಕಾಗುತ್ತಿತ್ತು. ಮಾಸ್ತರೆ, ಸತ್ಯ ಹೇಳ್ತೇನೆ: ನನಗೆ ಈ ಸಾಲ ಮೂಲದಲ್ಲಿ ಹೊರಳಿ ಹೊರಳಿ ಸಾಕು ಸಾಕಾಗಿ ಹೋಯ್ತು. ಅದಕ್ಕಾಗಿಯೇ ಸಾಲ-ಮೂಲ ಪೂರಾ ಅವನ ತಲೆ ಮೇಲೆಯೇ ಹಾಕಿ, ನಾನೊಂದು ಚೂರನ್ನು ಮಾತ್ರವೇ ಇಟ್ಟುಕೊಂಡು, ನೆಮ್ಮದಿಯಾಗಿರಬೇಕಂತಲೇ ಹೀಗೆ ಮಾಡಿದ್ದು. ಇನ್ನು ಕಟ್ಟಿಬಿಟ್ಟಿಗೂ ನನಗೂ ಆರು ತಿಂಗಳು ಮಾತ್ರವೇ ಋಣ. ಅದುವರೆಗಾದರೂ ಸುಮ್ಮನೆ ಇರುವ್ರಿಲ್ಲ. ರಾಮಣ್ಣನಿಗೆ ಬಾಡಿಗೆ ಚೀಟು ಬರೆದುಕೊಟ್ಟಿದ್ದೇನೆ."

"ಓಹೋ! ಹೊಸ ಮನೆ ಏನಾದರೂ ಕಟ್ಟುವ—?"

"ಆ! ಈಗ ಮನೆ ಕಟ್ಟ ಹೋದರೆ ಇದ್ದದ್ದೂ ಬಳಿದುಕೊಂಡು ಹೋದೀತು! ನನ್ನ ಪಾಲಿಗೆ ಬಂದ ಆ ಮಳ್ಳೀ ಮಾಡೀ ಗುಡಿಸಲಿನಲ್ಲಿ ಈಗ ವಕ್ಲು ಇದ್ದಾನಷ್ಟೇ? ಅವನನ್ನು ಎಬ್ಬಿಸಿ ಎಲ್ಲಾ ರಿಪೇರಿಮಾಡಿಸಿ, ಅಷ್ಟಕ್ಕೇ ಗೃಹ ಪ್ರವೇಶ ಮಾಡುವುದು. ಅದಕ್ಕಾದರೂ ಕೈಬರಿದಾಗಿವೆ. ಇಲ್ಲದಿದ್ದರೆ ಈಗಲೇ ಮಾಡಿಸಿ ಬಿಡುತ್ತಿದ್ದೆ. ಮಾಡುವುದೇನು? ನಾನೀಗ ಉದ್ಯೋಗವೊಂದನ್ನು ಹಿಡಿದು, ದೇಶಾಂತರಕ್ಕೆ ಹೋಗುವುದೆಂತ ಗಟ್ಟಿ ಮಾಡಿದ್ದೇನೆ!"

"ದೇಶಾಂತರಕ್ಕೆಂದರೆ? ಅದೇ ನಿಮ್ಮ ಮಾಮೂಲು ಮಲೆಯಾಳಕ್ಕೆ ತಾನೇ"

"ಮಲೆಯಾಳವೆಲ್ಲಾ ಗಾಳಿಸಿ ನೋಡಿಯಾಯ್ತು! ಉತ್ಪತ್ತಿ ಸರಿಯಾಗಿಲ್ಲ ಮಾಸ್ತ್ರೆ!"

"ಹಾಗಾದರೆ ಮತ್ತೆಲ್ಲಿಗೆ?"

"ಬೊಂಬಾಯಿಗೆ!"

"ಬೊಂಬಾಯಿಗೆ!"

"ಬೊಂಬಾಯಿಗೆ! ಮಂಗ್ಳೂರು ಕೃಷ್ಣಯ್ಯನವರು ಅಲ್ಲಿ ಒಂದು ಕಂಪೆನಿಯಲ್ಲಿದ್ದಾರಷ್ಟೆ? ನನಗೂ ಆ ಕಂಪೆನಿಯಲ್ಲಿಯೇ ಕೆಲಸ. ತಿಂಗಳಿಗೆ ಐವತ್ತು ರೂಪಾಯಿ ಸಂಬಳ ಅಂತಮಾತು. ಅಲ್ಲದೆ ದಾರಿ ಖರ್ಚಿನ ಬಾಬ್ತು ಐವತ್ತು ರೂಪಾಯಿ ಮಣಿಯಾರ್ಡರ್ರು ನಿನ್ನೆ ಬಂತು!

"ಓ! ಹಾಗಾದರೆ ಪ್ರಯಾಣ ಬೇಗವಲ್ಲೆ ಉಂಟೂನ್ನಿ!"

"ಹೌದು. ನಾಡದು ತಲೆಗಲ್ಲ ರಥೋತ್ಸವವು ಮುಗಿದ ಕೂಡಲೇ ಹೊರಡುವುದೆಂದಿದ್ದೇನೆ."

ಸರಿ, ಪದ್ಮನಾಭೈಯ್ಯ. ಸಂತೋಷದ ವಾರ್ತೆ ಎಂದೇ ತಿಳಿಯೋಣ. ದೇವರು ಮನಸ್ಸಿಟ್ಟರೆ ನಿಮಗೆ ಒಳ್ಳೇದೇ ಆಗುವುದು. ಏನಾದರೂ ತಿಮ್ಮಣ್ಣನ ವಿದ್ಯಾಭ್ಯಾಸಕ್ಕೆ ನೀವು ಅಲಕ್ಷ್ಯ ಮಾಡಲೇ ಬಾರದು. ಅಂದರೆ ಬಿ. ಎ., ಎಂ. ಎ., ಓದಿಸಬೇಕಂತಲ್ಲ. ಮ್ಯಾಟ್ರಿಕ್ ಆದ ಕೂಡಲೇ ವಿದ್ವಾನ್ ಓದಲಿ. ಆ ಮೇಲೆ ನೀವೀಗ ಹೇಗೂ ಬೊಂಬಾಯಿಯಂಥ ಪಟ್ಟಣಕ್ಕೆ ಹೋಗುತ್ತೀರಿ. ಅಲ್ಲಿ ಸುಪ್ರಸಿದ್ಧವಾದ ಆರ್ಟ್ಸ್ ಕಾಲೇಜು ಉಂಟು. ಅಲ್ಲಿ ಅವನನ್ನು ಚಿತ್ರಾಭ್ಯಾಸಕ್ಕೆ ಹಾಕಿದಿರೆಂದರೆ ನಿಮ್ಮ ಕರ್ತವ್ಯವನ್ನು ನೀವು ಚೆನ್ನಾಗಿ ಪಾಲಿಸಿದಂತಾಯ್ತು. ಮುಂದೆಲ್ಲ ದೇವರ ಸಹಾಯದಿಂದ ಆಗುತ್ತದೆ."

ನಿಜ ಮಾಸ್ತರೆ, ಸರಿಯಾದ ಅಭಿಪ್ರಾಯವೇ. ದೇವರು ನೀವು ಹೇಳಿದಂತೆಯೇ ಮಾಡಿಸಲಿ."

ವೆಂಕಟರಾಯ ಮಾಸ್ತರರು ಹೇಳದಿದ್ದರೂ ಪದ್ಮನಾಭೈಯನ ಮನಸ್ಸಿನಲ್ಲಿ ತಿಮ್ಮಣ್ಣನನ್ನು ಸರಿಯಾದ ಸೂತ್ರದಲ್ಲಿ ಮುನ್ನಡೆಯ ಬಿಡಬೇಕೆಂದೇ ಇತ್ತು. ಪ್ರಕೃತದ ಪರಿಸ್ಥಿತಿ ಬಹಳ ಮುಗ್ಗಟ್ಟಿನದಾದರೂ, ತನಗೆ ಸಿಕ್ಕಿದ ಹೊಸ ಉದ್ಯೋಗವೇ ಅವರಿಗೆ ಧೈರ್ಯವನ್ನು ಕೊಟ್ಟಿತ್ತು. ಎಂತಹ ಉದ್ಯೋಗವೆಂಬುದೊಂದೂ ಯಾರಿಗೂ ತಿಳಿಯದು. ಸಂಬಳ ಮಾತ್ರ.

ತಿಂಗಳಿಗೆ ಐವತ್ತೆ! ಆಹಾ! ಐನೂರು ರೂಪಾಯಿಯ ಸಾಲವನ್ನು ಒಂದೇ ವರ್ಷದೊಳಗೆ ತೀರಿಸಿಬಿಡಬಹುದು. ಆ ಮೇಲೆ ಇದ್ದ ಗಂಜಿ ಕುಡಿಯುತ್ತಾ ತಿಮ್ಮಣ್ಣನನ್ನು ಮೆಲ್ಲಗೆ ಮುಂದುವರಿಸಿಬಿಟ್ಟರೆ ಆಯಿತು ನನ್ನ ಕೆಲಸ.

ಹೀಗೆ ಯೋಚಿಸುತ್ತ ಪದ್ಮನಾಭೈಯ, ಬೊಂಬಾಯಿಗೆ ಹೋಗುವ ಸ್ಥಿರ ಸಂಕಲ್ಪವನ್ನು ಮಾಡಿದುದನ್ನು ನೋಡಿ, "ಏನೋ! ಎಲ್ಲಿಯೊ!" ಎಂದು ಮುಗ್ಧೆ ಜಲಜಮ್ಮನಿಗೆ ಮನದುಂಬ ಕಸಿವಿಸಿಯಾಯಿತು. ಅವಳು ಪತಿಯನ್ನು ಕುರಿತು,—"ಅಲ್ಲಾ, ಯಾಕೇಂದ್ರೆ ಆ ಬೊಂಬಾಯಿ-ಗಿಂಬಾಯಿ! ಎಲ್ಲಿಯೋ! ಯಾವ ದೇಶವೋ! ಯಾವ ಭಾಷೆಯೋ!" ಎಂದೊಮ್ಮೆ ತಡೆಸೊಲ್ಲಾಡಿದಳು.

ಪದ್ಮನಾಭೈಯ ಗೇಲಿಕೆಯ ಭಾವದಿಂದ—"ಹೋಗೇ ದಡ್ಡಿ! ನಿನಗೇನು ಗೊತ್ತೆ? ಕೂಪ ಮಂಡೂಕ! ಯಾವ ದೇಶವಾದರೇನೆ? ಎಲ್ಲಾ ಈ ನೆಲದಲ್ಲೇ! ಹೋದರೆ ತನ್ನಂತೆ ಭಾಷೆ ಬರುತ್ತೆ!"

"ಅಲ್ಲಾಂದ್ರೇ? ಅಂಥಾ ಸಂಕಷ್ಟ ನಮಗೇನು ಬಂತೂಂತ?"

"ಸಂಕಷ್ಟ ಅಂತಲ್ಲ, ಉದ್ಯೋಗಂ ಪುರುಷ ಲಕ್ಷಣಂ ಅಂತ. ಬಲು ಸುಲಭದಲ್ಲಿ ಇಷ್ಟು ಒಳ್ಳೇ ಕೆಲಸ ಸಿಕ್ಕಿದರೆ, ಮಾಡುವ ಶಕ್ತಿ ಇರುವಾಗ ಬಿಡುವುದುಂಟೆ?"

"ಅದೆಂತಹ ಕೆಲಸವೋ ಮಹಾ?"

"ಅದೆಲ್ಲ ಹೇಳಬಾರದು! ನಿನಗೇಕೆ?"

"ನೀವು ಹೀಗೆ ಮುಚ್ಚುಮರೆ ಮಾಡಿದರೆ ಏನೂಂತ ಅರ್ಥ! ಬಹಳ ಕಷ್ಟದ ಕೆಲಸವೋ ಏನೋ! ಅದಕ್ಕೆ ಮುಚ್ಚುಮರೆ ಅಂತ ಕಾಣುತ್ತದೆ!"

"ನೀನೊಬ್ಬಳು! ಕೇಳು ಹಾಗಾದರೆ. ಮನಸ್ಸಿನಲ್ಲಿ ಏನೇನೋ ಸಂಶಯಪಟ್ಟುಕೊಂಡು ಸಾಯಬೇಡ. ಯಾರಾದರೂ ಕೇಳಿದರೆ ಕಂಪೆನಿ ಕೆಲಸ ಅಂತ ಅಷ್ಟೇ ಹೇಳು. ಸತ್ಯ ಏನೆಂದರೆ, ಅಲ್ಲಿ ಒಂದು ಕಂಪೆನಿಯ ಹದಿನೈದು ಮಂದಿಗೆ ಅಡುಗೆ ಮಾಡಿದರೆ ತೀರಿತು. ತಿಂಗಳಿಗೆ ಐವತ್ತು!"

"ಓ! ಹಾಗನ್ನಿ ಮತ್ತೆ! ಹದ್ನೈದು ಮಂದಿಯೋ ಐವತ್ತೊ? ಅಲ್ಲಾ, ಅಲ್ಲಿಗೆ ಹೋಗಿ ಅಷ್ಟು ಸಂಪಾದಿಸದಿದ್ರೇನೀಗ? ಇಲ್ಲೇ ಎಲ್ಲ್ಯಾದರೂ ಸ್ವಲ್ಪ ಸಂಪಾದನೆ ಮಾಡಿಕೊಂಡಿದ್ದರೆ ಸಾಲದೊ?"

"ಇಲ್ಲಿ ಸಿಕ್ಕುವುದು ಬರೀ ಮಣ್ಣು!"

"ಅಲ್ಲದಿದ್ದರೆ ನಿನಗೆ ಪಳಗಿದ ಊರು, ತೆಂಕಲಾಗಿಯೇ ಹೋದರೇನಾಗುತ್ತದೆ? ನಮ್ಮವರೂಂತ ಭಾವನೊದಲಾದವರು ಇದ್ದಾರಲ್ಲ?"

"ಅಲ್ಲಿ ಹೋದರೆ ಹೊಟ್ಟೆಗೊಂದು ಬಿದ್ದೀತು, ಅಷ್ಟೆ! ಕೈಗೇನೂ ಬರುವುದಿಲ್ಲ! ಎಲ್ಲಾ ನೋಡಿದ್ದೇ ಅಲ್ಲವೊ?"

"ಅಲ್ಲಾ ನೀವೀಗ ಇಲ್ಲಿಯ ಸ್ಥಿತಿಯಾದ್ರೂ ಆಲೋಚನೆ ಮಾಡಿದಿರಾ? ಅಲ್ಲಿ ಮಳ್ಳೀ ಮಾಡೀ ಮನೆ ದುರಸ್ತಿಯಾಗಬೇಕು. ಇಲ್ಲಿಂದ ಅಲ್ಲಿಗೆ ಸಾಮಾನೆಲ್ಲಾ ಸಾಗಿಸಬೇಕು. ಇದೆಲ್ಲಾ ಯಾರು ನಿಂತು ಮಾಡಿಸ್ತಾರೆ? ನೀವೇನೋ ಪಾಲುಮಾಡಿ ಹಾಕಿ ಹೋಗಿಬಿಡುತ್ತೀರಿ ಬೊಂಬಾಯಿಗೆ! ಇಲ್ಲಿ ಮಕ್ಕಳನ್ನೆಲ್ಲಾ ಕಟ್ಟಿಕೊಂಡು ನಾನೊಬ್ಬಳೇ ಎಷ್ಟೆಂತ ಪೇಚಾಡಲಿ?"

"ಆ ಚಿಂತೆ ನಿನಗೆ ಬೇಡವೇ ಬೇಡ. ಅದಕ್ಕೆಲ್ಲಾ ಮಾಂಗಟ್ಟಿ ಶೀನ್ರಾಯರಿಗೆ ಹೇಳಿಟ್ಟಿದ್ದೇನೆ. ಎಲ್ಲಾ ಅವರೇ ಇದ್ದು ಮಾಡಿಸಿಕೊಡ್ತಾರೆ. ನಿನಗೆ ಹಣಬೇಕಾದಾಗೆಲ್ಲಾ ನಾನು ಬೊಂಬಾಯಿಯಿಂದ ಮಣಿಯಾರ್ಡರ್ ಮಾಡ್ತೇನೆ. ಒಂದು ವರ್ಷ ಹೀಗೆ ದೂಡಿದರಾಯ್ತು. ಮತ್ತೆ ಬೊಂಬಾಯಿಯೂ ಬೇಡ, ಮಲೆಯಾಳವೂ ಬೇಡ. ಇಲ್ಲೇ ಇದ್ದು ಬಿಡಬಹುದು!"

"ಏನೋ! ಬೊಂಬಾಯಿಯಂದ್ರೆ ಎಷ್ಟು ದೂರವೊ? ಸ್ಟೀಮರಿನಲ್ಲಿ ಸಮುದ್ರದ ಮೇಲೆಲ್ಲಾ ಹೋಗಬೇಕಂತಲ್ಲಾ?"

"ಆದರೇನಾಯಿತೇ? ನಾಲ್ಕು ದಿನ ಸ್ಟೀಮರಿನಲ್ಲಿ ಕೂತರಾಯಿತು ಬೊಂಬಾಯಿ! ಬೇಕಾದರೆ ತಿಮ್ಮಣ್ಣನನ್ನು ಕೇಳು, ಏನೋ ತಿಮ್ಮಣ್ಣ? ಬೊಂಬಾಯಿ ಎಲ್ಲಿದೆಯೊ? ನೀನು ಮ್ಯಾಪ್ ಬಿಡಿಸುತ್ತಿಯಲ್ಲ?"

ಆಗ ಅಲ್ಲಿದ್ದ ತಿಮ್ಮಣ್ಣ:—"ಹೌದಪ್ಪಾ. ನಿನ್ನೆ ತಾನೇ ಮಾಸ್ತರು ಬೊಂಬಾಯಿ ಭೂಗೋಲ ಶುರು ಮಾಡಿದ್ದಾರೆ. ನನ್ನ ಪಾಠ ಪುಸ್ತಕದಲ್ಲಿ ಮ್ಯಾಪ್ ಉಂಟು. ಅದರಲ್ಲಿ ಬೊಂಬಾಯಿ ಇಲ್ಲಿಗೆ ದೂರ ಬಡಗು ದಿಕ್ಕಿನಲ್ಲಿ ಸಮುದ್ರದ ಬದಿಯಲ್ಲಿ ಉಂಟು."

"ಸಮುದ್ರದ ಬದಿಯಲ್ಲಿಯಾ— ಅಲ್ಲ, ಸಮುದ್ರದ ನಡುವಿನಲ್ಲಿಯಾ?" ಎಂದಳು ಜಲಜಮ್ಮ.

"ಸಮುದ್ರದ ಬದೀಲೇ ನಮ್ಮ ಭೂಮಿಗೆ ತಾಗಿಕೊಂಡೇ ಉಂಟಮ್ಮ." ತಿಮ್ಮಣ್ಣನೆಂದನು.

ಆಗ ಪದ್ಮನಾಭೈಯ:— "ಮಂಗಳೂರಿನಿಂದ ರೈಲಿನಲ್ಲಿ ಕೂಡಾ ಹೋಗಬಹುದು ಬೊಂಬಾಯಿಗೆ. ಆದರೆ ಅದು ತುಂಬಾ ಸುತ್ತಾಗಿ ಹೋಗುವುದರಿಂದ, ಸ್ಟೀಮರಿನಲ್ಲಿ ಸೀದಾ ಹೋಗುತ್ತದೆ."

"ನಿಮಗೆ ಸ್ಟೀಮರಿನಲ್ಲಿ ಕೂತು ಅಭ್ಯಾಸವುಂಟೆ? ತಲೆಗೀಲೆ ಸುತ್ತಿದರೆ?"

"ಅದೇನೂ ನನಗೆ ಆಗುವುದಿಲ್ಲ. ತಿರುವಾಂಕೂರಿಗೆ ಹೋಗುವಾಗ ಎಷ್ಟೋ ಸಾರಿ ಸ್ಟೀಮರಿನಲ್ಲಿ ಕೂತಿದ್ದೇನೆ."

"ಏನೋ ನನಗೇನು ಗೊತ್ತು! ಹೇಳಿದ್ದಕ್ಕೆಲ್ಲಾ ಹೀಗೇ ಏನಾದರೂ ಹೇಳ್ತೀರಿ! ಹೆಂಗುಸಿನ ಮಾತು ಕೇಳ್ತೀರಾ ನೀವು?"

ಪತಿಯ ನಿರ್ಧಾರವನ್ನು ಚೆನ್ನಾಗಿ ಬಲ್ಲ ಜಲಜಮ್ಮ ನಿರಾಶೆಯಿಂದ ಒಂದು ನಿಟ್ಟುಸಿರನ್ನು ಬಿಟ್ಟು ಸುಮ್ಮನಾದಳು. ಅವರು ಎಷ್ಟೋ ಬಾರಿ ಮಲೆಯಾಳಕ್ಕೆ ಹೋಗಿದ್ದಾರೆ,ಬಂದಿದ್ದಾರೆ;ಆಗ ಅವಳಿಗೆ ಹೀಗೆಲ್ಲ ಏನೂ ಭೀತಿಯುಂಟಾಗಿರಲಿಲ್ಲ. ಈಗ ಬೊಂಬಾಯಿ ಎಂಬ ಹೆಸರು ಕೇಳಿ ಅದೇನೋ-ಅದೇಕೋ-ಧೈರ್ಯವೇ ಬರಲೊಲ್ಲದು ಅವಳಿಗೆ! ಪಾಪ! ಯಾವಾಗಲೂ ಆ ಗ್ರಾಮಕ್ಕೆ ಪಡುಗಡಲಿನ ಆರ್ಭಟೆ ಕೇಳುತ್ತಲೇ ಇತ್ತು. ಅದರಲ್ಲೇನೂ ವಿಶೇಷವೆನಿಸಿರಲಿಲ್ಲ. ಈಗ ಅದೊಂದು ಭಯಂಕರವಾಗಿ ಅವಳ ಕಿವಿಗೆ ಬೀಳುತ್ತಿತ್ತು. ಬೇಡಬೇಡೆಂದರೂ ಆ ಕಡಲಿನ ಚಿತ್ರವು ಅವಳ ಕಣ್ಮುಂದೆ ಬಂದು ಬಂದು ನಲಿಯುತ್ತಿದ್ದಿತು. ಪಶ್ಚಿಮ ದಿಗಂತವನ್ನು ಚುಂಬಿಸುವ ಆ ಕಡಲನ್ನು ಕಂಡರೆ ಏಕೋ ಬಲು ದಿಗಿಲು! ಅದರ ಮೇಲೆ ಕುಳಿತ ಲ್ಲವೇ ಪದ್ಮನಾಭೈಯ ಬೊಂಬಾಯಿಗೆ ಹೋಗುವುದು! ಎಲ್ಲಿಯಾದರೂ ಆ ತೆರೆಯನಾಲಗೆಗಳು ಅವರನ್ನು ನೆಕ್ಕಿ ಬಿಟ್ಟರೆ............!

ತಲೆಗಲ್ಲ ಮಹಾದೇವಾಲಯದ ಹೊರ ಅಂಗಣದಲ್ಲಿ ನಿಂತು ನೋಡಿದರೆ ಆ ದೇವಾಲಯವಿರುವ ಗುಡ್ಡದ ಬುಡದಲ್ಲಿ, ಭೂಮಿಯನ್ನು ನುಂಗಲು ಮುಂಬರುವ ಪ್ರಳಯ ಜಲರಾಶಿಯಂತೆ ಭೋರ್ಗರೆಯುತ್ತಿತ್ತು ಆ ಕಡಲು. ಅದರ ಪ್ರಬಲ ಭಯಾನಕವಾದ ಹೆದ್ದೆರೆ ಹಾಯ್ದೆರೆಗಳೊಂದಿಗೆ ಎಡೆಬಿಡದೆ ಹೋರಾಡುತ್ತ, ಕಡಲು ಮುಂಬರದಂತೆ ತಡೆದುಕೊಂಡಿದ್ದುವು, ನೂರಾರು ಹಿರಿಯಕಿರಿಯ ಬಂಡೆಗಳು! ಎಲ್ಲರೂ ಅಲ್ಲಿ ನಿಂತು ಆ ಕಡಲ ಸೊಬಗಿನ ವೈಭವವನ್ನೂ ಅದರಲ್ಲಿ ಸ್ನಾನಕ್ಕಿಳಿಯಲು ತಯಾರಾಗಿ ಸಂಜೆಯ ಕೆಮ್ಮಡಿಯನ್ನುಟ್ಟು ಚೆಂಗಿರಣಗಳಿಂದ ನೋಡುತ್ತಿರುವ ಸೂರ್ಯನನ್ನೂ ನೋಡುತಿದ್ದರು. ಆದರೆ ಜಲಜಮ್ಮ ಅದನ್ನು ನೋಡಲಾರದೆ ಅತ್ತ ಹೊರಟು

ಹೋದಳು. ಪದ್ಮನಾಭೈಯ್ಯ ಪುಟ್ಟನನ್ನೆತ್ತಿಕೊಂಡು ಅವನಿಗೆ ಕಡಲನ್ನು ತೋರಿಸುತ್ತಾ ಅಲ್ಲಿಯೇ ನಿಂತಿದ್ದರು. ಬಳಿಯಲ್ಲಿ ತಿಮ್ಮಣ್ಣನೂ ನಿಂತಿದ್ದನು. ಆ ದಿನ ರಥೋತ್ಸವ. ರಥೋತ್ಸವದಲ್ಲಿ ಮೆರೆದ ಮಹಾ ದೇವನಿಗೆ ಹಣ್ಣು ಕಾಯಿ ಮಾಡಿದ ಪ್ರಸಾದವು ತಿಮ್ಮಣ್ಣನ ಕೈಯಲ್ಲಿರುವ ಚಿಕ್ಕ ಬಟ್ಟೆಯ ಗಂಟಿನಲ್ಲಿತ್ತು.

"ತಿಮ್ಮು! ಹೀಗೇ ಈ ಸಮುದ್ರದ ಚಿತ್ರವನ್ನು ಬಿಡಿಸಲಿಕ್ಕೆ ಸಾಧ್ಯವೋ ನಿನ್ನಿಂದ ಬಣ್ಣಗಿಣ್ಣ ಕೊಟ್ಟು?"

"ಓ! ಬಿಡಿಸುತ್ತೇನೆ ಅಪ್ಪಾ!—" ತಿಮ್ಮಣ್ಣ ತದೇಕಚಿತ್ತನಾಗಿ ನೋಡುತ್ತ ಹೇಳಿದನು.

"ಹೇಗೆ ಬಿಡಿಸುತ್ತಿ?"—ತಂದೆ ಕೇಳಿದರು.

"ಶುರೂ ಪೆನ್ಸಿಲಿನಿಂದ ಬಿಡಿಸುತ್ತೇನೆ. ಮುಂದಿನಿಂದ ತೆಂಗಿನ ಮರಗಳು. ಅವುಗಳ ಮಡಲುಗಳ ಎಡೆಯೆಡೆಯಿಂದ ಸಮುದ್ರವು ಕಾಣುತ್ತದೆ. ಸಮುದ್ರದ ಕೊನೆಗೆ ತಾಗಿಕೊಂಡು ಕೆಂಪಾದ ಸೂರ್ಯ. ನೋಡಿ ಅಪ್ಪಾ! ಆ ಸೂರ್ಯ ಇದ್ದಲ್ಲಿಂದ ಕೆಂಪು ಕೆಂಪು ಬಿಸಿಲ ಪ್ರಕಾಶ ಹೇಗೆ ಸಮುದ್ರದಲ್ಲಿ ಚೆಲ್ಲಿಕೊಂಡು ಹೊಳೆಯುತ್ತದೆ! ಕುಣಿಯುತ್ತದೆ! ಅದೇ ಸ್ವಲ್ಪ ಕಷ್ಟ! ಬೆಳ್ಳಗಿನ ತೆರೆಗಳ ತಲೆಯೆಲ್ಲಾ ಕೆಂಪಾಗಿ ಹೊಳೆಯಿಸಬೇಕು. ಆಕಾಶ ಬಹಳ ಸುಲಭ. ಕೆಂಪು, ನೀಲ, ಕಿತ್ತಳೆ ಬಣ್ಣದಿಂದ ಅದನ್ನು ಮಾಡಿಬಿಡಬಹುದು! ಅಗೊಳ್ಳಿ! ಅಪ್ಪಾ! ಅಲ್ಲೊಂದು ಸ್ಟೀಮರು! ಹೇಗೆ ಹೋಗುತ್ತದೆ ಹೊಗೆ ಬಿಟ್ಟುಕೊಂಡು!..............."

ಪದ್ಮನಾಭೈಯ ಪುಟ್ಟನಿಗೆ ಆ ಸ್ಟೀಮರನ್ನು ತೋರಿಸುತ್ತ—"ನೋಡಿದಿಯಾ ಪುಟ್ಟೂ ಸ್ಟೀಮರು? ಕಪ್ಪುಕಪ್ಪಾದ ಹೊಗೆ!"

ಪುಟ್ಟ:—"ಹಾ! ಹಾ! ಹಾ! ನೀವು ಅದರಲ್ಲೇ ಹೋಗುವುದಾ ಅಪ್ಪಾ?"

ಪದ್ಮ:—"ಅಂಥಾದ್ದರಲ್ಲೇ ಹೋಗೋದು!"

"ಅಪ್ಪಾ! ಈ ಸ್ಟೀಮರು ಬೊಂಬಾಯಿಯಿಂದ ಮಂಗಳೂರಿಗೆ ಹೋಗುವುದಂತ ಕಾಣುತ್ತದೆ!" ಎಂದು ತಿಮ್ಮಣ್ಣನಂದನು.

ಪದ್ಮ:—"ಹೌದು. ಹಾಗೇ ಕಾಣುತ್ತದೆ."

ಪುಟ್ಟ:—"ಅಪ್ಪಾ! ಓ ಅಲ್ಲಿ ಸೂರ್ಯ ಮುಳುಗುತ್ತಾನಲ್ಲಾ ಸಮುದ್ರಕ್ಕೆ ಬಿದ್ದು,—ಅದರಾಚೆಗೆ ಕತ್ಲೇಲಿ ಉಂಟಾ ಬೊಂಬಾಯಿ?"

ಪದ್ಮ:—"ಇಲ್ಲಿಲ್ಲ! ಈಚೆಗೆ ಸಮುದ್ರದ ಬದೀಲೇ ಉಂಟು!"

ಪುಟ್ಟ:—ಮೂಡು ದಿಕ್ಕಿನಲ್ಲ್ಯಾ?

ಪದ್ಮ:—"ಬಡಗು ದಿಕ್ಕಿನಲ್ಲಿ!"

ಪುಟ್ಟ:—"ಆ! ಅಜ್ಜಿಮನೆ ಶಾಲೇಲಿ ಮಾಸ್ತ್ರು ಹೇಳಿದ್ದಾರೆ ಬಡಗು ದಿಕ್ಕಿನಲ್ಲಿ ಧ್ರುವನಕ್ಷತ್ರ ಉಂಟಂತೆ ಫಳಫಳಾಂತ! ಅಪ್ಪಾ! ಬೊಂಬಾಯಿ ಧ್ರುವ ನಕ್ಷತ್ರದ ಆಚೆಗಾ—ಈಚೆಗಾ?"

ಪದ್ಮ:—"ಧ್ರುವ ನಕ್ಷತ್ರ ಬಡ್ಲಾಗಿ ಆಕಾಶದಲ್ಲಿ ಉಂಟು. ಬೊಂಬಾಯಿ ಇಲ್ಲಿಗೆ ಹತ್ತಿರ."

ಪುಟ್ಟ:—"ಓಹೊ! ನಂಗ ಅದು ಮಾಸ್ತ್ರು ಹೇಳ್ಲಿಲ್ಲ. ಅಪ್ಪಾ, ನೀವು ಬೊಂಬಾಯಿಯಿಂದ ಬರುವಾಗ ನಂಗೊಂದು ಕೆಂಪು ಟೊಪ್ಪಿ, ಅಣ್ಣನಿಗೊಂದು ಬಣ್ಣದ ಪೆನ್ಸಿಲ್ ತರಬೇಕು!"

ಪದ್ಮ:—"ಓ! ಬೇಕಾದ್ದೆಲ್ಲಾ ತರುವ. ನೀನು ಚೆನ್ನಾಗಿ ಕಲ್ತು, ನನಗೆ ಬರಿ!"

ಪುಟ್ಟ:—"ಓ ಬರಿತೇನಪ್ಪಾ!"

ಸಾಯಂಕಾಲವಾಗುತ್ತಾ ಬರುವಾಗ, ಪದ್ಮನಾಭೈಯ ತಲೆಗಲ್ಲ ದೇವಾಲಯದಿಂದ ಸಕುಟುಂಬರಾಗಿ ಮನೆಗೆ ಹಿಂದಿರುಗಿದರು. ಪುಟ್ಟ ಆಗಾಗ "ಸಮುದ್ರದಲ್ಲಿ ಸ್ಟೀಮಾರು ನೋಡಿದೆ. ಅದರಲ್ಲೇಂತೆ ಅಪ್ಪ ಹತ್ತಿಕೊತು ಬೊಂಬಾಯಿಗೆ ಹೋಗೋದು" ಎಂದು ಹೇಳುತ್ತಿದ್ದನು. ಆಗ ಜಲಜಮ್ಮನ ಮೈಯೊಳಗೆ ಏನೋ ಒಂದು ನಡುಕವಾಗುತ್ತಿದ್ದಿತು. ಆದರೂ ಅವಳಿಂದ ನಿವಾರಿಸಲು ಅಸಾಧ್ಯವಾದ ಪ್ರಯಾಣವದು!............. ಗೊತ್ತುಮಾಡಿದ ದಿನವೂ ಬಂತು. ಪದ್ಮನಾಭೈಯ ಹೊರಟೂ ಹೋದರು ಬೊಂಬಾಯಿಗೆ!

## ೨೯

"ತಿಮ್ಮಪ್ಪ! ಇಲ್ಲಿ ಬಾರಪ್ಪ!" ಎಂದು ವೆಂಕಟರಾಯ ಮಾಸ್ತರರು ನಡುಗುವ ದನಿಯಿಂದ ಮೆಲ್ಲನೆ ಕರೆದರು.

ಬೆಳಗ್ಗೆ ಹತ್ತು ಗಂಟೆಯ ಸಮಯ. ಶಾಲೆಯಲ್ಲಿ ಪಾಠವು ಜರಗುತ್ತಾ ಇತ್ತು. ತಿಮ್ಮಣ್ಣನು ಎಂದಿನಂತೆ ತನ್ನ ಕ್ಲಾಸಿನಲ್ಲಿ ಕುಳಿತಿದ್ದನು. ಅಂದು ವೆಂಕಟರಾಯ ಮಾಸ್ತರು ಏಕೋ ಬಹಳ ತಡವಾಗಿ ಆಗತಾನೇ

ಶಾಲೆಗೆ ಬಂದಿದ್ದರು. ಅವರ ನಗುಮೊಗವು ಅಳುಮೊಗವಾಗಿತ್ತು; ಬಾಡಿತ್ತು; ಕಂದಿತ್ತು.

ಅವರ ಆ ವಿಕಳ ಮುಖದ ಕರೆಯನ್ನು ಕೇಳಿ ತಿಮ್ಮಣ್ಣ ಬೆರಗು ವಡೆದು ಅವರ ಬಳಿಗೆ ಹೋದನು. ಕೂಡಲೇ ಆ ಮಾಸ್ತರರ ಕಣ್ಣಿನಲ್ಲಿ ತಡೆದುನಿಂತಿದ್ದ ನೀರು ಕೆಳಗೆ ಸುರಿಯಿತು. ಅವರೇನೋ ಕಲ್ಲುಂಡೆಯನು ನುಂಗಿಕೊಂಡಹಾಗೆ, ತಿಮ್ಮನ ಹೆಗಲನ್ನು ಹಿಡಿದು ಗದ್ಗದ ದನಿಯಿಂದ— "ತಿಮ್ಮು! ನೀನು ನಿನ್ನ ಸಂಚಿಯನ್ನು ತೆಗೆದುಕೊಂಡು ಮನೆಗೆ ಹೋಗು. ತಂಗಿಯನ್ನೂ ಕರೆದುಕೊಂಡು ಹೋಗು........."ಎಂದರು.

ತಿಮ್ಮ ಎಂಜಲುನುಂಗಿ—"ಏಕೆಸರ್? ಏನಾಯಿತು?"

"ಏನೋ............ಹೆದರಬೇಡ. ತಂತಿಯೆನೋ ಬಂದಿದೆಯಂತೆ ನಿನ್ನ ಮನೆಗೆ!.........."

"ತಂದೆಯದೆ? ಅವರಿಗೆ ನಾನು ಮೊನ್ನೆತಾನೇ ಕಾಗದ ಹಾಕಿದ್ದೇನೆ ಸರ್."

"ದೇವರು ಕೆಟ್ಟ ಸಮಾಚಾರವನ್ನು ಸುಳ್ಳಾಗಿಸಲಿ! ಯಾವುದಕ್ಕೂ ನೀನು ಧೈರ್ಯದಿಂದ ಮನೆಗೆ ಹೋಗಪ್ಪ."

ತಿಮ್ಮಣ್ಣನು ಕಮಲೆಯನ್ನು ಕರೆದುಕೊಂಡು ಮನೆಗೆ ಹೊರಟನು. ಕಮಲೆ—"ಏಕಣ್ಣಾ? ಏನಾಯ್ತು? ಈವತ್ತು ಬೇಗ ಮನೆಗೆ ಯಾಕೇ ......ಅಣ್ಣಾ!......"

"ಬಾ! ಕಮಲಾ! ಸುಮ್ಮನೆ ಬಾ! ಯಾಕೋ ನಂಗೇನು ಗೊತ್ತು? ........."

"ಅಣ್ಣಾ! ........ ನೀನೊಂದು ನಮೂನೆಯಾಗಿದ್ದಿಯಲ್ಲ! ......" ಮನೆಗೆ ನಡೆಯುವಾಗ ಕಮಲೆ ಇನ್ನೂ ಅನೇಕ ಪ್ರಶ್ನೆಗಳನ್ನು ಕೇಳುತ್ತಲೇ ಇದ್ದಳು. ತಿಮ್ಮನು ಭಾವಜೀವಿಯಾಗಿರಬೇಕೆಂದು ತೋರುತ್ತದೆ. ಕಾರಣ ಅವನೇನೂ ಮಾತುಸಿರಲಿಲ್ಲ. ಅವನ ಮನಸ್ಸು ಸಮುದ್ರದ ಮೇಲಿನಿಂದಾಗಿ ಬೊಂಬಾಯಿಯ ವರೆಗೆ ಹೋಗಿತ್ತು. ತಂದೆಯನ್ನು ಕುರಿತು ನಾನಾಕಲ್ಪನೆ ಯನ್ನು ತಾಳುತ್ತಿತ್ತು. ಅವನ ಅಕ್ಕರೆಯ ಅಚ್ಚುಮೆಚ್ಚಿನ ತಂದೆಯಲ್ಲವೇ? ........

ಅವರು ಅಂದು—ಈಗ್ಗೆ ಇಪ್ಪತ್ತೆರಡು ದಿವಸಗಳ ಹಿಂದೆ, ಕಟ್ಟೆಬೆಟ್ಟಿ ನಲ್ಲಿ ಸ್ವಂತ ಮನೆಯಲ್ಲೇ ಇದ್ದರು. ಬೊಂಬಾಯಿಗೆ ಹೊರಡುವ ಸಮ

ಯವು ತೀರ ಸಮೀಪವಾಗುತ್ತಿದ್ದಿತು. ಹೊರಡುವ ದಿನ ಬ್ರಾಹ್ಮಿಮುಹೂರ್ತದಲ್ಲಿಯೇ ಎದ್ದು ಪಕ್ಕದಲ್ಲಿ ಮಲಗಿದ್ದ ತಿಮ್ಮನ ಮೇಲೆ ಕೈಯಾಡಿಸುತ್ತ–"ತಿಮ್ಮು! ಎಚ್ಚರಿಕೆಯುಂಟೇನೋ?" ಎಂದು ಕೇಳುವಾಗ, ಅವರು ಹೊರಡುವರೆಂಬ ವಿಚಾರದ ಗುಂಗಿನಲ್ಲೇ ಮಲಗಿದ್ದ ತಿಮ್ಮನಿಗೆ ಅವರ ಆ ದನಿಯನ್ನು ಕೇಳಿದೊಡನೆಯೇ ಎಚ್ಚರಿಕೆಯಾಗಿ, "ಅಪ್ಪ, ಹೊತ್ತಾಯಿತೆ?" ಎನ್ನುತ್ತ ಅವನು ಎದ್ದು ಕುಳಿತುದು, ತಂದೆ ಮಸುಕು ಮಸುಕಾದ ನಕ್ಷತ್ರದ ಬೆಳಕಿನಲ್ಲಿಯೇ ಸ್ನಾನಕ್ಕೆ ಬಾವಿಕಟ್ಟೆಗೆ ಹೋದಾಗ, ತಿಮ್ಮಣ್ಣನು ಬೈರಾಸನ್ನು ಹಿಡಿದುಕೊಂಡು ಅವರ ಹಿಂದೆಯೇ ಹೋಗಿ ಹಲ್ಲು ತಿಕ್ಕಿದುದು, ಆಗ ತಂದೆ ಅವನಿಗೆ ತುಂಡು ತುಂಡಾಗಿ ಬುದ್ಧಿ-ನೀತಿಗಳನ್ನು ಹೇಳುತ್ತಾ ಸ್ನಾನ ಮಾಡಿದುದು, ಅನಂತರ "ಶ್ರೀಕೃಷ್ಣಃ ಕಮಲಾನಾಭೋ–" ಎಂದು ಮಂತ್ರಗಳನ್ನು ಉಚ್ಚರಿಸುತ್ತ, ದೇವರ ಕೋಣೆಗೆ ಬಂದು, ಪೂಜೆಗೆ ಕುಳಿತುದು, ಆಗ ತಿಮ್ಮಣ್ಣ ಆರತಿಗೆ ಬತ್ತಿ ಹಾಕಿದುದು, ಗಂಧ ಅಕ್ಷತೆ ತೇದಿ ಕೊಟ್ಟುದು, ಗಂಟೆ ಬಡೆದುದು, ಹೀಗೆ ಪೂಜೆ ಮುಗಿದ ನಂತರ ತಾಯಿ ತಂದಿಟ್ಟ ಒಗ್ಗರಣೆಯವಲಕ್ಕಿ ಕೊತ್ತಂಬರೀ ಕಾಫಿಯನ್ನೂ ತೆಗೆದುಕೊಳ್ಳುತ್ತಾ ತಿಮ್ಮಣ್ಣನಿಗೂ ಅವರೇ ಒತ್ತಾಯದಿಂದ ಅವಲಕ್ಕಿಯನ್ನು ಬಾಯಿಗೆ ಹಾಕಿದುದು, ಅಪ್ಪ ಮತ್ತೂ ಮತ್ತೂ ಒತ್ತಾಯಿಸಲು—"ನನಗೆ ಬೇಡಪ್ಪ. ನಾನು ಗಂಜಿಯೂಟ ಮಾಡುತ್ತೇನಲ್ಲಾ-ನೀವೇ ತಿನ್ನಿ!" ಎಂದು ಅವನು ದೂರ ಹೋಗಿ ಕುಳಿತುದು, ಆಗ ಅಪ್ಪ ನಿದ್ರೆಯಲ್ಲಿ ಮುಳುಗಿದ್ದ ಪುಟ್ಟನ ಮುದ್ದು ಮುಖವನ್ನು ದಿಟ್ಟಿಸಿದಾಗ, ತಾಯಿ-"ಪುಟ್ಟನ್ನ ಎಬ್ಬಿಸಲಿಯಾ?" ಎಂದು ಕೇಳಿದುದಕ್ಕೆ--"ಬೇಡ ಬಿಡು, ನಾನು ಹೊರಡುವಾಗ ಅತ್ತಾನು. ಅವನಿಗೆ ಅವಲಕ್ಕಿ ತೆಗೆದಿಟ್ಟಿದ್ದಿಯಾ?" ಎಂದು ಕೇಳಿದುದು,-"ಹೌದು" ಎಂದು ತಾಯಿ ಹೇಳಿದುದು, ತಂದೆಗೆ ಹೆದರುವವಳಾದ ಕಮಲೆ, ಪೂಜೆಯ ಘಂಟೆಯ ಝೇಂಕಾರವನ್ನು ಕೇಳಿ, ಎಚ್ಚತ್ತು ಒಂದು ಮೂಲೆಯಲ್ಲಿ ಹೆದರಿಕೊಂಡು ಕುಳಿತು, ಅಪ್ಪನ ಚರ್ಯೆಗಳನ್ನು ಪಿಳಿಪಿಳಿ ನೋಡುತ್ತಾ ಇದ್ದವಳನ್ನು ಅಪ್ಪನು ನೋಡಿ, "ಇಲ್ಲಿ ಬಾರೇ ಕಮಲೂ!" ಎಂದು ಪ್ರೀತಿಯಿಂದ ಕರೆದುದು, ಅತ್ಯಪೂರ್ವವಾದ ತಂದೆಯ ಪ್ರೀತಿಯ ಕರೆಯನ್ನು ಕೇಳಿ ಕಮಲೆ ಆಶ್ಚರ್ಯದಿಂದ ಬೆಪ್ಪಾದುದು, ಆಗ ತಂದೆ ಅವಳನ್ನು ಎತ್ತಿ ತನ್ನ ಪಕ್ಕದಲ್ಲಿ ಕೂಡಿಸಿಕೊಂಡು ಅವಳು ಬೇಡೆಂದು ಮುಖವನ್ನು ತಗ್ಗಿಸಿದರೂ, ಅವಳ ಬಾಯಿಗೆ ಒಗ್ಗರಣೆಯವಲಕ್ಕಿಯನ್ನು ತುರುಕಿ ಮುದ್ದಿಸಿದುದು, ಈ ವರೆಗೂ ಇಲ್ಲದ ಅಪ್ಪನ ಆ

ವರ್ತನೆಯಿಂದ ಕಮಲೆ ತೀರ ಬೆಪ್ಪಾಗಿ ಮತ್ತೆ ಮೂಲೆಸೇರಿ ಅಡಗಿದುದು, ಅದನ್ನು ನೋಡಿ ತಾಯಿ "ಮತ್ತೆ ನೀವು ಯಾವಾಗಲೂ ಹೆದರಿಸಿ ಹೆದರಿಸಿ ಇಟ್ಟಿದ್ದಿರಿ ಅವಳನ್ನ!" ಎಂದುದು, ಆ ಮೇಲೆ ತಂದೆ ತಾಯಿಯೊಂದಿಗೆ ರಂಗು ರಂಗಾಗಿ ಮಾತಾಡುತ್ತ, ದುಃಖವು ತುಂಬಿದ ತಾಯಿಯ ಮುಖದಲ್ಲಿ ನಗುವಿನ ತೆರೆಯನ್ನು ಎಬ್ಬಿಸಿದಾಗ, ಮುಂಜಾನೆಯು ತಂಗಾಳಿಗೆ ತಲೆಯಾಡಿಸುವ ಚಿಮುಣೀ ದೀಪದ ಬೆಳಕಿನಲ್ಲಿ ಗೋಡೆಯ ಮೇಲೆ ಬಿದ್ದಿದ್ದ ಅವರ ನೆರಳುಗಳೂ ನಕ್ಕಂತೆ ಆಡುತಿದ್ದುದು, ತಂದೆ ಆಗಾಗ ಮನೆವಾರ್ತೆ ವಿಷಯಗಳನ್ನು ಕುರಿತು "ಹಾಗೆ ಮಾಡು, ಹೀಗೆ ಮಾಡು." ಎಂದು ತಾಯಿಗೆ ತಿಳಿಯ ಹೇಳುತ್ತ, ಅವಳ ಚಿಂತೆಗೆ ಸಮಾಧಾನ ಮಾಡಿದುದು, ಆ ಮೇಲೆ ಅವರು ದೂರದ ಪಯಣವೆಂಬುದನ್ನು ಬಹಿರಂಗಪಡಿಸುವ ದೊಡ್ಡ ಧೋತ್ರವನ್ನು ಕಚ್ಚೆಹಾಕಿ ಉಡುತ್ತಾ, ಅಂಗಿಯನ್ನು ಹಾಕಿಕೊಳ್ಳುತ್ತಾ, ಕೋಟನ್ನು ತೊಡುತ್ತಾ, ಮುಂಡಾಸನ್ನು ಕಟ್ಟಿಕೊಳ್ಳುತ್ತಾ, ತಿಮ್ಮಣ್ಣನನ್ನು ಕುರಿತು— "ಸರಿಯಾಗಿ ಓದು. ಅಮ್ಮ ಹೇಳಿದಹಾಗೆ ಕೇಳು. ತಂಟೆಗಿಂಟೆ ಮಾಡಬೇಡ. ನನಗೆ ಕಾಗದ ನೀನೇ ಬರಿ. ವಿಳಾಸ ಕೂಡಾ ನೀನೇ ಬರಿಯಬೇಕು. ನಾನು ಹೋದಕೂಡಲೇ ನಿನ್ನ ಹೆಸರಿಗೇ ಕಾಗದ ಹಾಕುತ್ತೇನೆ....." ಎಂದು ಮುಂತಾಗಿ ನಾನಾ ಉಪದೇಶಗಳನ್ನು ಮಾಡಿದುದು, ಆ ಮೇಲೆ ಅವರು ದೇವರಿಗೆ ಸಾಷ್ಟಾಂಗ ನಮಸ್ಕಾರ ಮಾಡಿ ಎದ್ದು, ತಿಮ್ಮಣ್ಣನನ್ನು ಅಪ್ಪಿ ಎತ್ತಿ ಕೆಳಗಿಟ್ಟು, ಕಮಲೆಯನ್ನು ಹಾಗೆಯೇ ಎತ್ತಿ ಮುದ್ದಿಸಿ ಕೆಳಗಿಟ್ಟು, ನಿದ್ರಿಸುತ್ತಿರುವ ಪುಟ್ಟನ ಮುದ್ದು ಮೊಗವನ್ನೊಮ್ಮೆ ಮುದ್ದಿಸಿ, ತೊಟ್ಟಿಲಲ್ಲಿ ಮಲಗಿದ್ದ ಶಿಶು ಮಾಲಕ್ಷ್ಮಿಗೂ ಒಂದು ಸಣ್ಣ ಮೃದುವಾದ ಮುತ್ತನ್ನಿತ್ತು, ತಾಯಿ–ದೊಡ್ಡಮ್ಮ–ತಿಮ್ಮಣ್ಣ–ಕಮಲೆಯರಿಂದ ಬೀಳುಕೊಂಡುದು, ಆಗ ಎಲ್ಲರ ಗಂಟಲಲ್ಲಿಯೂ ಅನೇಕ ಮಾತುಗಳು ತುಂಬಿಕೊಂಡಿದ್ದರೂ, ಅವೆಲ್ಲ ಒಂದಕ್ಕೊಂದು ಒತ್ತಿಕೊಂಡ ಹಾಗಾಗಿ ಅಲ್ಲೆಲ್ಲ ಒಂದು ಮೌನ ಮುದ್ರೆಯೇ ಕವಿದುದು, ಕಣ್ಣೀರು ಕೆಳಗಿಳಿಯದಂತೆ ಇಂಗಿಸಿಕೊಳ್ಳುತ್ತಿದ್ದ ತಾಯಿ, ಕಟ್ಟಕಡೆಗೆ ಬಹು ಕಷ್ಟದಿಂದ ತುಂಡು ತುಂಡು ದನಿಯಿಂದ—"ಆಗಾಗ... ಕಾ...ಗದ...ಹಾ...ಕಿ" ಎಂದು ಅರ್ಥವಾಗದಂತೆ ಹೇಳಿದುದು. "ಹುಂ. ಬರು...ತ್ತೇನೆ. ಜಾ...ಗ್ರತೆ!" ಎಂದು ತಂದೆಯೂ ಗದ್ಗದಿಸಿದುದು, ಆಗ ಅವರ ಕಣ್ಣಿನಲ್ಲಿಯೂ ನೀರು ತುಂಬಿದಂತೆ ಆ ಚಿಮುಣೀದೀಪದ ಬೆಳಕಿನಲ್ಲಿ ಹೊಳೆದುದು, ಆ ಮೇಲೆ......ಏನು?......ಅವರು ಬಟ್ಟೆಬರೆಗಳು ಅಡಗಿ

ರುವ ಆ ಚರ್ಮದ ಬ್ಯಾಗನ್ನೂ ಊಗಾದಿಸಿಕೊಂಡು, ಜಗಲಿಯಿಂದ ಕೆಳಗಿಳಿದು ಮುಸಮುಸಕಾದ ಬೆಳಂಜಾವದ ಕತ್ತಲೆಯಲ್ಲಿ ತೋಟವನ್ನು ದಾಟಿ ಹೋಗುವಾಗ ತಾಯಿ-ತಿಮ್ಮಣ್ಣಂದಿರು ಅಲ್ಲಿಯ ವರೆಗೂ ಹಿಂಬಾಲಿಸಿದುದು, ಆ ಮೇಲೆ ತಾಯಿಗೆ ಶೂನ್ಯವಾದಂತಾದುದು, ಅವಳು ಏನೂ ಮಾಡದೆ ಮನೆಯ ಚಾವಡಿಯ ಹೊಸ್ತಿಲಬುಡದಲ್ಲಿ ಸುಮ್ಮನೆ ಕುಳಿತುದು, ಬೈಲಕರೇ ದೊಡ್ಡಮ್ಮನೇ ತಿಮ್ಮಣ್ಣ ಮೊದಲಾದವರಿಗೆ ಗಂಜಿ ಬಡಿಸಿದುದು, ಆಕಳು ಹಿಂಡಿದುದು, ಆಗ ಬೊಂಬೆಯ ಹಾಗೆ ಕುಳಿತಿದ್ದ ತಾಯಿ ಫಕ್ಕನೆ ಎದ್ದು-"ಅಕ್ಕಾ! ಯಾರನ್ನಾದರೂ ಮಂಗಳೂರಿಗೆ ಕಳಿಸಿ, ಅವರನ್ನು ಸ್ಟೀಮರು ಹತ್ತಲಿಕ್ಕೆ ಬಿಡದೆ ಮನೆಗೆ ಕರೆದುಕೊಂಡು ಬರಬಾರದೆ?" ಎಂದು ಆರ್ತಸ್ವರದಿಂದ ಕೂಗಿದುದು, ಆಗ ದೊಡ್ಡಮ್ಮ "ಹೀಗೆಲ್ಲಾ ದುಃಶಂಕೆಗಳನ್ನು ತಾಳಬಾರದೇ ಜಲಜಾ......" ಎಂದು ಅನೇಕ ವಿಧವಾದ ಮಾತುಗಳಿಂದ ಧೈರ್ಯವನ್ನಾಡಿದುದು,......ಮರುದಿನ ಸಂಕದಡಿ ಕಿಟ್ಟಯ್ಯ, ಪದ್ಮನಾಭೈಯನ ಜತೆಯಲ್ಲಿ ಹೋದವರು ಮಂಗಳೂರಿನಿಂದ ಹಿಂದಿರುಗಿ ಬಂದು "ಪದ್ಮನಾಭೈಯ ಸುಖವಾಗಿ ಸ್ಟೀಮರು ಹತ್ತಿದ್ದಾರೆ. ನಿಮಗೆ ತಿಳಿಸಬೇಕಂತ ಹೇಳಿದ್ದಾರೆ." ಎಂದು ಸಮಾಚಾರವನ್ನು ಹೇಳಿದುದು, ಅದನ್ನು ಕೇಳಿ ತಾಯಿ ಹತಾಶಳಾಗಿ ದೀರ್ಘಶ್ವಾಸವನ್ನು ಬಿಟ್ಟುದು,......ಆ ಮೇಲೆ ದಿನಕ್ರಮೇಣವಾಗಿ ವಿಯೋಗದುಃಖವು ಕಾಲೌಷಧಿಯಿಂದ ವಾಸಿಯಾಗುತ್ತಾ ಜಲಜಮ್ಮ ಧೈರ್ಯವನ್ನು ತಾಳುತ್ತಾ ಬಂದಿದ್ದಾಳೆ. ಬೊಂಬಾಯಿಯಿಂದ ಪದ್ಮನಾಭೈಯನ ಕ್ಷೇಮಪತ್ರವೂ ಬಂದಿತ್ತು. ಕ್ಷೇಮವಾಗಿ ತಮ್ಮ ಉದ್ಯೋಗಕ್ಷೇತ್ರದಲ್ಲಿದ್ದಾರೆಂದೂ ತಿಳಿದಿತ್ತು. ಜಲಜಮ್ಮನ ಮನಸ್ಥಿತಿಯೂ ತಕ್ಕಮಟ್ಟಿಗೆ ನೆಮ್ಮದಿಗೆ ಬಂದಿತ್ತು.

ಅಪ್ಪನಿಗೆ ಉತ್ತರ ಬರೆಯಬೇಕೆಂದು ತಿಮ್ಮಣ್ಣ ಶಾಲೆಯಿಂದ ಬರುವಾಗ ತಲೆಗಲ್ಲ ಪೋಸ್ಟಾಫೀಸಿನಿಂದ ಒಂದಾಣೆಯ ಕವರನ್ನು ತಂದಿದ್ದನು. ಅವನು ಹುಟ್ಟಿದ ಮೇಲೆ ಅದುವರೆಗೂ ಯಾರಿಗೂ ಕಾಗದ ಬರೆದವನಲ್ಲ. ಈ ಮೊದಲು ಮಲೆಯಾಳಕ್ಕೆ ಹೋಗಿದ್ದ ಪದ್ಮನಾಭೈಯನಿಗೆ, ಜಲಜಮ್ಮ ಬೇರೆಯವರ ಮುಖಾಂತರವಾಗಿಯೇ ಬರೆಸುತ್ತಿದ್ದಳು. ಈಗ ತಿಮ್ಮಣ್ಣನಿಗೆ ತಾನೇ ಬರೆಯಬೇಕೆಂಬ ಹುಮ್ಮಸವೂ ಕುತೂಹಲವೂ ತಿಳುವಳಿಕೆಯೂ ಉಂಟಾಗಿತ್ತು. ಈಗ ಹೊಸತಾಗಿ ಬರೆಯಬೇಕು ತಂದೆಗೆ ಪ್ರಥಮ ಪತ್ರ. ಪಾಠಪುಸ್ತಕದಲ್ಲಿ ತಂದೆಗೆ ಪತ್ರ ಬರೆಯುವ ಕ್ರಮವನ್ನು ಓದಿದ್ದಾನೆ.

ಹಾಗೆಯೇ "ತೀರ್ಥರೂಪ ತಂದೆಯವರ ಪಾದಕ್ಕೆ, ಬಾಲಕ ತಿಮ್ಮಪ್ಪಯನು ಮಾಡುವ ಸಾಷ್ಟಾಂಗ ನಮಸ್ಕಾರ"—ಎಂದು ಪ್ರಾರಂಭಿಸಿ ಬರೆದಿದ್ದನು. ಬಹಳ ಎಚ್ಚರಿಕೆಯಿಂದ ನಿಧಾನವಾಗಿ ತಾಯಿ ಹೇಳಿದ ಸಮಾಚಾರದ ಒಕ್ಕಣೆಗಳನ್ನು ಬರೆದಿದ್ದನು. "ಇತಿ ಬೇಡುವ ಆಶೀರ್ವಾದ" ಎಂದು ಮುಗಿಸಿದ್ದನು. ಬೆಳಗ್ಗೆ ಪ್ರಾರಂಭಿಸಿದ ಪತ್ರವು ಸಾಯಂಕಾಲಕ್ಕೆ ಬರೆದು ಮುಗಿದಿತ್ತು! ಕವರಿನಲ್ಲಿ ಮೇಲುವಿಳಾಸವನ್ನು ಅವನೇ ಬರೆದಿದ್ದನು. ಅವನಿಗೆ ಆಗತಾನೇ ಇಂಗ್ಲಿಷು ಪಾಠವು ಪ್ರಾರಂಭವಾಗಿತ್ತು. ಅಕ್ಷರಗಳನ್ನು ಕೂಡಿಸಿ ಹೆಸರುಗಳನ್ನು ಬರೆಯುವಷ್ಟು ತಿಳಿದೂ ತಿಳಿಯದೆಯೂ ಇತ್ತು. ಆದರೂ ತಾನೇ ಬರೆಯಬೇಕೆಂಬಷ್ಟು ಕುತೂಹಲ! ಬಹಳ ಜಾಗ್ರತೆಯಾಗಿ ತಂದೆಯ ಹೆಸರು ವಿಳಾಸಗಳನ್ನು ಬರೆದನು. ಕಡೆಯ ಪಙ್ಕ್ತಿಯಲ್ಲಿ "ಬೊಂಬಾಯಿ" ಎಂದು ಇಂಗ್ಲಿಷಿನ ದೊಡ್ಡ ದೊಡ್ಡ ಅಕ್ಷರಗಳಲ್ಲಿ ಬರೆದಿದ್ದನು. ಗೊತ್ತಿಲ್ಲದ ಹುಡುಗ, ಇಂಗ್ಲಿಷಿನಲ್ಲಿ ಬರೆದ ಅಡ್ರೆಸ್ಸು ಸರಿ ಉಂಟೋ ಇಲ್ಲವೋ ಎಂದು ಜಲಜಮ್ಮನಿಗೆ ಸಂದೇಹ. ಸರಿಯುಂಟೆಂದು ತಿಮ್ಮಣ್ಣನಿಗೆ ನಂಬುಗೆ. ಅಂತೂ ಟಪ್ಪಾಲು ಪೆಟ್ಟಿಗೆಯೊಳಗೆ ಹಾಕುವ ಮೊದಲು, ಇಂಗ್ಲಿಷು ಬಲ್ಲ ರಮೇಶ ಪೈಗೆ ತೋರಿಸಿ "ಸರಿ ಉಂಟು" ಎಂದು ಅವರಿಂದ ಹೇಳಿಸಿಕೊಂಡೇ ತಿಮ್ಮನು ಅದನ್ನು ಟಪ್ಪಾಲಿನ ಬಾಯಿಗೆ ಹಾಕಿದ್ದನು. ಆಗ ಅಡ್ರೆಸು ಬರೆಯುವಷ್ಟು ಇಂಗ್ಲೀಷು ತನಗೆ ಬಂತಲ್ಲಾ ಎಂದು ಹೆಮ್ಮೆಗೊಂಡಿದ್ದನು. ಇನ್ನು ಮೇಲೆ ತಂದೆಗೆ ತಾನೇ ಬೇಕಾದ ಹಾಗೆ ಕಾಗದ ಬರೆಯಬಲ್ಲೆನೆಂಬ ಆತ್ಮಸಂತೋಷದಿಂದ ಟಪ್ಪಾಲಿಗೆ ಹಾಕಿದ್ದನು. ಹಾಕಿ ಅಂದಿಗೆ ಐದು ದಿನವಾಗಿತ್ತು. ಇಂದೋ ನಿನ್ನೆಯೋ ತಂದೆಗೆ ಆ ಪತ್ರ ಸಿಕ್ಕಿರಬಹುದು. ನಾಳೆಯಂತೂ ಖಂಡಿತ ಸಿಕ್ಕುತ್ತದೆ. ಇನ್ನೊಂದು ನಾಲ್ಕಾರು ದಿನಗಳಲ್ಲಿ ಅವರ ಪ್ರತ್ಯುತ್ತರವು ಬಂದೀತು! ಅಷ್ಟರಲ್ಲಿ ಈಗ.......ತಂತಿ?......ತಂತಿ?......?

ಹೀಗೆ ಯೋಚಿಸುತ್ತಾ, ನಡೆಗೊಂಬೆಯಂತೆ ಶಾಲೆಯಿಂದ ಮನೆಗೆ ಬರುತ್ತಿರುವ ತಿಮ್ಮಣ್ಣನ ಕಣ್ಣುಗಳಿಂದ ಏಕೋ ಏನೋ—ಇದ್ದಕ್ಕಿದ್ದ ಹಾಗೆ ನೀರು ತುಂಬಿ ಸೂಸುತ್ತಿದ್ದಿತು. ತೋಟದೊಳಗೆ ಬರುವಾಗ ಅವನ ಯೋಚನೆಯನ್ನು ತುಂಡಾಗಿಸುವಂತೆ, ಕಲ್ಮರಗಳು ಕರಗುವಂತಹ ರೋದನ ಧ್ವನಿ ಅವನ ತಾಯಿಯ ರೋದನಧ್ವನಿ ಅವನ ಕರ್ಣಗಳನ್ನು ವೇಧಿಸಿತು! ಮಧ್ಯೆ ಮಧ್ಯೆ ಯಾರು ಯಾರೋ ದುಃಖ ಸದ್ಗದಿತವಾದ ಸ್ವರದಿಂದ ಸಮಾಧಾನಮಾಡುತ್ತಿರುವ ಶಬ್ದ! ಅವುಗಳ ನಡುವೆ ಎದೆಬಿರಿಯುವಂತಹ "ಠಣಕ್

ಫಣಕ್" ಎಂದು ಗಾಜಿನ ಬಳೆಗಳನ್ನು ಒಡೆದು ಪುಡಿಮಾಡುವ ಸದ್ದು! ಯಾರ ಬಳೆಗಳು! ಅಯ್ಯೋ! ತಿಮ್ಮಣ್ಣನಿಗೇನೋ ಆಯಿತು! ಕೂಗು ಅವನ ದೊಂಡೆಯಿಂದ ಹೊರಗೆ ಹೊರಡಲಿಲ್ಲ. ಅದು ಅವನ ಸರ್ವಾಂಗಗಳನ್ನೂ ನಡುಗಿಸಿತು! ಕಾಲುಕುಸಿಯಿತು! ಪ್ರಜ್ಞೆತಪ್ಪಿತು......

ಮರಳಿ ಪ್ರಜ್ಞೆ ಬಂದು ತಲೆ ಎತ್ತಿನೋಡಿದಾಗ, ಅವನು ಮನೆಯ ಜಗುಲಿಯಲ್ಲಿದ್ದನು. ಮಾವ–ಬಾವ–ದೊಡ್ಡಮ್ಮ–ಚಿಕ್ಕಪ್ಪ ಎಲ್ಲರೂ ನೆರೆದಿದ್ದರು. ಊರವರೂ ಬರುತ್ತಿದ್ದರು. ದರ್ಭೆಯ ಕಟ್ಟಿನೊಂದಿಗೆ ಪುರೋಹಿತ ಕೃಷ್ಣ ಭಟ್ಟರೂ ಬಂದಿದ್ದರು. "ಅಯ್ಯೋ! ಅತ್ತು ಪ್ರಯೋಜನವೇನು? ಹೋದವರು ಪುಣ್ಯಾತ್ಮರು! ತಿಮ್ಮಾ! ಮಗು! ಅಳಬೇಡಪ್ಪ. ದುಃಖವನ್ನು ನುಂಗಿಕೊ. ಹಿರಿಯ ಮಗನಾದ ನಿನಗೆ ಒಂದು ಜನಿವಾರವನ್ನು ಹಾಕಿ ಹೋಗಿದ್ದಾರಲ್ಲಾ! ಏಳಪ್ಪ! ಆದರೆ ಅಯ್ಯೋ! ದೇವರು ನಿನಗೆ ಈ ಹನ್ನೊಂದನೆಯ ವಯಸ್ಸಿನಲ್ಲಿಯೇ ತಂದೆಯ ಉತ್ತರಕ್ರಿಯೆಯನ್ನು ಹಿಡಿಸಬಾರದಿತ್ತು!......" ಎಂದು ಯಾರು ಯಾರೋ ದುಃಖಮಿಶ್ರಿತವಾಗಿ ಮಾತಾಡುತ್ತಿದ್ದರು......

## ೩೦

ಕಾಲಚಕ್ರವು ಕ್ಷಣವೂ ವಿರಾಮವಿಲ್ಲದೆ ತಿರುಗುತ್ತಲೇ ಇದೆ. ಆ ರಥಕ್ಕೆ ಎಂದಾದರೂ ವ್ಯಾಹತಿ ಉಂಟಾಯಿತೆಂದು ಯಾರಾದರೂ ಕೇಳಿರುವಿರಾ? ಪ್ರಪಂಚದ ಸುಖ ದುಃಖಾದಿ ದ್ವಂದ್ವಭಾವಗಳ ಏರುತಗ್ಗುಗಳು ಅದನ್ನೊಂದಿಷ್ಟಾದರೂ ತಡೆ-ಬಡೆ ಮಾಡಿದುದುಂಟೆ? ಅಂತಹ ನಾನಾ ರೀತಿಯ ಭಾವನಾಂತರ್ಗತವಾದ ಈ ಪ್ರಪಂಚದ ಹೃದಯದ ಮೇಲೆಯೇ ಆಪ್ತವಾಗಿ, ಆದರೂ ನಿರ್ಲಿಪ್ತವಾಗಿ ಹೋಗುತ್ತಿರುವ ಆ ಕಾಲಚಕ್ರದ ಗತಿಗೆ ಎಷ್ಟು ಆಶ್ಚರ್ಯಪಟ್ಟರೂ ಸಾಲದು. ಬಂಡಿ ಹೊರಟು ಹೋದ ಮೇಲೆ ಅದರ ಚಕ್ರಗಳ ಗೆರೆ ಮಾತ್ರ ಭೂಮಿಯಲ್ಲಿ ಮೂಡುತ್ತದಲ್ಲವೆ? ಅನಂತರ ನಾನಾ ರೀತಿಯ ಗಾಡಿಗಳೂ ಪ್ರಾಣಿಗಳೂ ನಡೆದಾಡುವುದರಿಂದ ಸ್ವಲ್ಪ ಹೊತ್ತಿಗೆಲ್ಲಾ ಆ ಗೆರೆ ಮಾಯುತ್ತಾ ಬಂದು ಬಂದು ಕಡೆಗೆ ಪೂರಾ ಅಳಿಸಿ ಹೋಗಿಬಿಡುತ್ತದೆ. ಹಾಗೆಯೇ ಪದ್ಮನಾಭೈಯನ ಮರಣ ದುಃಖವೂ ಕಾಲಚಕ್ರದಲ್ಲಿ ಅಂಟಿಕೊಂಡಿರುವ ದಿವ್ಯೌಷಧದ ಪ್ರಭಾವದಿಂದ ಕ್ರಮಕ್ರಮವಾಗಿ

ಸ್ತಿಮಿತಕ್ಕೆ ಬರುತ್ತಿದ್ದಿತು. ಮೇಲಾಗಿ ಹರಿದಾಡುತ್ತಿದ್ದ ಶೋಕರಸವು ಹೃದಯದೊಳಗೇ ಅಂತರ್ಮುಖವಾಗುತ್ತಿದ್ದಿತು. ಹೃದಯದೊಳಗಿನಿಂದಲೂ ಅಳಿಸಿ ಹೋಗತಕ್ಕ ದುಃಖವೇ ಅದು? ಅಯ್ಯೋ! ಕಣ್ಣಿಗೆ ಕಾಣದ ಊಹಾ ರಾಜ್ಯದಂತಹ ಆ ಬೊಂಬಾಯಿಗೆ ಹೋಗಿ ಇಪ್ಪತ್ತೆರಡೇ ದಿನಗಳೊಳಗೆ ಸಿಡು ಬಿಗೆ ತುತ್ತಾಗಿ ಪದ್ಮನಾಭೈಯ್ಯ ಫಕ್ಕನೆ ಪೂರಾ ಕಣ್ಮರೆಯಾಗಿ ಹೋದರೆಂದರೆ ಆ ದುಃಖವು ಬದುಕಿರುವಷ್ಟು ಕಾಲವೂ ಹೃದಯಾಂತರಾಳದಲ್ಲಿ ಸರ್ವದಾ ಕೊರೆದುಕೊಂಡಿರುವಂತಹುದೇ ಸರಿ.

ಪಾಪ! ಜಲಜಮ್ಮನ ಅವಸ್ಥೆ ಹಾಗೆಯೇ ಇತ್ತು. ಪದ್ಮನಾಭೈಯ ಕಾಯಿಲೆ ಬಿದ್ದುದನ್ನು ಕಾಣದೆ ಕೇಳದೆ, ಅವರ ಸೇವಾ ಶುಶ್ರೂಷೆಗಳನ್ನು ಮಾಡದೆ ಮುಟ್ಟದೆ, ಅವರ ಚರಮಾವಸ್ಥೆಯನ್ನು ನೋಡದೆ ನೆನೆಯದೆ, ಫಕ್ಕನೆ ತೀರಿಯೇ ಹೋದರೆಂದು ತಂತಿ ಬಂದುದರಿಂದ, ಅದು ಸತ್ಯವೇ ಆದರೂ, ಒಂದು ವೇಳೆ ಅವರು ಬದುಕಿರುವರೇನೋ!—ತಿರುಗಿ ಬರುವ ರೇನೋ!—ಎಂದೊಂದು ನಿರ್ಬಲವಾದ ಆಶೆಯ ಚಿಗುರು, ಹಸಿ ಕಟ್ಟಿಗೆಯ ಉರಿಯ ಹಾಗೆ, ಆಗಾಗ ಕಿಡಿಯೋ ಹೊಗೆಯೋ ತೋರಿ ಮಾಯವಾಗಿ ಹೋಗುತ್ತಿತ್ತು. ಅಂತೂ ನಿರ್ಭಾಗ್ಯೆಯಾದ—ದುರ್ದೈವಿಯಾದ ಜಲಜಮ್ಮ ಈಗ ವಿಧವಾರೂಪಧಾರಿಣಿ! ಪಾಪ! ನಾಲ್ಕು ಮಕ್ಕಳ ತಾಯಿ! ಚಿಕ್ಕ ಚಿಕ್ಕ ಮಕ್ಕಳು.

ತಿಮ್ಮಣ್ಣನಿಗೆ ಪಿತೃವಿಯೋಗವಾಗುವಾಗ ಕೇವಲ ಹನ್ನೊಂದು ವರ್ಷ. ಉಳಿದವರು ಹೇಗೂ ಅವನ ತಮ್ಮ-ತಂಗಿಯರು! ಜಲಜಮ್ಮನು ಈ ಕಠಿನ ವಾದ ಇಕ್ಕಟ್ಟಿನಲ್ಲಿ ಸಿಕ್ಕಿಬಿದ್ದಿದ್ದಳು. ಪದ್ಮನಾಭೈಯು ಆಗ ತಾನೇ ತಮ್ಮೊಳಗೆ ವಿಭಾಗಮಾಡಿಸಿಟ್ಟು ಹೋಗಿದ್ದರಲ್ಲವೆ? ಜಲಜಮ್ಮನಿನ್ನು ಕಟ್ಟೆಬೆಟ್ಟಿನಿಂದ ಮಳ್ಳಿಮಾಡಿ ಗುಡಿಸಲಿಗೆ ಹೋಗಬೇಕಾಗಿತ್ತು.

ಅಯ್ಯೋ! ಕಟ್ಟೆಬೆಟ್ಟಿನಲ್ಲಿ ಅವಳು ಎಷ್ಟು ಕಷ್ಟಪಟ್ಟಿದ್ದಳು! ರಟ್ಟೆ ನೋಯಿಸಿ ಎಷ್ಟು ಬೆಳೆಸು ಬೆಳೆಸಿದ್ದಳು! ತಮ್ಮ ಉಪಯೋಗಕ್ಕೆ ಸಿಕ್ಕಬಹು ದೆಂಬ ಭರವಸೆಯಿಂದ ಪದ್ಮನಾಭೈಯನೂ ಜಲಜಮ್ಮನೂ ಕೂಡಿ, ತೆಂಗು-ಕಂಗು-ಬಾಳೆ-ತರಕಾರಿ ಮುಂತಾದುವುಗಳಿಗಾಗಿ ಅದೆಷ್ಟು ಮಣ್ಣಿನೊಡನೆ ಹೋರಾಡಿದ್ದರೋ-! ಅದೆಷ್ಟು ರಾತ್ರಿಯಲ್ಲಿ ಕೂಡಾ ನೀರನ್ನು ಸೇದಿ ಹೊತ್ತು ಹಾಕಿ ಸಾಕಿದ್ದರೋ! ಅದೆಲ್ಲವನ್ನು ಹಾಗೇ ಬಿಟ್ಟುಗೊಟ್ಟು ಬೇರೆಯೇ

ಒಕ್ಕಲು ಹೋಗಬೇಕೆಂದರೆ ಅದೆಷ್ಟು ವೇದನೆಯಾಗದು?....ಆ ಮಚ್ಚೀ ಮಾಡಿ ಗುಡಿಸಲೋ! ತೀರ ಮುರುಕು! ಅದನ್ನಿನ್ನು ವಾಸ ಯೋಗ್ಯ ವನ್ನಾಗಿ ಮಾಡಬೇಕಾಗಿದೆ. ಇದರ ಮೇಲೆ ಐನೂರು ರೂಪಾಯಿಯ ಸಾಲ. ಹುಟ್ಟುವಳಿ ಸರಿಯಾಗಿ ಬಾರದಂತಹ ಒಂದು ಪುಟ್ಟ ಆಸ್ತಿಯ ತುಂಡು. ಪಾಪದ ಹೆಂಗುಸೆಂದು ಸಹಾಯ ಮಾಡುವವರಾರು? ಬದಲಾಗಿ ಸಾಲ ವನ್ನು ಕೊಟ್ಟಿರುವ ಆ ದೊಡ್ಡ ದೊಡ್ಡ ಧನಿಕರು ಅವಳ ಆ ದಾರುಣ ಪರಿಸ್ಥಿ ತಿಯನ್ನು ನೋಡಿ—"ಭೇಷ್! ಮುಖ್ಯ ಸಂಪಾದನೆ ಮಾಡಿ ಕೊಡಬಲ್ಲವನು ಹೋಗಿಯೇ ಹೋದ! ಇನ್ನೇನಿದೆ? ನಮ್ಮ ಸಾಲವನ್ನು ಆ ಪಾಪದ ಒಂಟಿ ಹೆಂಗುಸು ಕೊಟ್ಟು ತೀರಿಸುವುದುಂಟೆ? ಹೋಗಲಿ, ಬಡ್ಡಿಯಾದರೂ ಕೊಟ್ಟಾಳೆ? ಹೇಗೆ? ಎಲ್ಲಿಂದ? ಮಕ್ಕಳೆಲ್ಲಾ ಸಣ್ಣ ಪುಟ್ಟಂಗಳು! ಹುಟ್ಟು ವಳಿ ಟಿಟ್ಟಿಟ್ಟಿ! ಹಾಗೂ ಹೀಗೂ ಏನಾದರೂ ಜಾರಿ ಬಂದರೆ ಅವಳ ಗಂಜಿಗೂ ಅರುವೆಗೂ ಬೇಕಲ್ಲಾ! ಅಂದ ಮೇಲೆ ನಮಗೇನು ಕೊಡುತ್ತಾಳೆ? ಇನ್ನು ನಮಗಿರುವುದೊಂದೇ ದಾರಿ; ಕಾಲ ತಾಮಸಮಾಡದೆ ಅವಳ ಆ ಪುಟ್ಟ ಆಸ್ತಿಯನ್ನೇ ಹಿಡಿದುಕೊಳ್ಳಬೇಕು. ಪಾಪ! ಅವಳಾದರೂ ಏನು ಮಾಡಿ ಯಾಳು?—" ಎಂದು ಪರಮ ಕರುಣಾಶಾಲಿಗಳಂತೆ ಲೆಕ್ಕಹಾಕುತ್ತಿದ್ದರು.

ಗಂಡನು ತೀರಿಹೋಗಿ ಕೆಲವು ತಿಂಗಳಾಗುವುದೊರಳಗೇ ಈ ಸಾಲಿ ಗರ ಶೂಲವು ಜಲಜಮ್ಮನನ್ನು ಚೆನ್ನಾಗಿ ನೋಯಿಸಿ ನಡುಗಿಸುವಂತೆ ರಿಜಿಸ್ತ್ರಿ ನೋಟೀಸುಗಳು ತಾಗಿದ್ದುವು! ಏನು ಮಾಡಿಯಾಳು? ಇರುವ ಆಸ್ತಿ—ಅದೂ ಅವರು ಬೊಂಬಾಯಿಗೆ ಹೋಗುವ ಏತತ್ಪೂರ್ವದಲ್ಲಿ ವಿಭಾಗಪತ್ರದ ಮೂಲಕವಾಗಿ ತಮ್ಮ ಮಕ್ಕಳಿಗಾಗಿ ಉಳಿಸಿಟ್ಟು ಹೋದ ಆ ಸಣ್ಣ ಆಸ್ತಿ, ಇನ್ನು ಸಾಲಿಗರ ಬಾಯಿಗೆ ಬೀಳುವಂತಾಯಿತೇ?—ಎಂದು ಜಲಜಮ್ಮ ಮಲಮಲನೆ ಮರುಗಿದಳು. ಯಾರೊಡನೆ ಹೇಳಿಕೊಳ್ಳುವಳು? ಶ್ರೀ ಮದ್ರಾಮಾಯಣನೊಡನೆ ಹೇಳಿಕೊಂಡರೆ ಏನಾದರೂ ಉಪಾಯವನ್ನು ಹೇಳಿಯಾನೆ? ಅವನಿಗೆ ಹೇಗೂ ಪದ್ಮನಾಭೈಯ ಬಹಳ ಉಪಕಾರವನ್ನು ಮಾಡಿರುವರು. ಅವರ ಮರಣ ವಾರ್ತೆಯನ್ನು ಕೇಳಿ ಅವನಿಗೆ ಮೂರು ದಿನ ಆಹಾರವೇ ಸೇರಲಿಲ್ಲ. ಈಗ ಅವನು ರಜೆಯಲ್ಲಿ ಊರಿಗೆ ಬಂದಿ ದ್ದಾನೆ. ಪದ್ಮನಾಭೈಯ ತೀರಿಹೋಗಿ ಎಂಟು ತಿಂಗಳಾಗಿತ್ತು.

ಪಾಪ! ಜಲಜಮ್ಮ ಅವನ ಮುಂದೆ ತನ್ನ ದುಃಖವನ್ನು ತೋಡಿ ಕೊಂಡಳು. ಅವನು ಅವಳಿಂದ ಬಾಡಿಗೆಯನ್ನು ವಸೂಲುಮಾಡಿಕೊಳ್ಳದೆ

ರಶೀದಿಯನ್ನು ಬರೆದುಕೊಟ್ಟುದಲ್ಲದೆ, ಅವಳಿಗೊದಗಿದ ಸಂಕಟಕ್ಕಾಗಿ ತಾನೂ ತುಂಬ ಮರುಗಿದನು. ಆಗ ಜಲಜಮ್ಮ—„ಶ್ರೀಮದ್ರಾಮ, ಈ ಸಾಲದ ಬಲೆಯಿಂದ ಆಸ್ತಿಯನ್ನು ಉಳಿಸಿಕೊಳ್ಳಲಿಕ್ಕೆ ಏನಾದರೂ ಉಪಾಯ ವಿಲ್ಲವೆ?„ ಎಂದು ಕೇಳಿದಳು.

ಶ್ರೀಮದ್ರಾಮಾಯಣನು ಸ್ವಲ್ಪ ಹೊತ್ತು ಯೋಚನೆ ಮಾಡಿ,— “ಚಿಕ್ಕಮ್ಮ! ನಿನ್ನ ಆಭರಣಗಳಿಲ್ಲವೆ? ಇಂತಹ ಇಕ್ಕಟ್ಟಿನ ಸಮಯದಲ್ಲಿ ಅದ ನ್ನೆಲ್ಲಾ ಇಟ್ಟು ಚೆಂದ ನೋಡುವುದಕ್ಕಿಂತಲೂ ಮಾರಿಬಿಡುವುದು ಲೇಸು.” ಎಂದೊಂದು ಸೂಚನೆ ಕೊಟ್ಟನು.

“ಅಂಥ ಆಭರಣ ಏನಿದೆ ಮಣ್ಣು? ಮಾರಿದರೆ ಒಂದು ನೂರೈವತ್ತು ರೂಪಾಯಿ ಬಂದೀತು!”

ಚಿಕ್ಕಮ್ಮ ಇನ್ನೊಂದು ನೋಡು. ನಿಮ್ಮ ಪಾಲಿಗೆ ಕಟ್ಟೇಬೆಟ್ಟಿನ ಕುಮೇರಿಯ ತುಂಡು ಬಂದಿದೆಯಷ್ಟೆ? ಅದು ನಿಮ್ಮ ಮಳ್ಳೆಮಾಡಿಗೆ ಬಹು ದೂರ. ಅದನ್ನು ಮಾರುವುದಾದರೆ ಅದರ ಲಗ್ತಿಯಲ್ಲಿರುವ ಅಕ್ಕತ್ತೆ ತೆಗೆದು ಕೊಂಡಾಳು.”

“ಹೌದು. ಆ ಒಂದು ಎಕರೆ ಬೋಳು ಜಾಗೆಗೆ ಎಷ್ಟು ಕ್ರಯ ಬಂದೀತು ಮಹಾ?”

“ನೂರು ನೂರಿಪ್ಪತ್ತು ಬಂದಿತೋ ಏನೋ!”

“ಆಯಿತು. ಅಷ್ಟಕ್ಕೂ ಸಾಲ ಮುಗಿಯುತ್ತದೆಯೇ?”

ಶ್ರೀಮದ್ರಾಮಾಯಣನು ಪುನಃ ಯೋಚನೆ ಮಾಡುತ್ತಿದ್ದನು. ಆಗ ತಿಮ್ಮಣ್ಣನು ಶಾಲೆಯಿಂದ ಮನೆಗೆ ಬಂದನು. ಅವನನ್ನು ನೋಡಿ ಜಲಜಮ್ಮ “ಶ್ರೀಮದ್ರಾಮ, ಇನ್ನೊಂದು ಯೋಚನೆ; ಈ ತಿಮ್ಮಂದು, ಹೇಳು ಈ ಸ್ಥಿತಿ ಯಲ್ಲಿ ಇವನಿಗೆ ಮುಂದೆ ಮುಂದೆ ಕಲಿಸಲು ನನ್ನಿಂದಾದೀತೆ? ಈಗಲೇ ತಿಂಗಳಿಗೆ ನಾಲ್ಕು ನಾಲ್ಕಾಣೆ ಶಾಲೆಗೆ ಸಂಬಳ ಕೊಡುವುದೇ ನನಗೆ ಕಷ್ಟ ವಾಗಿದೆ. ಇನ್ನು ಪುಸ್ತಕ ಪೆನ್ಸಿಲಿಗೆಲ್ಲಾ ಎಲ್ಲಿಂದ ತರಲಿ? ಅಲ್ಲಿ ಇಲ್ಲಿ ಬೊಜ್ಜಕ್ಕೋ ಸಮಾರಾಧನೆಗೋ ಮದುವೆಗೋ ಹೋಗುವವರೊಂದಿಗೆ ಹೋಗೋ—ಎರಡಾಣೆ ದಕ್ಷಿಣೆ ಸಿಕ್ಕಿದರೆ ಉಪ್ಪು ಮಣಸಿಗಾದರೂ ಆದೀತ ಲ್ಲಾಂತ ಅಂದರೆ ಭಾರೀ ಮರ್ಯಾದೆವಂತನ ಹಾಗೆ ಮಾಡ್ತಾನೆ! ದೊಡ್ಡ ರಾಯ್ರ ಹಾಗೆ ಹೇಳಿಕೆ ಇಲ್ಲದ ಊಟಕ್ಕೆ ಹೋಗೋದಿಲ್ಲಾ ಅಂತಾನೆ!

"ಹೌದು ಚಿಕ್ಕಮ್ಮ. ಬೊಜ್ಜ-ಬೊಳಂಬಿಗೆಲ್ಲ ಹೋದರೆ ಯಾತಕ್ಕೂ ಬಾರದವಾ ಅಂತ ಆಗುತ್ತದಲ್ಲ? ಬೊಜ್ಜ ತಿನ್ನಲಿಕ್ಕಾದಾನು!—ಎಂಬ ಮಾತು ಕೇಳಿಲ್ಲವೆ? ನಮ್ಮ ತಿಮ್ಮ ಅಂಥವನಲ್ಲ ಚಿಕ್ಕಮ್ಮ!"—ಎಂದು ಶ್ರೀಮದ್ರಾಮನೆಂದನು.

"ಮತ್ತೆಂಥವನೋ ಮಹಾ! ಆಚೆಮನೆ ರಾಮು, ಗಚ್ಚಿನ ಕಿಟ್ಟಯ್ಯ ಇವರೆಲ್ಲ ಹೋಗುವಾಗ, ಊಟ ಉಂಟು ತಿಮ್ಮಾ ಬರ್‍ತ್ಯಾ? ದಕ್ಷಿಣೆ ನಾಕಾಣೆ ಸಿಕ್ಕೀತು, ಅಂತ ಅವರು ನಮ್ಮನೇ ಅಂಗಳಕ್ಕೆ ಬಂದು ಕರೆದರೂ ಇಂವ ನಾಬರೋದಿಲ್ಲಾ ಅಂತಾನೆ!" ಜಲಜಮ್ಮನೆಂದಳು.

"ಅದೆಲ್ಲ ಬೇಡ ಚಿಕ್ಕಮ್ಮ. ಹಾಗೆಲ್ಲ ತಿರುಗಿ ತಿನ್ನುವುದು ಚಂದವೂ ಅಲ್ಲ. ನಾನು ಹೇಳುವುದು ಕೇಳು ಚಿಕ್ಕಮ್ಮ. ವಿದ್ಯೆ ಕಲಿಸುವುದಾದರೆ ಇವನಿಗೆ ಮುಂದಿನ ವರೆಗೆ ಸರಿಯಾಗಿ ಕಲಿಸಬೇಕು. ಇಲ್ಲದಿದ್ದರೆ ಇಲ್ಲಿಗೇ ನಿಲ್ಲಿಸಿಬಿಡಬೇಕು. ನಿನಗೆ ಹಾಗೆ ಸರಿಯಾಗಿ ಕಲಿಸಲು ಸಾಧ್ಯವುಂಟೆ?— ಇಲ್ಲ. ಅಲ್ಲದೆಸುಮ್ಮನೆ ಶಾಲೆಯಲ್ಲಿಯೂ ಕೊಲೇಜಿನಲ್ಲಿಯೂ ಕಲಿತು ಕಲಿತು ಮಾಡುವುದೇನು? ಕಲಿತು ಕಲಿತು ಗುಡ್ಡೇ ಹಾಕಿದ ದೊಡ್ಡ ದೊಡ್ಡ ಬಿ. ಎ. ಎಂ. ಎ.ಗಳ ಕತೆ ಕೇಳುತ್ತಾ ಇದ್ದೇವಲ್ಲಾ!" ಎಂದು ಶ್ರೀಮದ್ರಾಮನು ತಿಮ್ಮನನ್ನು ನೋಡಿ,—"ಏನೋ ತಿಮ್ಮ! ಕನ್ನಡ ಓದಲಿಕ್ಕೂ, ಬರಿಯ ಲಿಕ್ಕೂ, ಇಂಗ್ಲಿಷಿನಲ್ಲಿ ಒಂದಿಷ್ಟು ಎಡ್ರಸ್ಸು ಬರಿಯಲಿಕ್ಕೂ ಬರುತ್ತಷ್ಟೇ ನಿನಗೆ?"

"ಓ ಬರುತ್ತಣ್ಣ!—" ಎಂದು ಹುರುಪಿನಿಂದಂದನು ತಿಮ್ಮ.

"ಈಗ ನಾಲ್ಕನೇ ಕ್ಲಾಸಿನಿಂದ ಐದನೇ ಕ್ಲಾಸಿಗೆ ಬಿದ್ದಿದ್ದಾನೆ. ಅವರಿರುವಾಗ ಹೇಳುತ್ತಾ ಇದ್ದರು—ತಿಮ್ಮೂಗೆ ಮಾತ್ರ ಚೆನ್ನಾಗಿ ಕಲಿಸಬೇಕು, ಕಲಿಯುವುದರಲ್ಲಿ ಇಂವ ಗಟ್ಟಿಗಾ ಆದಾನು ಅಂತ. ಅಲ್ಲದೆ ಇವನಿಗೆ ಚಿತ್ರ ಬಿಡಿಸೋದು, ಕವಿ ಮಾಡೋದು, ಕತೆ ಕಟ್ಟೋದು ಇಂಥಾದ್ದರಲ್ಲೆಲ್ಲಾ ಭಾಳ ಉಮೇದು. ಅದಕ್ಕೆ ತಕ್ಕ ಹಾಗೆ ಕಲಿತರೆ......"—ಜಲಜಮ್ಮನೆಂದಳು.

"ಅದೆಲ್ಲಾ ಸುಮ್ಮನೆ ಚಿಕ್ಕಮ್ಮ! ಚಿತ್ರ-ಕವಿತೆ-ಕತೆ ಇದೊಂದೂ ಹೊಟ್ಟೆ ತುಂಬಿಸುವುದಿಲ್ಲ. ಬರಿಯ ಹುಚ್ಚು! ಈಗ ಮುಖ್ಯ ಹಣ ಗಳಿಸುವ ದಾರಿ ಯಾವುದಂತ ಹುಡುಕಬೇಕು."

"ಹೌದು. ಶಾಲೆಬಿಟ್ಟು ಮನೇಲಿ ಕೂತು ಏನು ಮಾಡಬೇಕಂತ?"

"ನೀನು ಧೈರ್ಯಮಾಡಿ ಇವನನ್ನು ನನ್ನೊಂದಿಗೆ ಕಳಿಸುತ್ತಿಯಾ? ಜಾಂಬಳಿ ಅರಸರ ಮನೆಯಲ್ಲಿ ಸೇರಿಸಿಬಿಡುತ್ತೇನೆ."

ಜಲಜಮ್ಮ ಆಶ್ಚರ್ಯದಿಂದ—"ಇಷ್ಟು ಚಿಕ್ಕವನ್ನೆ? ಇನ್ನೂ ಹನ್ನೆರಡು ವರ್ಷ ತುಂಬಿಲ್ಲ!"

"ಚಿಂತೆಯಿಲ್ಲ ಚಿಕ್ಕಮ್ಮ. ಅರಸುಗಳು ತುಂಬ ಒಳ್ಳೆಯವರು! ಇವನನ್ನು ಅಲ್ಲಿ ಕೆಲಸಕ್ಕಿಟ್ಟರೆ, ಅವರು ಒಂದಿನ್ನೂರು ರೂಪಾಯಿ ಮುಂಗಡ ಕೊಟ್ಟಾರು. ಒಂದೇ ಸಾರಿ ಸಾಲ ಪೂರಾ ಸಪಾಯಿ ಮಾಡಿಬಿಡಬಹುದು."

"ಇಷ್ಟು ಸಣ್ಣ ಹುಡುಗನಿಂದೇನಾದೀತು? ಏನು ಸಂಬಳ ಕೊಟ್ಟಾರು? ಇನ್ನೂ ಉಣ್ಣಲಿಕ್ಕೆ ಗೊತ್ತಿಲ್ಲದ ಮಂಗಾಟದ ಹುಡುಗನಿಂದ ಏನಾದೀತು?"

ಅದರ ಚಿಂತೆ ನಿನಗೆ ಬೇಡ ಚಿಕ್ಕಮ್ಮ. ನಾನೂ ಅಲ್ಲೀ ಇರ್ತೇನಲ್ಲ. ಕೆಲಸ ಗಿಲಸ ಏನೂ ಇವನು ಮಾಡಬೇಕಂತಿಲ್ಲ. ಏನೋ ಆ ಅರಸುಗಳ ಹತ್ತಿರವೇ ಇವನಿದ್ದರಾಯಿತು. ಏನೋ ತಾ–ಬಾ–ಇಡೂ–ತೆಗೀ–ಅಂತ ಚಿಲ್ರೆ ಪಲ್ರೆ ಕೆಲಸ ಹೇಳ್ಯಾರು. ಪರಿಚಾಕರಿಗೆ ಒಬ್ಬ ಸಣ್ಣ ಹುಡುಗ ಬೇಕು--ತಿಂಗಳಿಗೆ ಐದು ರೂಪಾಯಿ ಕೊಡಬಹುದು ಅಂತ ಅವರು ನನ್ನ ಹತ್ತಿರ ಹೇಳಿದ್ದರು. ಉಣಲಿಕ್ಕೆ ತಿನ್ನಲಿಕ್ಕೆ ಏನೂ ಕಡಮೆಯಿಲ್ಲ. ತಮ್ಮ ಸ್ವಂತ ಮಕ್ಕಳ ಹಾಗೆ ನೋಡಿಕೊಳ್ತಾರೆ. ಹಾಗೆಯೇ ಇವನಿಗೆ ಅಭ್ಯಾಸವಾಗಿ ಬಿಟ್ಟರೆ ಮುಂದೆ ಸಂಬಳವೂ ಹೆಚ್ಚಾಗುತ್ತದೆ."

ತಿಮ್ಮಣ್ಣ ಇದನ್ನೆಲ್ಲ ಕೇಳುತ್ತ ಅಲ್ಲಿಯೇ ನಿಂತಿದ್ದನು. ಶ್ರೀಮದ್ನಾರಾಯಣನು ಅವನನ್ನು ನೋಡಿ "ಆಗದೇನೊ? ಬರುತ್ತಿಯಾ ನನ್ನೊಂದಿಗೆ ಸಂಪಾದನೆಗೆ?" ಎಂದು ಕೇಳಿದಾಗ ಅವನು "ಆಗದೇನು?" ಎಂದು ತಾಯಿಯನ್ನೂ ಅಣ್ಣನನ್ನೂ ಮಿಕಿಮಿಕಿ ನೋಡಿದನು. ಆ ಪ್ರಾಯದಲ್ಲಿ ಅವನು ಮತ್ತೇನು ತಾನೇ ಮಾಡಬಲ್ಲನು? ಆ ವರೆಗೆ ರೈಲುಗಾಡಿಯನ್ನು ಕುರಿತು ಕಿವಿಯಿಂದ ಕೇಳಿದ್ದನಷ್ಟೆ. ತಂತೀಕಂಬೀ ಮೇಲೆ ರೈಲು ಹೋಗುತ್ತದೆಂದು ಕೇಳಿ, ತಂತೀ ಸರಿಗೇ ಮೇಲೆ ಹೋಗುವ ಅಂಥಾ ಗಾಡಿ ಅದೆಂಥಾ ಗಾಡಿಯೋ ಎಂದು ತನ್ನೊಳಗೆ ತಾನೇ ಆಶ್ಚರ್ಯ ಪಟ್ಟುಕೊಂಡಿದ್ದನು. ಅಂತಹ ವಿಚಿತ್ರವಾದ ವಾಹನವನ್ನೇರಿಕೊಂಡು ಹೋಗುವ ಪ್ರಸಂಗವು

ಬರುವುದನ್ನು ನೋಡಿ, ಅವನು ಸಂತೋಷವನ್ನೇ ಪಟ್ಟನೆಂದರೆ ಏನೂ ಆಶ್ಚರ್ಯವಿಲ್ಲ.

ಅಯ್ಯೋ ಪಾಪ! ಬಡತನದಷ್ಟು ಕ್ರೂರವಾದುದು ಮತ್ತಾವುದೂ ಇಲ್ಲ. ಅದು ಕೊಂಚವೂ ದಯಾವಾರ್ದವಿಲ್ಲದುದು. ಅತ್ಯಂತ ಶ್ರೇಷ್ಠವಾದ ಮಾತೃಪ್ರೇಮವನ್ನು ಕೂಡಾ ಮೆಟ್ಟಿನಿಲ್ಲುವಂತಹುದು! ಅಂತಹ ಕಟುಕ್ರೂರವಾದ ಬಡತನದ ಕಠಿಣ ಕಾವಿನಿಂದಾಗಿ ಜಲಜಮ್ಮ ಶ್ರೀಮದ್ರಾಮಾಯಣನ ಸಲಹೆಗೆ ಒಪ್ಪಿದಳು. ಹೆತ್ತಮಗ ಹನ್ನೆರಡೇ ವರ್ಷದ ಹುಡುಗನನ್ನು ದೂರ ದೇಶಕ್ಕೆ—ನಾಲ್ಕೈದು ರೂಪಾಯಿ ಸಂಬಳ ಸಿಕ್ಕಿದರೂ ಅಷ್ಟಾದರೂ ಆಯಿತಲ್ಲ ಎಂಬ ಕನಿಕರವಾದ ಪರಿಸ್ಥಿತಿಯಿಂದ ಭಾಷೆಬಾರದ ದೇಶಕ್ಕೆ ಕಳುಹಿಸಿ ಕೊಡುವ ಕಲ್ಪನವನ್ನು ತಾಳಿದಳು ಆ ಬಡತನದಿಂದ ಬಾಳಲಾಗದೆ! ತನ್ನೊಂದಿಗೆ ಆರೆಗಂಜಿ ಕುಡಿದಿರುವುದಕ್ಕಿಂತಲೂ, ಪುಣ್ಯಾತ್ಮರಾದ ದೊಡ್ಡವರ ಚಾಕರಿಯಾದರೂ ಮಾಡಿ, ಎರಡು ದುಡ್ಡು ಸಂಪಾದಿಸುತ್ತ, ಹೊಟ್ಟೆತುಂಬಾ ತಿಂದುಂಡು ಸುಖವಾಗಿರಲಿ ಎಲ್ಲಿಯಾದರೂ, ಎಂಬ ಹರಕೆಯ ಮನದಿಂದ ತಿಮ್ಮಣ್ಣನನ್ನು ಕಳುಹಿಸಿಕೊಡಲು ಸಿದ್ಧಳಾದಳು ಜಲಜಮ್ಮ. ಶ್ರೀಮದ್ರಾಮಾಯಣನು ಒಂದು ತಿಂಗಳು ರಜೆ ಮುಗಿದು ಹಿಂದಿರುಗಿ ಹೋಗುವಾಗ ತಿಮ್ಮಣ್ಣನನ್ನು ಅವನೇ ರೈಲುಚಾರ್ಜು ವಹಿಸಿಕೊಂಡು ಕರೆದೊಯ್ಯುವುದೆಂದು ಗೊತ್ತಾಯಿತು.

ಇನ್ನೆರಡು ತಿಂಗಳಲ್ಲಿ ಪದ್ಮನಾಭಯ್ಯನ ವರ್ಷಾಂತಿಗ. ಆದರೆ ಶ್ರೀಮದ್ರಾಮಾಯಣನು ಅದುವರೆಗೆ ವ್ಯರ್ಥವಾಗಿ ನಿಲ್ಲುವನಲ್ಲ. "ವರ್ಷಾಂತಿಗವನ್ನು ತಿಮ್ಮಣ್ಣನಿಂದ ಅಲ್ಲಿಯೇ ಮಾಡಿಸುವ ಏರ್ಪಾಡು ಮಾಡುವೆನು" ಎಂದು ಶ್ರೀಮದ್ರಾಮಾಯಣನು ಭರವಸೆಕೊಟ್ಟನು. ಜಲಜಮ್ಮ "ಸರಿ" ಎಂದು ತಲೆ ಆಡಿಸಲೇ ಬೇಕಾಯಿತು!

ಆಯಿತು! ಇಲ್ಲಿಗೆ ತಿಮ್ಮಣ್ಣನ ಬಾಲಲೀಲಾ ಶಾಲಾ ವಿಲಾಸಗಳು ನಿಂತುಹೋದುವು! ಗೊತ್ತಾದ ದಿನದಲ್ಲಿ ಅವನು "ಪರಿಚಾರಿಕ ಮಾಣಿ" ಯಾಗಿ ಶ್ರೀಮದ್ರಾಮಾಯಣನೊಂದಿಗೆ ಜಾಂಬಳೆಗೆ ಹೊರಟನು!

"ಕನ್ನಡ ಚೆಲ್ನುಡಿ ಉನ್ನತಿಗೇರಲಿ!"

ರಾಣಿ ಅಜ್ಞಾತಾ, ಇಂದ್ರಜಾಲ, ಮಹೇಂದ್ರಜಾಲ, ಪತಿ, ಸತ್ಸೇವೆಯೇ ಮೊದಲಾದ ಕಾದಂಬರಿಗಳಿಂದ ಶ್ರೀ। ನವಗಿರಿನಂದರು ಕನ್ನಡಿಗರಿಗೆ ಚಿರಪರಿಚಿತರಾಗಿರುವರು.

ಸದ್ಯ: ಮಕ್ಕಳ ಪ್ರಸಿದ್ಧ ಪತ್ರಿಕೆಯಾಗಿರುವ ಚಂದಮಾಮದ ಸಂಪಾದಕರಾಗಿ ಮಾರಂಗ ಎಂಬ ಹೆಸರಿನಿಂದಲೂ ಬರೆಯತೊಡಗಿದ್ದಾರೆ. ಮಾದರಬೆಟ್ಟು ರಂಗರಾಯರೇ ನವಗಿರಿನಂದರಾಗಿ ಕನ್ನಡಿಗರ ಪರಿಚಿತರಾದ ವ್ಯಕ್ತಿಗಳಾಗಿರುವರು.

ಅವರ ಈ ಮೊದ್ದು ಮಗು ಹೊಸತೊಂದು ಮಾದರಿಯ ಕಾದಂಬರಿ. ಹಳ್ಳಿಯಲ್ಲಿ ಹಾಸುಹೊಕ್ಕಾಗಿರುವ ವ್ಯಕ್ತಿಗಳ ಕತೆ ರೂಪಗೊಂಡು ಹಾಸ್ಯರಸ ಪ್ರಧಾನವಾಗಿ ರಸಿಕರು ಮೆಚ್ಚುವಂತಿದೆ ಈ ಕೃತಿ. ಉತ್ತಮ ಕೃತಿಗಳಲ್ಲಿ ಇದೂ ಒಂದೆಂದು ಧಾರಾಳವಾಗಿ ಹೇಳಬಹುದು.

**ಪ್ರಕಾಶಕರು:**

ವಿವೇಕ ಸಾಹಿತ್ಯಮಾಲೆ

**ಮಂಗಳೂರು-3**

ಹೊದಿಕೆಯ ಮುದ್ರಣ ಮತ್ತು ಬ್ಲೋಕ್ — ಶಾರದಾ ಛಾಪಖಾನೆ, ಮಂ